ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ



# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

₹ 75

'ನಿವೇದಿತಾ'
ವಿಶೇಷ ಸಂಚಿಕೆ

ಜನವರಿ 2017

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ)

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.
ಎಂ.ಎಲ್.ಹಳ್ಳಿ, ಸಾಗರ ತಾಲೂಕು
ಶಿವಮೊಗ್ಗ ಜಿಲ್ಲೆ
ಫೋನ್: 08183-296516

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ
ಪ್ರವಾಸಿ ಮಂದಿರ ಹತ್ತಿರ,
ಹೊಸನಗರ-577418
ಶಿವಮೊಗ್ಗ ಜಿಲ್ಲೆ
ಫೋನ್: 08185-221915



ಮಾನ್ಯ ವಿದ್ಯಾಕಾಂಕ್ಷಿಗಳೇ.

"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸ ಖಂಡಗಳು ಮತ್ತು ಉಕ್ಕಿನಂತಹ ನರಗಳು. ನಾವು ಬಹಳ ಕಾಲ ಅತ್ತಿದ್ದೇವೆ. ಇನ್ನು ಮುಂದೆ ಅಳುವುದು ಬೇಡ. ನಿಮ್ಮ ಕಾಲ ಮೇಲೆ ನೀವು ನಿಂತುಕೊಂಡು ಮನುಷ್ಯರಾಗಿ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣದ ಧರ್ಮ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣ ಸಿದ್ಧಾಂತಗಳು. ಸಮಗ್ರ ಮಾನವ- ನಿರ್ಮಾಣದ ಶಿಕ್ಷಣವೇ ನಮಗಿಂದು ಬೇಕಾಗಿರುವುದು" ಎಂದು ಸ್ವಾಮಿ ವಿವೇಕಾನಂದರು ಬಹಳ ಹಿಂದೆಯೇ ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಸಚ್ಚಾರಿತ್ರ್ಯವುಳ್ಳ ಧೀಮಂತ, ವಿನಯವಂತ, ಸತ್ಪುರುಷರ ನಿರ್ಮಾಣವು ಸುಸಂಸ್ಕೃತ ಹಾಗೂ ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣದ ಮೂಲಕವೇ ಆಗಬೇಕಾಗಿದೆ.

ರಾಜ್ಯದಾದ್ಯಂತ ಬಂದಿರುವ ನೂರಾರು ಮಕ್ಕಳು ಇಲ್ಲಿ ಕಲಿಯುತ್ತಿದ್ದು, ಸಂಸ್ಥೆಯು ಅವರನ್ನು ಅಕ್ಕರೆಯಿಂದ, ಮಮತೆಯಿಂದ, ಪೋಷಿಸಿ ಹೃದಯವರಳಿಸಿ, ಅವರ ಅಂತರಂಗದಲ್ಲಿ ಹುದುಗಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ, ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನಾಗಿ ರೂಪಿಸುತ್ತಿದೆ.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ವಿದ್ಯಾಸಂಸ್ಥೆಗಳು ಮಕ್ಕಳ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುತ್ತಿವೆ. ದೇಶದಾದ್ಯಂತ ಖ್ಯಾತಿ ಹೊತ್ತ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ, ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:-** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :-** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:-** ಎಲ್.ಕೆ.ಜಿ ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:-**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ.

5) **ವಸತಿ ಶಾಲೆಗೆ ಪ್ರವೇಶ:-**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ
* ಪ್ರವೇಶ ಪರೀಕ್ಷೆ, ಸಂದರ್ಶನವಿರುತ್ತದೆ
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿರುತ್ತದೆ
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಶಾಲೆಯನ್ನು ಸಂಪರ್ಕಿಸಿ
* ಹೆಚ್ಚಿನ ವಿವರ ಶಾಲೆಯಲ್ಲಿ ಲಭ್ಯ







# ವಿವೇಕಪ್ರಭ



ಜನವರಿ-2017 ಸಂಪುಟ 18 ಸಂಚಿಕೆ 01



 ಭಾಗ-೧ : ಜೀವನ ಮತ್ತು ಸಾಧನೆ 



 ಭಾಗ - ೨ : ನಿವೇದಿತಾ ಕೃತಿಗಳು 

 

## 'ವಿವೇಕಪ್ರಭ' ಪತ್ರಿಕೆಯ ಪೋಷಕರು



| | |
|---|---|
| ಡಾ. ಹರೀಶ್ ಭುಜಂಗ ನಾಯಕ್ | ಮಂಗಳೂರು |
| ಶ್ರೀ ರಾಜಗೌಡ ಡಿ. ಪಾಟೀಲ | ಕೆರೂರುವಾಡಿ |
| ಶ್ರೀ ಸಂತೋಶ್‌ಕುಮಾರ್ . ಪಾಟೀಲ | ಬೆಳಗಾವಿ |
| ಕುಮಾರಿ, ಉಷಾ ಟಿ.ಎನ್. | ಹುಳಿಯಾರು |
| ಶ್ರೀಮತಿ ವಾಣಿಶ್ರೀ ತಾನಾಜಿ ಶಿರಗುಂಪಿ | ರಾಯಬಾಗ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಹಿರೇಮುಗದೂರು |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ತೊಂಡೂರು |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಅರಳಿಕಟ್ಟೆ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಚಿನ್ನಳ್ಳಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಚಿನ್ನಮುಳಗುಂದ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಕಚವಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಮಕರಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಆಳದಗೇರಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಸುಟ್ಟಕೋಟಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಚಿಳ್ಳರಬಂಡಿ |


**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಆತ್ಮಜ್ಞಾನಂದ*

**ಸಂಪಾದಕರು**
*ಸ್ವಾಮಿ ಜ್ಞಾನಯೋಗಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

**ಮುಖಪುಟ:**
**ನಿವೇದಿತಾ**


**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


**E-mail:** mysuru.vivekaprabha@rkmm.org
**Website:** www.vivekaprabha.net
**ಫೋನ್ :** 9481533505





**ಚಂದಾ ವಿವರ**

**ಬಿಡಿ ಪ್ರತಿ :** ₹ 14
**ವಾರ್ಷಿಕ :** ₹ 140
**ಮೂರು ವರ್ಷ :** ₹ 375
**ಆಜೀವ** (25 ವರ್ಷ) : ₹ 3,000
**ಪೋಷಕರು :** ₹ 5,000 ಅಥವಾ ಹೆಚ್ಚು.
**ವಿದೇಶಗಳಿಗೆ :** (ಏರ್‌ಮೇಲ್)
**ವಾರ್ಷಿಕ :** $ 20; **ಮೂರು ವರ್ಷ :** $ 60
**ಆಜೀವ** (25ವರ್ಷ) : $ 300
**ಪೋಷಕರು :** $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳು ಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಪ್ರಾರ್ಥನೆ

## ಶ್ರೀರಾಮಕೃಷ್ಣ ಸುಪ್ರಭಾತಮ್ – ೩

**ವಿಶ್ವಾಸಭಕ್ತಿಯುತಸಂಸೃತಿತಾಪಭಾಜಾಮ್**
**ಆಶ್ವಾಸದಾಯಕದಯಾಮೃತವಾರಿರಾಶೇ ।**
**ವಿಶ್ವಾಭಿನಂದ್ಯಗುಣವಿಶ್ರುತದಿವ್ಯನಾಮನ್**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೭ ॥**

ಸಂಸಾರದ ತಾಪದಲ್ಲಿ ಬೇಯುತ್ತಿರುವ, (ಭಗವಂತನಲ್ಲಿ) ವಿಶ್ವಾಸ, ಭಕ್ತಿಯುಳ್ಳ ಜನರಿಗೆ ಭರವಸೆಯನ್ನು ನೀಡುವ ದಯಾಮೃತದಸಾಗರನೂ, ವಿಶ್ವವೆಲ್ಲವೂ ಮೆಚ್ಚುವ ಗುಣಗಳಿಂದ ಪ್ರಸಿದ್ಧವಾದ ದಿವ್ಯನಾಮವುಳ್ಳವನೂ ಆದ ಶ್ರೀರಾಮಕೃಷ್ಣ ಭಗವಂತನೆ, ನಿನಗೆ ಶುಭೋದಯವಾಗಲಿ.



**ವೀತಾಶಸರ್ವವಿಷಯೇಷು ಸದಾನಿತಾಂತ-**
**ಪೂತಾಂತರಂಗಜನಜಾಡ್ಯವಿನಾಶಕಾರಿನ್ ।**
**ಸ್ಫೀತಾತ್ಮಭೋಧ ವಿವಿಧಾಗಮತತ್ತ್ವವೇದಿನ್**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್ ॥ ೮ ॥**

ಪ್ರಾಪಂಚಿಕವಾದ ಯಾವ ಭೋಗದಲ್ಲೂ ಅಭಿಲಾಷೆಯಿಲ್ಲದಿರುವ, ಅತ್ಯಂತ ಪವಿತ್ರವಾದ ಅಂತರಂಗವುಳ್ಳ, ಜನರ ಜಡತೆಯನ್ನು ದೂರಮಾಡಿದ, ಆತ್ಮಜ್ಞಾನದಿಂದ ಪರಿಪೂರ್ಣನಾದ, ಅನೇಕ ವಿಧವಾದ ಶಾಸ್ತ್ರ ಆಗಮ)ಗಳ ತತ್ತ್ವವನ್ನು ಬಲ್ಲ ಶ್ರೀರಾಮಕೃಷ್ಣ ಭಗವಂತನೆ, ನಿನಗೆ ಶುಭೋದಯವಾಗಲಿ.

**ದಿವ್ಯಪ್ರಭಾವಲಯಿತಾನನಪಾದಭಾಜಾಮ್**
**ಭವ್ಯಪ್ರದಾನಪರಮುಕ್ತಿಪಥಪ್ರದಾಯಿನ್ ।**
**ಸ್ತವ್ಯಪ್ರಕೃಷ್ಟಮಹಿಮಾನ್ವಿತದಿವ್ಯಮೂರ್ತೇ**
**ಶ್ರೀರಾಮಕೃಷ್ಣಭಗವನ್ ತವ ಸುಪ್ರಭಾತಮ್॥ ೯ ॥**

ದಿವ್ಯಪ್ರಭೆಯ ಮಂಡಲದಿಂದ ಕೂಡಿದ ಶೋಭಿಸುತ್ತಿರುವ ಮುಖವುಳ್ಳ, ಪಾದವನ್ನಾಶ್ರಯಿಸಿದವರಿಗೆ ಭವ್ಯವಾದ ಫಲಗಳನ್ನು ಅನುಗ್ರಹಿಸುವ, ಶ್ರೇಷ್ಠವಾದ ಮುಕ್ತಿಮಾರ್ಗವನ್ನು ತೋರಿಸಿಕೊಟ್ಟಿರುವ, ಸ್ತುತಿಸಲು ಯೋಗ್ಯವಾದ ಶ್ರೇಷ್ಠ ಮಹಿಮೆಗಳಿಂದ ಕೂಡಿದ ದಿವ್ಯವಿಗ್ರಹಶರೀರವುಳ್ಳ ಶ್ರೀರಾಮಕೃಷ್ಣ ಭಗವಂತನೆ, ನಿನಗೆ ಶುಭೋದಯವಾಗಲಿ.

– ಸ್ವಾಮಿ ಜ್ಞಾನಾನಂದ ಸರಸ್ವತೀ

ಸೂಕ್ತಿಪ್ರಭ

## ನಿವೇದಿತಾ ಸೂಕ್ತಿಗಳು

- ಯಾರಿಗೆ ಪರಮಸತ್ಯದ ಸಾಕ್ಷಾತ್ಕಾರವಾಗಿರುವುದೋ ಅವರು ಮಾತ್ರ ಪ್ರಪಂಚವನ್ನೆಲ್ಲ ಪ್ರೀತಿಸಬಲ್ಲರು, ಮನುಷ್ಯನನ್ನು ಸಂಪೂರ್ಣ ನೆಚ್ಚಬಲ್ಲರು.

- ಧಾರ್ಮಿಕ ವಿಷಯದಲ್ಲಿ ನೀವು ಪಶ್ಚಿಮದಿಂದ ಸ್ವೀಕರಿಸಬೇಕಾದುದು ಏನೂ ಇಲ್ಲ, ನೀವೇ ಅವರಿಗೆ ಕೊಡಬೇಕಾದುದು ಬೇಕಾದಷ್ಟಿದೆ ಎಂಬುದು ಆಗಲೆ ವೇದ್ಯವಾಗಿರುವಂತೆ, ಸಾಮಾಜಿಕ ವಿಷಯದಲ್ಲಿಯೂ ಯಾವ ಬದಲಾವಣೆಗಳು ಆವಶ್ಯಕವೊ ಅವನ್ನು ಮಾಡಲು ನೀವೇ ಸಮರ್ಥರಿದ್ದೀರಿ, ಹೊರಗಿನವರಾರೂ ಈ ವಿಷಯದಲ್ಲಿ ಮಧ್ಯೆ ಪ್ರವೇಶಿಸಬೇಕಾಗಿಲ್ಲ ಎಂಬುದನ್ನು ತಿಳಿಯಿರಿ.



- ನನ್ನ ಮಟ್ಟಿಗೆ ಹೇಳುವುದಾದರೆ ಭಾರತವೇ ನನ್ನ ಯಾತ್ರೆಯ ಪ್ರಾರಂಭ ಸ್ಥಳ, ಅದೇ ನನ್ನ ಗುರಿ!

- 'ಭಾರತ' ಎಂಬ ಶಬ್ದದ ಅರ್ಥ, ಮತ್ತು ಪ್ರಪಂಚದಲ್ಲಿ ಭಾರತದ ಸ್ಥಾನ ಹಾಗೂ ಇದರೊಂದಿಗೆ ಭಾರತಭೂಮಿಯ ಮತ್ತು ಭಾರತ ಪ್ರಜೆಗಳ ಸೇವೆ ಮಾಡುವ ಪ್ರಬಲ ಆಕಾಂಕ್ಷೆ – ಇದೇ ಸ್ತ್ರೀಯರಿಗೆ ಶಿಕ್ಷಣವಸ್ತುವಾಗಬೇಕು. ಇದೇ ಶಿಕ್ಷಣದ ಕೇಂದ್ರವಾಗಬೇಕು.

- ಭಾರತ ಅತ್ಯಂತ ಸುಸಂಸ್ಕೃತ ದೇಶ. ಜಗತ್ತಿನ ಸಮಸ್ಯೆಗಳಿಗೆ ಪರಿಹಾರ ದೊರಕುವುದು ಅಲ್ಲೇ.

- ಹೇ ತಾಯಿ! ಸ್ವಾರ್ಥವನ್ನು ನಮ್ಮಿಂದ ದೂರಮಾಡು. ಕೀರ್ತಿ, ಸಂಪತ್ತು, ಸುಖ ಇವಾವುವೂ ನಮ್ಮ ಮೇಲೆ ಪ್ರಭುತ್ವ ಮಾಡದಿರಲಿ.

- ಭಾರತದ ಕನ್ಯೆಯರೆ, ನೀವೆಲ್ಲರೂ 'ಭಾರತ ವರ್ಷ, ಭಾರತವರ್ಷ, ಭಾರತವರ್ಷ!' 'ತಾಯಿ, ತಾಯಿ' ಎಂದು ಜಪ ಮಾಡಬೇಕು.

- ವರ್ತಮಾನ ಭಾರತ ಅದರ ಪ್ರಾಚೀನ ಸಂಸ್ಕೃತಿಯಲ್ಲಿ ಆಳವಾಗಿ ಬೇರುಬಿಟ್ಟಿದೆ, ಮತ್ತು ಮುಂದೆ ಭವ್ಯ ಭವಿಷ್ಯವು ಬೆಳಗುತ್ತಿದೆ.

## ಆಶೀರ್ವಾದ

ಬರಲಿ ಮಾತೆಯ ಹೃದಯ, ಧೀರ ಮಾನವನಿಚ್ಛೆ,
ದಕ್ಷಿಣದ ತಂಗಾಳಿ ಮಾಧುರ್ಯ ತುಂಬಿ;
ಸೆಳೆವ ಪಾವನ ಶಕ್ತಿಯೆದ್ದು ನಿಂದಿಹುದಾರ್ಯ
ಯಜ್ಞಕುಂಡದ ಜ್ಯೋತಿ, ಸ್ವಾತಂತ್ರ್ಯದಿಂದ;
ಎಲ್ಲವೂ ಬರಲಿ, ನಿನ್ನೆಡೆಗೆ ಬಲು ಪ್ರಾಚೀನ
ಜನರಾರು ಕಲ್ಪಿಸದ ಸದ್ಗುಣಗಳೆಲ್ಲ –

ಭಾರತದ ಮುಂಬರುವ ದಿವ್ಯಪುತ್ರಗೆ ಗೃಹಿಣಿ,
ದಾಸಿ, ಅಂತೆಯೆ ಗೆಳತಿ, ಎಲ್ಲ ನೀನಾಗು.

– ಸ್ವಾಮಿ ವಿವೇಕಾನಂದ

## ಮಂಡನ

ಸೋದರಿ ನಿವೇದಿತೆಯೆ, ಹೇ ಸಮಾಹಿತೆಯೆ,
ಭಾರತಾಂಬೆಯ ಚರಣಶ್ರೀ ಸಮರ್ಪಿತವಾದ
ಪಶ್ಚಿಮದ ಪರಿಮಳದ ಪುಷ್ಪವೇ, ಶಾರದಾ
ಸಂಪೂತೆಯೇ, ವಿವೇಕಾನಂದ ಗುರುವರ್ಯ
ಶಿಷ್ಯೋತ್ತಮೆಯೆ, ನಿನ್ನ ಹಾಗೆ ಮತ್ತಾರು ಈ
ಭಾರತದ ಆತ್ಮರಸ ಹಿಡಿದವರು? ಕಂಡವರು,
ಕಂಡರಿಸಿದವರು? ಮಂಡನವಾದೆ, ಎಲೆ ತಾಯಿ.
ಭಾರತ ಸ್ವಾತಂತ್ರ್ಯ ಕಣಕೆ ಸ್ಫೂರ್ತಿಯನಿತ್ತೆ!
ಬಾಹ್ಯಾಂತರಂಗದಲಿ ನೀನೌ 'ಮಹಾಶ್ವೇತೆ.'
ಘೋರ 'ಪ್ಲೇಗ್' ರುಜೆಯೊಡನೆ, ಅರಿತೆ ಭಾರತನಾರಿ–
ಯರ ಅವಿದ್ಯಾವ್ಯಾಧಿಯೊಡನೆ ನೀ ಹೋರಾಡಿ
ಹೆಸರಾದೆ, ಉಸಿರಾದೆ! ಎತ್ತಣಿಂದೆತ್ತ ಸಂ–
ಬಂಧ! ಭಗಿನಿಯ ಸ್ಥಾನದಲಿ ನಿಂದೆ! ಶ್ರೀವಿವೇ–
ಕಾನಂದರೊಡನೆ ನಿನ್ನನು ನೆನೆಯೆ, ನ್ಯಾಯವೇ!!

**ಡಾ. ಸಿ.ಪಿ.ಕೆ**

# ಹೊಸ ವರ್ಷದ ಹಾರ್ದಿಕ ಅಭಿನಂದನೆಗಳು – 2017

ಆತ್ಮೀಯರೇ,

ನವವರ್ಷದ ಪ್ರಾರಂಭದೊಂದಿಗೆ ಹೊಸ ಸಂಕಲ್ಪಗಳು, ಹೊಸ ಆಶಯಗಳು, ಹೊಸ ಹುರುಪು ನಿಮ್ಮ ಮನಃಪಟಲದಲ್ಲಿ ನಲಿದಾಡಲಿ. ಭಗವಂತನು ನಿಮ್ಮೆಲ್ಲರಿಗೂ ಆರೋಗ್ಯಭಾಗ್ಯವನ್ನೂ, ಶಾಂತಿ-ನೆಮ್ಮದಿಗಳನ್ನೂ ದಯಪಾಲಿಸಲಿ; ನಮ್ಮ ಈ ತಾಯ್ನಾಡಲ್ಲಿ ಸಮೃದ್ಧಿಯನ್ನೂ, ಪರಸ್ಪರ ಸೌಹಾರ್ದವನ್ನೂ ಕರುಣಿಸಲಿ ಎಂದು ಪ್ರಾರ್ಥಿಸುತ್ತೇವೆ.

‘ಭಗಿನಿ ನಿವೇದಿತಾ’, ‘ಲೋಕಮಾತೆ ನಿವೇದಿತಾ’ ಎಂದು ಪ್ರಸಿದ್ಧಳಾಗಿರುವ ಸ್ವಾಮಿ ವಿವೇಕಾನಂದರ ಧೀರ ಶಿಷ್ಯೆ ‘ಮಾರ್ಗರೆಟ್ ನೋಬಲ್’ಳ ೧೫೦ನೇ ಜನ್ಮದಿನ ೨೦೧೭ರ ನವೆಂಬರ್ ೨೮ ರಂದು ಆಚರಿಸಲ್ಪಡುತ್ತದೆ. ಭಾರತಕ್ಕೆ ಬಂದು, ಭಾರತೀಯತೆಯನ್ನು ಶ್ರದ್ಧೆಯಿಂದ ತನ್ನದಾಗಿಸಿಕೊಂಡು ಇಲ್ಲಿನ ಮಹಿಳೆಯರ ಹಾಗೂ ಸಮಾಜದ ಏಳ್ಗೆಗಾಗಿ ನಿರಂತರ ಪರಿಶ್ರಮಿಸಿದ ಈಕೆಯ ಜೀವನ ಅಸಾಮಾನ್ಯ , ಅನುಕರಣೀಯ. ಇಂದು ನಮ್ಮ ರಾಷ್ಟ್ರವನ್ನು ಪುನಃ ಎಚ್ಚರಗೊಳಿಸಬೇಕಾಗಿದೆ. ಆಧುನಿಕತೆಯ ರಭಸದಲ್ಲಿ ನಮ್ಮ ನಾಡಿನ ಉದಾತ್ತ ಪರಂಪರೆ, ಮೌಲ್ಯಗಳನ್ನು ನಾವು ಮಕ್ಕಳಿಗೆ ನೀಡದೆ ವಂಚಿಸುತ್ತಿದ್ದೇವೆ; ಅವರ ಭವಿಷ್ಯವನ್ನು ಕರಾಳಗೊಳಿಸುತ್ತಿದ್ದೇವೆ. ನಾವೆಲ್ಲ ಭಾರತದ ಪುನರುತ್ಥಾನಕ್ಕಾಗಿ ಕಂಕಣಬದ್ಧರಾಗಿ ದುಡಿಯೋಣ, ನಮ್ಮ ಸಮಾಜ ಹಾಗೂ ಎಲ್ಲ ಜನರ ತನುಮನಗಳಲ್ಲಿ ನವಚೇತನವನ್ನು ತುಂಬೋಣ.

‘ವಿವೇಕಪ್ರಭ’ ಪತ್ರಿಕೆಯ ಮೂಲಕ  ರಾಮಕೃಷ್ಣ-ವಿವೇಕಾನಂದರ ಸಮನ್ವಯ ವಾಣಿಯನ್ನು ಬಿತ್ತರಿಸುವಲ್ಲಿ ನಮ್ಮೊಂದಿಗೆ ಕೈಜೋಡಿಸಿರುವ ಎಲ್ಲ ಆಶ್ರಮಗಳಿಗೆ, ಸಂಸ್ಥೆಗಳಿಗೆ, ಸ್ವಯಂಸೇವಕರಿಗೆ, ಬಂಧುಮಿತ್ರರಿಗೆ, ಸಿಬ್ಬಂದಿ ವರ್ಗದವರಿಗೆ, ಜಾಹೀರಾತುದಾರರಿಗೆ, ಅಚ್ಚುಕಟ್ಟಾಗಿ ಮುದ್ರಿಸುತ್ತಿರುವ ಮುದ್ರಕರಿಗೆ, ಸರಕಾರಿ ಇಲಾಖೆಗಳಿಗೆ, ಅಂಚೆಕಛೇರಿಯವರಿಗೆ ಪ್ರೀತಿಯ ಧನ್ಯವಾದಗಳು. ತಮ್ಮೆಲ್ಲರ ಸಹಕಾರವು ನಮ್ಮ ಈ ನೆಚ್ಚಿನ ಪತ್ರಿಕೆಯನ್ನು ಮನೆ ಮನೆಗೆ, ಮನಮನಕ್ಕೆ ಮುಟ್ಟಿಸಲಿ ಎಂದು ಆಶಿಸುತ್ತೇವೆ. ನಿಮ್ಮ ಬೆಂಬಲ ಹಾಗೂ ಪ್ರೋತ್ಸಾಹವು ನಮಗೆ ಹೊಸ ಹೊಸ ಮೈಲಿಗಲ್ಲುಗಳನ್ನು ದಾಟುವಂತೆ ಮಾಡಲಿ.

ಜೈ ಭಾರತಮಾತೆ! ಜೈ ರಾಮಕೃಷ್ಣ!

ಭಗವತ್ಸೇವೆಯಲ್ಲಿ ತಮ್ಮ

ಸ್ವಾಮಿ ಆತ್ಮಜ್ಞಾನಂದ

ವ್ಯವಸ್ಥಾಪಕ ಸಂಪಾದಕರು

# ‘ಲೋಕಮಾತೆ’ ನಿವೇದಿತಾ

ಇಂದಿಗೆ ೧೫೦ ವರ್ಷಗಳ ಹಿಂದೆ ಪಶ್ಚಿಮದಲ್ಲಿ ಅರಳಿನಿಂತ ಸುಮವೊಂದು ಭಾರತಮಾತೆಯ ಪಾದಕಮಲಗಳಲ್ಲಿ ಸಮರ್ಪಿತ ವಾಯಿತು. ಶ್ವೇತಶುಭ್ರ ಹಿಮದಂತೆ ಹೆಪ್ಪುಗಟ್ಟಿದ ಪವಿತ್ರ ಭಾವನೆಗಳು ಸ್ವಾಮಿ ವಿವೇಕಾನಂದರ ಜ್ಞಾನಾಗ್ನಿಕುಂಡದಲ್ಲಿ ಕರಗಿ ಲಯವಾದವು. ಸೋದರಿ ನಿವೇದಿತಾ ಕೇವಲ ಮೋಕ್ಷಾಕಾಂಕ್ಷಿಯಾಗಿ ಆಧ್ಯಾತ್ಮಿಕ ಬೆಳಕನ್ನರಸಿ ಭಾರತಕ್ಕೆ ಬಂದವಳಲ್ಲ; ಸ್ವಾಮೀಜಿ ನೀಡಿದ ಕರೆಗೆ ಓಗೊಟ್ಟು ಭಾರತೀಯ ಧರ್ಮ, ತತ್ತ್ವ, ಸಂಸ್ಕೃತಿಗಳನ್ನು ಒಟ್ಟಾಗಿ ಸ್ವೀಕರಿಸಿ, ಈ ದೇಶದ ಸೇವೆ ಮಾಡಲು ಬದ್ಧಕಂಕಣಳಾಗಿ ಬಂದವಳು. ಹುಟ್ಟಿ ಬೆಳೆದ ತಾಯ್ನಾಡು, ಸಂಸ್ಕೃತಿ, ಸಂಸ್ಕಾರ ಇವೆಲ್ಲವನ್ನೂ ಬಿಟ್ಟು ಹೊಸ ಪ್ರಪಂಚವೊಂದನ್ನು ತನ್ನದಾನ್ನಾಗಿ ಮಾಡಿಕೊಳ್ಳಲು ಮಾರ್ಗರೆಟ್ ನೋಬಲ್ ಮಾಡಬೇಕಾಗಿ ಬಂದ ಹೋರಾಟ ಸಮನ್ವಯಗಳು ಒಂದೆರೆಡೆ? ಹೆಜ್ಜೆಹೆಜ್ಜೆಗೂ ಆಕೆ ವಿವಿಧ ಆದರ್ಶಗಳ, ತತ್ತ್ವ-ನಂಬಿಕೆಗಳ ಹಾಗೂ ಹಳೆಯ – ಹೊಸ ನಡವಳಿಕೆಗಳ ನಡುವೆ ತನ್ನ ಆಯ್ಕೆಯನ್ನು ಖಚಿತಗೊಳಿಸಬೇಕಾಗಿ ಬಂತು. ಚೈತನ್ಯದಾತ ಸ್ವಾಮಿ ವಿವೇಕಾನಂದರ ಮಾರ್ಗದರ್ಶನದಲ್ಲಿ ನಿವೇದಿತಾ ಹೊಸ ಬೆಳಕನ್ನು ಕಂಡಳು; ತನ್ನ ಗುರುವಿನ ಅಣತಿಯಂತೆ ಹೊಸ ಹಾದಿಯಲ್ಲಿ ನಡೆಯಲು ಸಿದ್ಧಳಾದಳು. ಅವಳು ಹೆಜ್ಜೆಯಿಟ್ಟ ಹಾದಿ ಹೂವಿನ ಹಾಸುಗೆಯಾಗಿರಲಿಲ್ಲ; ಅತ್ಯಂತ ಕಠಿಣವಾದ, ನಾನಾ ತೊಡಕುಗಳಿಂದ ಕೂಡಿದ ದುರ್ಗಮ ರಸ್ತೆಯಾಗಿತ್ತು. ಹಲವು ಶತಮಾನಗಳಷ್ಟು ಪ್ರಾಚೀನ ಭಾರತದ ಜನಜೀವನದಲ್ಲೇ ಆಕೆ ತನ್ನ ಆಧ್ಯಾತ್ಮಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ನೆಲೆಯನ್ನು ಕಂಡು ಕೊಳ್ಳಬೇಕಾಯಿತು. ಆದರೆ ಈ ಹೊಸ ಅನ್ವೇಷಣೆಯಲ್ಲಿ ಆಕೆ ಕಂಡುಕೊಂಡ ಹೊಸ ಪ್ರಪಂಚಗಳು ಅವಳ ಬದುಕನ್ನೇ ಬದಲಾಯಿಸಿತು. ಶ್ರೀಮಾತೆ, ಶ್ರೀರಾಮಕೃಷ್ಣರ ನೇರ ಶಿಷ್ಯಂದಿರು, ಸ್ವಾಮಿ ವಿವೇಕಾನಂದರ ಪಾಶ್ಚಾತ್ಯ ಅನುಯಾಯಿಗಳು, ವಿವಿಧ ಕ್ಷೇತ್ರಗಳಲ್ಲಿ ನವಭಾರತ ನಿರ್ಮಾಣಕ್ಕಾಗಿ ದುಡಿದ ಭಾರತೀಯ ಮಹಾಪುರುಷರು – ಇವರೆಲ್ಲರ ನೇರ ಸಂಪರ್ಕ ಅವಳಿಗಾಯಿತು. ಅವರೆಲ್ಲರ ವ್ಯಕ್ತಿತ್ವ ಅವಳಲ್ಲಿ ಪಕ್ವತೆಯನ್ನೂ ಪರಿಪೂರ್ಣತೆಯನ್ನು ತಂದಿತ್ತರೆ, ಪ್ರತಿಯಾಗಿ ನಿವೇದಿತೆಯ ವ್ಯಕ್ತಿತ್ವದ ಅಸಾಧಾರಣ ಶಕ್ತಿಸಂಪನ್ನತೆ ಉಳಿದೆಲ್ಲರ ಪಾಲಿಗೆ ಒಂದು ವಿಸ್ಮಯವೆಂಬಂತೆ ಕಂಡುಬಂತು.

ಇಷ್ಟರಿಂದಲೇ ನಿವೇದಿತಾ ಜೀವನವೆಲ್ಲವೂ ಕಷ್ಟಪರಂಪರೆಯಾಗಿತ್ತೆಂದು ಭಾವಿಸಿದರೆ ತಪ್ಪಾಗಬಹುದೇನೋ. ಆಕೆ ತನ್ನ ಗುರುದೇವನನ್ನು ಕುರಿತು ಬರೆದ ‘**ನಾ ಕಂಡಂತೆ ನನ್ನ ಗುರುದೇವ**’ ಕೃತಿಯಲ್ಲಿ



ತನ್ನ ಆಂತರಿಕ-ಬಾಹ್ಯ ಸಂಘರ್ಷಗಳನ್ನು ಕುರಿತಂತೆ ಬರೆದಿರುವಂತೆಯೇ, ತಾನು ಈ ಹೋರಾಟಗಳಿಂದ ಗಳಿಸಿದ ದಿವ್ಯ, ಭವ್ಯ ಸಂಪತ್ತು ಎಷ್ಟೊಂದು ಅದ್ಭುತವಾದದು ಹಾಗೂ ಉನ್ನತ ಧ್ಯೇಯಾದರ್ಶಗಳಿಗೋಸ್ಕರ ಹೋರಾಡುವುದರಲ್ಲಿ ತನಗೆ ಲಭಿಸಿದ ಆನಂದವೆಂತಹುದು ಎಂಬುದನ್ನೂ ವಿವರಿಸಿದ್ದಾಳೆ. ಹೊಸದನ್ನು ಗ್ರಹಿಸುವ, ವಿಶ್ಲೇಷಿಸುವ ಹಾಗೂ ಒರೆಗೆ ಹಚ್ಚಿ ಸತ್ಯಾಸತ್ಯತೆಯನ್ನು ಕಂಡುಕೊಂಡು, ವಾಸ್ತವವಾದುದನ್ನು ಸ್ವೀಕರಿಸುವ ಪಾಶ್ಚಾತ್ಯ ಮನಸ್ಸಿನ ವಿಶಿಷ್ಟ ಗುಣವನ್ನು ನಿವೇದಿತಾಳಲ್ಲಿ ಕಾಣಬಹುದಾದರೂ, ಸಂಪೂರ್ಣವಾಗಿ ಹೊಸ ಜಗತ್ತಿಗೆ ತನ್ನನ್ನು ಸಮರ್ಪಿಸಿಕೊಳ್ಳುವ ಆಕೆಯ ಧೀರೋದಾತ್ತ ತ್ಯಾಗ ‘ಪಾಶ್ಚಾತ್ಯ’ ಅಥವಾ ‘ಪೌರ್ವಾತ್ಯ’ವೆಂಬ ಮಿತಿಯನ್ನು ದಾಟಿ, ಒಟ್ಟು ಮಾನವನ ಅಸಾಧಾರಣ ಗುಣವಾಗಿ ಕಾಣಿಸುತ್ತದೆ.

ಹತ್ತು ಹಲವು ಕ್ಷೇತ್ರಗಳಲ್ಲಿ ಕೆಲಸ ಮಾಡಿದರೂ, ನಿವೇದಿತಾಳ ಧ್ಯೇಯ, ಆದರ್ಶಗಳಲ್ಲಿ ಏಕಮುಖಿಯಾದ ಒಂದು ಗಮನವಿತ್ತು. ಶಿಕ್ಷಣವಿರಲಿ, ಇತಿಹಾಸವಿರಲಿ ಅಥವಾ ಕಲಾಪ್ರಪಂಚವಿರಲಿ ಎಲ್ಲೆಡೆ ‘ಭಾರತೀಯತೆ’ ಎನ್ನುವ ವಿಶಿಷ್ಟತೆಯನ್ನು ಕಾಯ್ದು ಕೊಳ್ಳುವುದರತ್ತ ಆಕೆ ಎಚ್ಚರ ವಹಿಸಿದ್ದಳು. ಪ್ರಗತಿ, ಬೆಳವಣಿಗೆ, ಆಧುನಿಕತೆ ಯಾವುದರಲ್ಲೂ ಪಾಶ್ಚಾತ್ಯರ ಅನುಕರಣೆ ಅಥವಾ ಪ್ರಭಾವವನ್ನು ಆಕೆ ಒಪ್ಪು

ತ್ತಿರಲಿಲ್ಲ. ಸ್ವತಂತ್ರ ಮನೋಭಾವ, ಸೃಜನಶೀಲ ವೈಯಕ್ತಿಕತೆ ಹಾಗೂ ಉದಾತ್ತ ಭಾವನೆಗಳು – ಇವುಗಳ ಅಡಿಪಾಯದ ಮೇಲೆ ಯಾವ ದೇಶದ ಚಿಂತನೆಗಳನ್ನಾದರೂ ಸ್ವೀಕರಿಸಬಹುದು ಎಂದು ಆಕೆ ಪ್ರತಿಪಾದಿಸುತ್ತಿದ್ದಳು. ಆಕೆಯ ಚೈತನ್ಯ ಪ್ರಾಚೀನ ಮೌಲ್ಯ, ಧ್ಯೇಯಗಳ ಕಡೆಗೂ, ಅವಳ ವೈಚಾರಿಕತೆ ಆಧುನಿಕ ವೈಜ್ಞಾನಿಕತೆಯ ಕಡೆಗೂ, ತೂಗಿ ತೊನೆದಾಡಿ, ಇವೆರಡರ ಅದ್ಭುತ ಸಮನ್ವಯವೇ ಪರಿಪೂರ್ಣ ಚಿಂತನೆಯ ಒಂದು ಉದಾಹರಣೆಯಾಗಬಲ್ಲದು ಎಂಬುದನ್ನು ಅವಳು ತೋರಿಸಿಕೊಟ್ಟಳು.

ನಿವೇದಿತಾ ಜೀವನದಲ್ಲಿ ನಿಬಿಡವಾದ ಘಟನೆಗಳಿವೆ. ಆರಂಭದ ದಿನಗಳಲ್ಲಿ ಆಕೆಯ ಮಾನಸಿಕ, ಬೌದ್ಧಿಕ ಚಿತ್ರ ನಮಗೆ ಸ್ಪಷ್ಟವಾಗಿ ಗೋಚರವಾಗದಿದ್ದರೂ, ಅಲ್ಲಿ ಬೆಳವಣಿಗೆಯ ಹಂತದ ಸಂಘರ್ಷ, ತಾಕಲಾಟಗಳು ಸಹಜವಾಗಿ ಇದ್ದಿರಬಹುದೆಂದು ಊಹಿಸಬಹುದು. ಆದರೆ ಸ್ವಾಮೀಜಿ ಸಂಪರ್ಕಕ್ಕೆ ಬಂದ ನಂತರ ಅವಳ ಜೀವನದಲ್ಲಿ ಉಂಟಾದ ಬದಲಾವಣೆಗಳಿಗೆ ಹೋಲಿಸಿದರೆ, ಅವಳ ಹಿಂದಿನ ಜೀವನ ತೀರ ಸಹಜವೂ, ಸಾಮಾನ್ಯವೂ ಆದ ಪಾಶ್ಚಾತ್ಯ ಮಹಿಳೆಯ ಜೀವನವಾಗಿತ್ತು ಎನ್ನಬೇಕು. ಉಳಿದೆಲ್ಲ ವ್ಯಕ್ತಿಗಳಿಗಿಂತ ಭಿನ್ನವಾಗಿ ಚಿಂತಿಸುವ ಗುಣ, ಆಳವಾದ ವಿಶ್ಲೇಷಕ ಬುದ್ಧಿ ಅವಳಲ್ಲಿದ್ದುದರಿಂದಲೇ ಆಕೆ ಸ್ವಾಮೀಜಿಯವರ ಮಾತುಗಳಲ್ಲಿ ಅಡಗಿದ್ದ ಪ್ರವಾದಿಯ ಧ್ವನಿಯನ್ನು ಗುರುತಿಸುವುದು ಸಾಧ್ಯವಾಯಿತು.

ಆದರೆ ಸಂಘರ್ಷದ ಹೋರಾಟದ ಅವಧಿ ಹೆಚ್ಚುಕಾಲ ಉಳಿಯದು; ಅದು ವಿಭಿನ್ನ ಸನ್ನಿವೇಶಗಳಲ್ಲಿ ನದಿಯು ಪಾತ್ರ ಬದಲಾಯಿಸುವಂತೆ ವಿವಿಧ ಕಡೆಗೆ ಹೊರಳಿ, ಮರಳಿ ಸಮತೋಲನ ಕಾಯ್ದುಕೊಳ್ಳಲು ಶ್ರಮಿಸುವುದು. ನಿವೇದಿತಾ ಸ್ವಾಮಿ ವಿವೇಕಾನಂದರ ಬಳಿ ಶಿಷ್ಯತ್ವವನ್ನು ಸ್ವೀಕರಿಸಿದ ಬಳಿಕ ಅವಳ ಎಲ್ಲ ತಳಮಳ, ಹೋರಾಟಗಳಿಗೆ ಒಂದು ಅರ್ಥ ಕಂಡುಬಂತು. ಹಲವು ಬಗೆಯ ಏರುಪೇರುಗಳಲ್ಲಿ, ಹೊಸ ಹೊಸ ಸನ್ನಿವೇಶಗಳಲ್ಲಿ ಆಕೆ ತನಗಾಗಿ ಕಾದಿರುವ ದಿವ್ಯ ಜೀವನದ ಮುಂಬೆಳಗನ್ನು ಕಂಡಳು. ತನ್ನ ಗುರುದೇವನಲ್ಲಿ ಎಲ್ಲ ಸಮಸ್ಯೆಗಳಿಗೆ, ಎಲ್ಲ ಗೊಂದಲಗಳಿಗೆ ಪರಿಹಾರ ಕಂಡುಕೊಂಡಳು. ಅವಳು ತನ್ನತನವನ್ನೆಲ್ಲ ಬಿಟ್ಟುಕೊಟ್ಟು ಸ್ವಾಮೀಜಿ ಮುಂದೆ ಶರಣಾದಳು ಎಂದು ಇದರರ್ಥವಲ್ಲ. ಸ್ವಾಮೀಜಿ ಎಂದಿಗೂ ಸ್ವಂತಿಕೆ, ತನ್ನತನಗಳನ್ನು ತ್ಯಜಿಸಲು ಹೇಳುತ್ತಿರಲಿಲ್ಲ. ಆದರೆ ಅವರು ಉಪದೇಶಿಸಿದ ಸಮನ್ವಯದ, ಸಮಶ್ರುತಿಯ ರಾಗವಿನ್ಯಾಸ ನಿವೇದಿತೆಯ ಹೃದಯವನ್ನು ಹೊಕ್ಕು ನಿಂತಿತು; ಅವಳ ಜೀವನತಾನದಲ್ಲಿ ಒಂದು ಅಪೂರ್ವ ಲಯವಿನ್ಯಾಸವನ್ನೂ, ಮಾಧುರ್ಯವನ್ನೂ ತಂದುಕೊಟ್ಟಿತು.

ನಿವೇದಿತಾ ಕಾರ್ಯಕ್ಷೇತ್ರವು ಸಮಾಜಸೇವೆ, ಮಹಿಳಾಕಲ್ಯಾಣ, ವಿದ್ಯಾಭ್ಯಾಸ, ರಾಜಕೀಯ, ಕಲೆ, ಸಾಹಿತ್ಯ, ಆಧ್ಯಾತ್ಮಿಕತೆ ಮೊದಲಾದ ಕಡೆ ವ್ಯಾಪಕಗೊಂಡಿತು; ಆದರೆ ಅವಳು ಯಾವ ಸನ್ನಿವೇಶದಲ್ಲೂ ವಿಚಲಿತಳಾಗದಂತೆ ಸ್ಥಿರವಾದ ಧ್ಯೇಯಾದರ್ಶಗಳ ನೆಲೆಯಲ್ಲಿ ನಿಂತಿದ್ದಳು. ಸ್ವಾಮೀಜಿ ನೀಡಿದ ಕರೆ ಹಾಗೂ ಉಪದೇಶಗಳ ಬಲ ಒಂದೆಡೆ; ಭಾರತದ ವಾಸ್ತವಿಕ ಜಗತ್ತಿನ ಗೊಂದಲಗಳು ಇನ್ನೊಂದೆಡೆ. ಇವೆರಡೂ ಬೇರೆ ಪ್ರಪಂಚಗಳೆಂದು ಆಕೆಗೆ ಕಂಡು ಬರಲಿಲ್ಲ. ತತ್ತ್ವ ಮತ್ತು ಪ್ರಾಯೋಗಿಕತೆ ಎರಡೂ ಒಂದುಗೂಡಿದಾಗಲೇ ಮಹತ್ಕಾರ್ಯ ಸಿದ್ಧಿಸುವಂತೆ, ನಿವೇದಿತಾಳ ಆಂತರಿಕ ಜಗತ್ತು ಹಾಗೂ ವಾಸ್ತವಿಕ ಜಗತ್ತುಗಳು ಬೇರ್ಪಡದೆ, ಇತಿಹಾಸ ಚಕ್ರದ ಗತಿಗನುಗುಣವಾಗಿ ಹೆಜ್ಜೆ ಹಾಕುತ್ತಿತ್ತು. ನೂರಾರು, ಸಾವಿರಾರು ಮಂದಿ ಈ ಯಾನದಲ್ಲಿ ಬಂದು ಹೋಗುತ್ತಾರೆ, ಇತಿಹಾಸದಲ್ಲಿ ಮರೆಯಾಗುತ್ತಾರೆ. ಆದರೆ ನಿವೇದಿತಾ ಹಾಗಾಗಲಿಲ್ಲ; ತನ್ನ ಹೆಜ್ಜೆಗಳನ್ನು ಅಚ್ಚಳಿಯದಂತೆ ಉಳಿಸಿ ಮುನ್ನಡೆದಳು.

ಸ್ವಾಮಿ ವಿವೇಕಾನಂದರ ಕೃಪೆ, ಉಪದೇಶ ಹಾಗೂ ತರಬೇತಿಯನ್ನು ಪಡೆದ ನಿವೇದಿತಾ, ತನ್ನ ಗುರುವಿನ ನಿರ್ಯಾಣಾನಂತರ ಧ್ಯಾನ, ಜಪ, ಸಾಧನೆಗಳಲ್ಲಿ ಮುಳುಗುವುದಕ್ಕೆ ಬದಲಾಗಿ ರಾಜಕೀಯ, ಭಾರತೀಯ ಸ್ವಾತಂತ್ರ್ಯ ಸಂಗ್ರಾಮ, ಸಮಾಜಸೇವೆ, ಶಿಕ್ಷಣ, ಕಲೆ–ಸಂಸ್ಕೃತಿ ಮೊದಲಾದ ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಂಡದ್ದು ಒಂದು ರೀತಿಯ ವಿರೋಧಾಭಾಸವಲ್ಲವೆ? ಅವಳ ಆಧ್ಯಾತ್ಮಿಕ ಜೀವನದಲ್ಲಿ ಅವೆಲ್ಲ ತೊಡಕಾಗಲಿಲ್ಲವೆ? – ಹೀಗೆ ಪ್ರಶ್ನೆಗಳು ಮೂಡಬಹುದು. ಅವಳ ವ್ಯಕ್ತಿತ್ವದ ಆಳವನ್ನು ಹೊಕ್ಕು ನೋಡುವವರಿಗೆ ಇದಕ್ಕೆ ಸಮರ್ಪಕವಾದ ಉತ್ತರ ತಾನೇತಾನಾಗಿ ಮೂಡಿಬರುವುದು. ಮೊದಲನೆಯದಾಗಿ, ನಿವೇದಿತಾ ಸ್ವಾಮೀಜಿಯಲ್ಲಿ ಕಂಡ ಆಧ್ಯಾತ್ಮಿಕತೆ ಕೇವಲ ಧ್ಯಾನ, ಜಪ, ಸಾಧನೆಗಳಿಗೆ ಸೀಮಿತವಾದುದಾಗಿರಲಿಲ್ಲ. ಅಂತರಂಗ ಜಗತ್ತು ಹಾಗೂ ಬಾಹ್ಯಜಗತ್ತು – ಎರಡನ್ನೂ ಒಂದೇ ಸತ್ಯದ ವಿಭಿನ್ನ ಅಭಿವ್ಯಕ್ತಿಯಾಗಿ ಕಾಣುವ ಸಮಗ್ರ ದೃಷ್ಟಿ ಸ್ವಾಮೀಜಿಯವರದು. ಅದನ್ನು ಅಷ್ಟೇ ಸಮರ್ಥವಾಗಿ ಹೀರಿಕೊಂಡ ನಿವೇದಿತಾಳ ಜೀವನ ಕೂಡ ಅಂತರಂಗ–ಬಹಿರಂಗ ಜಗತ್ತುಗಳ ಸಮಗ್ರ ಸಾಧನೆಯಾಯಿತು; ಅದೇ ಅವಳ ಭವ್ಯ ಆಧ್ಯಾತ್ಮಿಕತೆ ಹಾಗೂ ಪೂಜೆಯಾಯಿತು. ಎರಡನೆಯದಾಗಿ, ಅವಳು ಆಗಲೇ ಸ್ವಾಮೀಜಿಯವರಿಂದ ಪಡೆದಿದ್ದ ಆಧ್ಯಾತ್ಮಿಕ ಶಕ್ತಿ ಅವಳನ್ನು ಪರಿಪೂರ್ಣತೆಯೆಡೆಗೆ ಕರೆದೊಯ್ದಿತ್ತು, ಅದು ಸತತ ವಿಕಾಸಗೊಳ್ಳುತ್ತ ವಿವಿಧ ಆಯಾಮಗಳಲ್ಲಿ ತನ್ನ ಸಾರ್ಥಕ್ಯವನ್ನು ಕಂಡುಕೊಳ್ಳುತ್ತಿತ್ತು. ಆದರೆ ಇವೆಲ್ಲದರ ಕೇಂದ್ರಬಿಂದುವಾಗಿ ಭಾರತೀಯತೆ, ರಾಷ್ಟ್ರೀಯತೆ ಅವಳ ಉಸಿರಾಯಿತು ಎಂಬುದೇ ನಿವೇದಿತಾಳ ವಿಶೇಷತೆ ಹಾಗೂ ಶ್ರೇಷ್ಠತೆ.

ಮಹಾಚೇತನವೊಂದರ ನೆನಪು, ಸಾಧನೆಯ ಆಯಾಮಗಳು, ಬಿಟ್ಟುಹೋದ ಕೃತಿಗಳು ಇವೆಲ್ಲವೂ ನಮ್ಮ ಜೀವನದಲ್ಲಿ ಮತ್ತೆ ಮೊಳೆತು ಹೆಮ್ಮರವಾಗಬಹುದು. ಆದರೆ ಅವು ನಮ್ಮ ಅಂತರಂಗವನ್ನು ಕಲಕಿ, ಎಷ್ಟರಮಟ್ಟಿಗೆ ನಮ್ಮ ಬದುಕಿಗೆ ಬೆಳಕು ನೀಡುವುದು ಎಂಬುದು ಮುಖ್ಯ. ಶ್ರೇಷ್ಠಜೀವನದ ಅನ್ವೇಷಣೆಯಲ್ಲಿ ದಾರಿದೀಪವಾಗಬಲ್ಲ ಸಂದೇಶವನ್ನು ಜಗತ್ತಿಗೆ ಬಿಟ್ಟುಹೋದ ಮಹಾತ್ಮರ ಸಂಖ್ಯೆ ಕಡಿಮೆಯೇನಲ್ಲ; ಆದರೆ ಎಲ್ಲ ಕಾಲಕ್ಕೂ ನಿತ್ಯಸ್ಫೂರ್ತಿಯಗಬಲ್ಲವರು ಮಾತ್ರ ಕೆಲವೇ ಮಂದಿ. ಇಂಥವರ ನಡುವೆ ನಿವೇದಿತಾಳದು ಒಂದು ಉಜ್ವಲಜ್ಯೋತಿಯೆಂದು ನಿಸ್ಸಂದೇಹವಾಗಿ ಹೇಳಬಹುದು. 

# ನಿವೇದಿತಾ

## (ಸಂಕ್ಷಿಪ್ತ ಜೀವನ ಚರಿತ್ರೆ)

**ಸ್ವಾಮಿ ಸೋಮನಾಥಾನಂದ**

ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಪ್ರಕಾಶನ ವಿಭಾಗವು ಪ್ರಕಟಿಸಿದ 'ನಿವೇದಿತಾ – ಸಂಕ್ಷಿಪ್ತ ಜೀವನಚರಿತ್ರೆ'ಯನ್ನಿಲ್ಲಿ ಪೂರ್ಣವಾಗಿ ಚಿತ್ರಸಮೇತ ನೀಡುತ್ತಿದ್ದೇವೆ (ಮೂಲಕೃತಿಯಲ್ಲಿ ಚಿತ್ರಗಳಿಲ್ಲ). ಸೋದರಿ ನಿವೇದಿತಾ ಜೀವನದುದ್ದಕ್ಕೂ ನಿಬಿಡವಾಗಿರುವ ಘಟನೆಗಳಲ್ಲಿ ಯಾವ ಪ್ರಮುಖ ಅಂಶಗಳನ್ನೂ ಬಿಡದೆ, ಸಂಕ್ಷಿಪ್ತವಾದರೂ ಆಪ್ಯಾಯಮಾನವಾಗುವಂತೆ ಈ ಕೃತಿ ಮೂಡಿಬಂದಿದೆ. ಹೊಸದಾಗಿ ನಿವೇದಿತಾ ಜೀವನವನ್ನು ತಿಳಿದುಕೊಳ್ಳಬಯಸುವವರಿಗೆ ಇದು ಉಪಯುಕ್ತವಾಗುವುದರಲ್ಲಿ ಸಂದೇಹವಿಲ್ಲ.



ಪ್ರಖ್ಯಾತ ಕಲಾವಿದರಾದ ಅವನೀಂದ್ರನಾಥ ಠಾಕೂರರು ಸೋದರಿ ನಿವೇದಿತೆಯ ವ್ಯಕ್ತಿಚಿತ್ರವನ್ನು ಒಂದು ಸಣ್ಣ ಲೇಖನದಲ್ಲಿ ನೀಡಿರುವರು. ಇದನ್ನು ಓದಿದರೆ ಅವರ ಲೇಖನಿ ಕುಂಚದಷ್ಟೇ ಸುಂದರವಾದ ಚಿತ್ರವನ್ನು ನಮ್ಮ ಕಣ್ಣೆದುರಿಗೆ ನಿಲ್ಲುವಂತೆ ಮಾಡುವುದು:

''ಎಂತಹ ಪವಿತ್ರ ಶೀಲ ಸೋದರಿ ನಿವೇದಿತೆಯದು! ನಾನು ಮೊದಲು ಆಕೆಯನ್ನು ಕಂಡದ್ದು ಅಮೆರಿಕನ್ ಕೌನ್ಸಿಲ್ ಭವನದಲ್ಲಿ, ಒಕಾಕುರನಿಗೆ ಕೊಟ್ಟ ಔತಣಕೂಟದಲ್ಲಿ. ಆಕೆಯನ್ನು ಅಲ್ಲಿಗೆ ಆಹ್ವಾನಿಸಿದ್ದರು. ಅವಳು ಕಾಲಿನ ತನಕ ಬರುವ ಶ್ವೇತ ವಸನವನ್ನು ಧರಿಸಿದ್ದಳು. ಕೊರಳಿನಲ್ಲಿ ರುದ್ರಾಕ್ಷಿಯ ಮಾಲೆಯನ್ನು ಧರಿಸಿದ್ದಳು. ಶ್ವೇತ ಅಮೃತಶಿಲೆಯಿಂದ ಕೆತ್ತಿದ ಮಹಾ ತಪಸ್ವಿನಿಯ ಮೂರ್ತಿಯಂತೆ ನನಗೆ ತೋರಿದಳು. ಆಕೆಯ ಸೌಂದರ್ಯವನ್ನು ಬಣ್ಣಿಸಲು ಅಸದಳ. ಮತ್ತೊಮ್ಮೆ ನಾನು ಅವಳನ್ನು ಸಂದರ್ಶಿಸಿದ್ದು ಜಸ್ಟಿಸ್ ಹೋಮ್ ಉಡ್ ಭವನದ ಆರ್ಟ್ ಸೊಸೈಟಿಯ ಒಂದು ಸಭೆಯಲ್ಲಿ. ಆಕೆಯನ್ನೂ ಅಲ್ಲಿಗೆ ಬರಲು ಆಹ್ವಾನಿಸಿದ್ದರು. ಜನರೆಲ್ಲಾ ನೆರೆದ ಮೇಲೆ ಅವಳು ಸ್ವಲ್ಪ ಹೊತ್ತಾಗಿ ಬಂದಳು. ಅದೊಂದು ಅಭೂತಪೂರ್ವ ಸಭೆ. ಕಲ್ಕತ್ತೆಯ ಪ್ರಖ್ಯಾತ ಮಹಿಳೆ ಮಹನೀಯರು ತಮ್ಮ ಅತ್ಯಂತ ಬೆಲೆಬಾಳುವ ಉಡಿಗೆ ತೊಡಿಗೆಗಳನ್ನು ತೊಟ್ಟು ಬಂದಿದ್ದರು. ಅಲಂಕಾರ ಮತ್ತು ಸೌಂದರ್ಯದ ಒಂದು ಸ್ಪರ್ಧೆಯೋ ಎನ್ನುವಂತೆ ಕಂಡಿತು ಸಭೆ. ಮೃದು ಮಧುರ ಸಂಗೀತದ ಹಿನ್ನೆಲೆಯಲ್ಲಿ ಮಧ್ಯೆ ಮಧ್ಯೆ ಏಳುವ ತರಂಗ ಭಂಗ. ಸೋದರಿ ನಿವೇದಿತಾ ಸಭೆಗೆ ಪ್ರವೇಶಿಸಿದಾಗ ಇನ್ನೇನು ಸಂಜೆವೆಣ್ಣು ಆವರಿಸುವುದರಲ್ಲಿದ್ದಳು. ತಾರೆಗಳ ಮಧ್ಯದಲ್ಲಿ ಪ್ರಕಾಶಿಸುವ ಚಂದ್ರನಂತೆ ಕಂಡಳು ಸೋದರಿ ನಿವೇದಿತಾ ಆಗ. ಆಕೆಯ ಸರಳ ಸೌಂದರ್ಯ ಮತ್ತು ಸ್ನಿಗ್ಧ ಗಾಂಭೀರ್ಯದೆದುರಿಗೆ ಅಲ್ಲಿ ನೆರೆದಿದ್ದ ಲಾವಣ್ಯವತಿಯರೆಲ್ಲ ಮ್ಲಾನರಾಗಿ ಹೋದರು. ಹಿಂದಿನಂತೆಯೇ ಅದೇ ಶ್ವೇತವಸನ, ಕೊರಳಲ್ಲಿ ರುದ್ರಾಕ್ಷಿ ಮಾಲೆ, ತಲೆಯಲ್ಲಿ ಅರ್ಧ ಹೊಂಬಣ್ಣ, ಅರ್ಧ ರಜತ ವರ್ಣದ ಕೇಶರಾಶಿ. ಅಲ್ಲಿ ನೆರೆದವರ ದೃಷ್ಟಿಯೆಲ್ಲಾ ಇವಳ ಕಡೆ ಧಾವಿಸಿದವು. ಎಲ್ಲರನ್ನೂ ಆಕೆ ಆಕರ್ಷಿಸಿದಳು. ಎಲ್ಲರೂ ಪಿಸುಮಾತನಾಡತೊಡಗಿದರು. 'ಯಾರಿರಬಹುದು ಆಕೆ?' ಎಂದು ವುಡ್ರಾಫ್ ಬ್ರಂಟ್ ಎನ್ನುವವರು ನನ್ನನ್ನು ಕೇಳಿದರು. ನಾನು ನಿವೇದಿತಾಳನ್ನು ನೆರೆದ ಪ್ರಮುಖರಿಗೆ ಪರಿಚಯ ಮಾಡಿಕೊಟ್ಟೆ. ನೀವು ಸೌಂದರ್ಯದ ವಿಷಯವಾಗಿ ಮಾತನಾಡಬಹುದು; ಆದರೆ ನನಗೆ ನಿವೇದಿತೆಯೇ ಸೌಂದರ್ಯದ ಸೌಂದರ್ಯಕ್ಕೆ ಆದರ್ಶವಾಗಿರುವಳು. ಬಾಣನ ಕಾದಂಬರಿಯಲ್ಲಿ ಬರುವ ಮಹಾಶ್ವೇತೆಯಂತೆ ಇರುವಳು ಆಕೆ. ನಾನು ಇಂತಹ ರೂಪವನ್ನು, ಸೌಂದರ್ಯವನ್ನು ನೋಡಿರುವುದು ಅಪರೂಪ. ಆಕೆ ಲಾವಣ್ಯದ ಪರಾಕಾಷ್ಠೆಯಂತೆ ನನಗೆ ಕಂಡಳು. ಕೆಲವು ನಿಮಿಷಗಳು ಆಕೆಯೊಡನೆ ಮಾತನಾಡಿದರೆ ಸಾಕು, ಸ್ಫೂರ್ತಿ ಕಿಡಿ ನಮ್ಮ ಎದೆಯಲ್ಲಿ ಜಾಗೃತವಾಗುವುದು.''

ಮೇಲಿನ ಚಿತ್ರವನ್ನು ಕೊಟ್ಟವರು ಕವಿ ರವೀಂದ್ರನಾಥರ ಹತ್ತಿರದ ಬಂಧುಗಳಾದ ಅವನೀಂದ್ರನಾಥ ಠಾಕೂರರು. ನಿವೇದಿತೆಯನ್ನು ಚೆನ್ನಾಗಿ ಬಲ್ಲವರು. ಆಧುನಿಕ ಕಲಾಪ್ರಪಂಚದಲ್ಲಿ ಪ್ರಖ್ಯಾತಿಯ ಶಿಖರವನ್ನು ಏರಿದವರು. ಇಂತಹವರ ಮೇಲೆ ಅವಳ ಪ್ರಭಾವ ಎಷ್ಟು ಮಹತ್ತರವಾಗಿತ್ತು! ಆಗಿನ ಕಾಲದಲ್ಲಿ ವಂಗ ದೇಶದಲ್ಲಿ ನಿವೇದಿತೆಯ ಪ್ರಭಾವದಿಂದ ನಿತ್ಯಸುಪ್ತವಾಗಿದ್ದ ತಮ್ಮ ಪ್ರತಿಭೆಯ ಅಗ್ನಿಕುಂಡವನ್ನು ಹಲವು ಮಹಿಮಾನ್ವಿತರು ಜಾಗೃತಿ ಮಾಡಿಕೊಂಡರು. ಅವರು ಜೀವನದ ಹಲವು ಕಾರ್ಯಕ್ಷೇತ್ರಗಳಲ್ಲಿ ಪ್ರಥಮ ದರ್ಜೆಯಲ್ಲಿರುವ ಮಹಾವ್ಯಕ್ತಿಗಳು. ರವೀಂದ್ರನಾಥರು, ಮೇಲೆ ಹೇಳಿದ ಅವನೀಂದ್ರನಾಥರು, ನಂದಲಾಲ್ ಬೋಸ್ ಇವರು ಕಲಾ ಪ್ರಪಂಚಕ್ಕೆ ಸೇರಿದವರು. ನಿವೇದಿತೆಯೊಡನೆ ಒಂದೇ ಕಾರ್ಯಕ್ಷೇತ್ರದಲ್ಲಿ ಕೆಲವು ಕಾಲ ದುಡಿದವರು. ಅವಳಿಂದ ಪ್ರಭಾವಿತರಾದವರಲ್ಲಿ ಜೆ. ಸಿ. ಬೋಸ್, ಪಿ. ಸಿ. ರಾಯ್ ಮುಂತಾದ ಪ್ರಖ್ಯಾತ ವೈಜ್ಞಾನಿಕರಿದ್ದರು. ಇವರ ಮೇಲೆಲ್ಲಾ ತನ್ನ ಪ್ರಭಾವವನ್ನು ಅಚ್ಚಳಿಯದಂತೆ ಬೀರಬೇಕಾದರೆ ಇದೊಂದು ಅಸಾಧಾರಣ ಚೇತನವಾಗಿರಬೇಕು. ಈ ಅಪೂರ್ವ ವ್ಯಕ್ತಿಯನ್ನು ಭರತಖಂಡಕ್ಕೆ ತಂದ ಕೀರ್ತಿ ಸ್ವಾಮಿ ವಿವೇಕಾನಂದರದು. ತಂದದ್ದು ಮಾತ್ರವಲ್ಲದೆ ಅವಳನ್ನು ಆಧ್ಯಾತ್ಮಿಕ ಸಾಧನೆಯ ಗರಡಿಯಲ್ಲಿ ತರಪೇತು ಮಾಡಿ, ಪರಿಶುದ್ಧಳನ್ನಾಗಿ ಮಾಡಿ ಭರತಖಂಡದ ಉದ್ಧಾರಕ್ಕೆ ಆಕೆಯನ್ನು ನಿವೇದಿಸಿದರು. ಅಕ್ಷರಶಃ ಈ ಹೆಸರು ಅವಳಿಗೆ ಸಲ್ಲುವುದು. ಇನ್ನು ಅವಳ ಬಾಲ್ಯ ಶೈಶವ ಪ್ರೌಢ ಸ್ಥಿತಿಯನ್ನು ನೋಡೋಣ.

### ಬಾಲ್ಯ

ಸೋದರಿ ನಿವೇದಿತೆಯ ಹಿಂದಿನ ಹೆಸರು ಮಾರ್ಗರೆಟ್ ಎಲಿಜಬೆತ್ ನೋಬಲ್ ಎಂದು. ಅವಳು ಅಕ್ಟೋಬರ್ ೨೮ನೇ ತೇದಿ ೧೮೬೭ರಲ್ಲಿ ಜನಿಸಿದಳು. ಆ ಊರಿನ ಹೆಸರು ಡಂಗೇನನ್, ಐರ್‌ಲ್ಯಾಂಡಿನ ಟೆರೇನಿ ಪ್ರದೇಶದಲ್ಲಿದೆ. ಅವಳು ನೋಬಲ್ ಎಂಬ ಮನೆತನಕ್ಕೆ ಸೇರಿದ್ದಳು. ನೋಬಲ್ ವಂಶಸ್ಥರು ಪೂರ್ವದಲ್ಲಿ ಸ್ಕಾಟ್‌ಲೆಂಡಿನಲ್ಲಿ ಇದ್ದರು. ಅನಂತರ ಸುಮಾರು ಮೂರು ಶತಮಾನಗಳ ಮೇಲೆ ಐರ್ಲೆಂಡಿಗೆ ಬಂದರು.

ಮಾರ್ಗರೆಟ್ ತಂದೆ ಮತ್ತು ತಾತಂದಿರು ಬಡತನದಲ್ಲಿದ್ದರು. ಇಂಗ್ಲಿಷರು ಐರ್ಲೆಂಡಿನವರನ್ನು ಚೆನ್ನಾಗಿ ನೋಡುತ್ತಿರಲಿಲ್ಲ. ಅವರು ಸ್ವಾತಂತ್ರ್ಯಕ್ಕೆ ತುಂಬಾ ಹೋರಾಡುತ್ತಿದ್ದರು. ಅವರಿಗೆ ಇಂಗ್ಲೆಂಡಿನವರಿಂದ ಯಾವ ರಕ್ಷಣೆಯೂ ಸಿಕ್ಕಲಿಲ್ಲ. ಮಾರ್ಗರೆಟ್‌ನ ಅಜ್ಜ ಜಾನ್ ನೋಬಲ್ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ಅದರಂತೆಯೇ ಅವಳ ಮನೆತನದ ಇತರರೂ ಕೂಡ.

ತಾತ ನೋಬಲ್ ಉತ್ತರ ಐರ್ಲೆಂಡಿನಲ್ಲಿ, ವ್ಯಾಟಿಕನ್ ಚರ್ಚಿನಲ್ಲಿ ಒಬ್ಬ ಬೋಧಕನಾಗಿದ್ದನು. ಅವನ ಪತ್ನಿ ಮಾರ್ಗರೆಟ್ ಎಲಿಜಬೆತ್ ನೀಲಾಸ್ ಎಂಬುವವಳು. ಜೀವನ ಸುಖಮಯವಾಗಿತ್ತು. ಅವನ ನಾಲ್ಕನೆಯ ಮಗ ಸ್ಯಾಮುಯಲ್ ರಿಚ್‌ಮಂಡ್ ಎಂಬುವವನು. ಅವನು ಮೇರಿ ಇಸಾಬೆಲ ಎಂಬುವವಳನ್ನು ಮದುವೆಯಾದನು. ಅವರು ಡಂಗೇನನ್‌ನಲ್ಲಿ ತಂಗಿದ್ದರು. ಅಲ್ಲಿಯೇ ಅವರ ಮೊದಲ ಮಗಳು ಮಾರ್ಗರೆಟ್ ಜನ್ಮ ತಾಳಿದಳು. ಇಸಾಬೆಲ ಗರ್ಭವತಿಯಾದಾಗ ಜನನ ತುಂಬಾ ಕಷ್ಟವಾಯಿತು. ಆಗ ಅವಳು ಮಗು ಯಾವ ಆತಂಕವೂ ಇಲ್ಲದೆ ಜನಿಸಿದರೆ, ಆ ಮಗುವನ್ನು ದೇವರ ಸೇವೆಗೆ ಕೊಡುತ್ತೇನೆ ಎಂದು ಹರಕೆ ಹೊತ್ತಳು. ಮಗು ಆರೋಗ್ಯವಾಗಿ ಜನಿಸಿತು. ತನ್ನ ಮಗಳನ್ನು ದೇವರಿಗೆ ಮೀಸಲಾಗಿ ಬಿಡುವೆನು ಎಂಬುದನ್ನು ಅವಳು ಮರೆಯಲಿಲ್ಲ. ಮಗು ಬೆಳೆದು ವಿದ್ಯಾಭ್ಯಾಸವನ್ನು ಪೂರೈಸಿ ಸ್ವಾಮಿ ವಿವೇಕಾನಂದರಿಗೆ ಶಿಷ್ಯಳಾಗಿ ಮೀಸಲಾದಾಗ ತಾಯಿಯು ಸಂತೋಷಪಟ್ಟಳು. ಇಂತಹ ತಾಯಂದಿರು ಅಪರೂಪ ಜಗತ್ತಿನಲ್ಲಿ.

ಕೆಲವು ಕಾಲದ ಮೇಲೆ ತಂದೆತಾಯಿಗಳು ಇಂಗ್ಲೆಂಡಿಗೆ ಹೋಗಿ ಮ್ಯಾಂಚೆಸ್ಟರ್‌ನಲ್ಲಿ ವಾಸಿಸತೊಡಗಿದರು. ಮಾರ್ಗರೆಟ್‌ಳನ್ನು ಅಜ್ಜಿಯ ಮನೆಯಲ್ಲಿ ಬಿಟ್ಟರು. ಮುಂದೆ ಸ್ಯಾಮುಯಲ್ ಡೆವಾನ್‌ಶೈರ್‌ನಲ್ಲಿ ಇರುವ ಗ್ರೇಟ್ ಟೆರೆಂಗ್ಟನ್‌ನಲ್ಲಿ ಬೋಧಕ ವೃತ್ತಿಯನ್ನು ಕೈಗೊಂಡನು. ಆಗ ತನ್ನ ಮಗಳನ್ನು ತನ್ನೊಂದಿಗೆ ಇರಲು ಕರೆದುಕೊಂಡು ಹೋಗುತ್ತಿದ್ದನು. ಅದು ೧೮೭೭ರಲ್ಲಿ, ಅಷ್ಟರ ಹೊತ್ತಿಗೆ ಮಾರ್ಗರೆಟ್‌ಗೆ ಒಬ್ಬ ತಂಗಿ ಮತ್ತು ತಮ್ಮ ಜನಿಸಿದ್ದರು.

ರೆವರೆಂಡ್ ಸ್ಯಾಮುಯಲ್ ನೋಬಲ್ ಪ್ರಖ್ಯಾತ ಬೋಧಕನಾದ. ಅದಕ್ಕಿಂತ ಹೆಚ್ಚಾಗಿ ಬಡವರಿಗೆ ಅನುಕಂಪ ಪಡುವ ಸ್ವಭಾವ ಅವನದು. ಅವನಿಗೆ ಧರ್ಮ ಎಂದರೆ ಸೇವೆಯಾಗಿತ್ತು. ಅವನು ತನ್ನ ಜೀವನದ ಬಹುಕಾಲವನ್ನು ದೀನದಲಿತರ ಸೇವೆಯಲ್ಲಿ ಕಳೆಯುತ್ತಿದ್ದನು.

ಮಾರ್ಗರೆಟ್ ನೋಬಲ್ (ನಿವೇದಿತಾ) ತನ್ನ ತಂದೆಯನ್ನು ಪ್ರೀತಿಸುತ್ತಿದ್ದಳು. ಅವಳು ಕೆಲವು ಅನಾಥ ಮನೆಗಳಿಗೆ ತಂದೆಯೊಂದಿಗೆ ಹೋಗುತ್ತಿದ್ದಳು. ಕಣ್ಣಾರೆ ಅವರ ಕಷ್ಟ ದುಃಖಗಳನ್ನು ನೋಡುತ್ತಿದ್ದಳು. ಇದರಿಂದಲೇ ಅನುಕಂಪ ಪಡುವುದು ಅವಳ ಬಾಲ್ಯದ ಸ್ವಭಾವವಾಯಿತು.

ಒಂದು ಸಾರಿ ಒಬ್ಬ ಸ್ನೇಹಿತ ಇಂಡಿಯಾದಿಂದ ಬಂದಿದ್ದನು. ತಂದೆ ಆತನಿಗೆ ತನ್ನ ಮಗಳ ಪರಿಚಯ ಮಾಡಿಸಿದನು. ಅವನು ಬುದ್ಧಿಶಾಲಿಯಾದ ಸುಂದರ ಮಗುವನ್ನು ಆಶೀರ್ವದಿಸಿ, 'ನೀನು ಭರತಖಂಡದಲ್ಲಿ ಸೇವೆಮಾಡುವೆ' ಎಂದು ಭವಿಷ್ಯ ನುಡಿದನು.

ನಿವೇದಿತಾ ತಂದೆಯಾದ ಸ್ಯಾಮುಯಲ್ ತನ್ನ ಮೂವತ್ತನಾಲ್ಕನೇ ವಯಸ್ಸಿನಲ್ಲಿ ಅಕಾಲಮರಣಕ್ಕೆ ತುತ್ತಾದನು. ಮನೆಯವರು ದುಃಖಕ್ಕೆ ಒಳಗಾದರು. ಮೇರಿ ನೋಬಲ್‌ಗೆ (ನಿವೇದಿತಾಳ ತಾಯಿ) ತನ್ನ ಮೂರು ಮಕ್ಕಳೊಡನೆ ಇಂಗ್ಲೆಂಡಿನಲ್ಲಿ ಇರಲು ಸಾಧ್ಯವಾಗಲಿಲ್ಲ. ಮತ್ತೆ ಎಲ್ಲರೂ ಐರ್ಲೆಂಡಿಗೆ ಬಂದರು. ಮಾರ್ಗರೆಟ್ ಆಗ ಶಾಲೆಯಲ್ಲಿ ಓದುತ್ತಿದ್ದಳು.

ಅವಳು ಶಾಲೆಯ ವಿದ್ಯಾಭ್ಯಾಸವನ್ನು ಪೂರೈಸಿದ ಮೇಲೆ ಹ್ಯಾಲಿಫ್ಯಾಕ್ಸ್ ಕಾಲೇಜನ್ನು ಸೇರಿದಳು. ಅವಳು ಕಾಲೇಜಿನ ಹಾಸ್ಟೆಲ್‌ನಲ್ಲಿ ಇದ್ದಳು. ಅಲ್ಲಿ ಅಧ್ಯಯನ, ಧ್ಯಾನ ಮತ್ತು ಆಟಗಳಿಗೆ

ಕ್ಲುಪ್ತ ವಾದ ಕಾಲವಿತ್ತು. ಮಾರ್ಗರೆಟ್ ತುಂಬಾ ಬುದ್ಧಿಶಾಲಿಯಾದುದರಿಂದ ತನ್ನ ಕೆಲಸವನ್ನು ಬೇಗ ಪೂರೈಸಿ, ಬೇರೆ ಬೇರೆ ಪುಸ್ತಕಗಳನ್ನು ಓದಿ ತನ್ನ ಬುದ್ಧಿಯನ್ನು ವಿಕಾಸಪಡಿಸಿಕೊಂಡಳು. ಅವಳಿಗೆ ತುಂಬಾ ಪ್ರಿಯವಾದದ್ದು ಸಂಗೀತ, ಕಲೆ ಮತ್ತು ಭೌತವಿಜ್ಞಾನಗಳು.

ಹ್ಯಾಲಿಫ್ಯಾಕ್ಸ್ ವಿದ್ಯಾಲಯದಲ್ಲಿ ತನ್ನ ಶಿಕ್ಷಣವನ್ನು ಪೂರೈಸಿ ೧೮೮೪ರಲ್ಲಿ ಶಿಕ್ಷಕಿಯಾಗಿ ಕೆಲಸವನ್ನು ಸ್ವೀಕರಿಸಿದಳು. ರೆಕ್ಸ್ ಹ್ಯಾಮಿನಲ್ಲಿರುವಾಗ ಅವಳಿಗೆ ಒಬ್ಬ ತರುಣ ಇಂಜಿನಿಯರ ಪರಿಚಯವಾಯಿತು. ಕೊನೆಗೆ ಆ ಸ್ನೇಹ ಪ್ರೇಮವಾಗಿ ಪರಿಣಮಿಸಿತು. ಮಾರ್ಗರೆಟ್ ತಾನು ಪ್ರೇಮಿಸಿದ ವ್ಯಕ್ತಿಯನ್ನು ವಿವಾಹವಾಗುವುದರಲ್ಲಿದ್ದಳು. ತನ್ನ ಜೀವನದ ಆದರ್ಶಕ್ಕೆ ಅವನೊಬ್ಬ ಪ್ರಭಾವಕಾರಿಯಾದ ಸಂಗಾತಿಯಾಗಬಹುದೆಂದು ಭಾವಿಸಿದ್ದಳು. ಆದರೆ ಅವಳೊಂದು ಬಗೆದರೆ ವಿಧಿ ಬೇರೊಂದು ದಾರಿಗೆ ಅವಳನ್ನು ಎಳೆಯಿತು. ವಿವಾಹದ ದಿನ ನಿರ್ಧಾರವಾಗುವುದಕ್ಕೆ ಮುಂಚೆಯೇ ಆಕೆ ಪ್ರೀತಿಸಿದ ವ್ಯಕ್ತಿ ಅನಿರೀಕ್ಷಿತ ರೋಗದಿಂದ ಮೃತ್ಯುವಶನಾದನು. ವೈವಾಹಿಕ ಜೀವನದ ಸುಖಸ್ವಪ್ನವನ್ನು ಕಾಣುತ್ತಿದ್ದ ಮಾರ್ಗರೆಟ್ಳಿಗೆ ಪ್ರೇಮಿಯ ಈ ಅಕಾಲಮೃತ್ಯು ಮಹಾ ಆಘಾತವನ್ನಿತ್ತಿತು.

ಈಗ ಅವಳ ಮನಸ್ಸು ಮತ್ತೆ ಶಿಕ್ಷಣದ ಕಡೆ ಹರಿಯಿತು. ಮಾರ್ಗರೆಟ್‌ಗೆ ಬೋಧನೆ ಹಿತಕರವಾದ ಸ್ವಭಾವವಾಯಿತು. ಕ್ರಮೇಣ ಆ ಕಾಲದಲ್ಲಿ ಪ್ರಖ್ಯಾತವಾಗುತ್ತಿದ್ದ ಪ್ಯಸ್ಟಾಲಜಿಯ ಬೋಧನಾಕ್ರಮ ರಂಜನೀಯವಾಗಿ ಕಂಡಿತು. ಕ್ರಮೇಣ ಈ ಶಿಕ್ಷಣಕ್ರಮ ಎಲ್ಲಾ ಕಡೆಗೂ ಹರಡಿತು. ಮಾರ್ಗರೆಟ್ ಈ ವಿಧಾನವನ್ನು ಅನುಸರಿಸಿದಳು. ಅದೇ ಸಂದರ್ಭದಲ್ಲಿ ಶ್ರೀಮತಿ ದಿಲಿವ್ ಎಂಬುವಳು ಲಂಡನ್ನಿನಲ್ಲಿ ಒಂದು ಶಾಲೆಯನ್ನು ತೆರೆದಳು. ಆಕೆಯ ಆಹ್ವಾನದ ಮೇರೆಗೆ ಮಾರ್ಗರೆಟ್ ಅಲ್ಲಿಗೆ ಹೋಗಿ ೧೮೯೦ರಲ್ಲಿ ಶಿಕ್ಷಕಿಯಾಗಿ ಸೇರಿಕೊಂಡಳು. ಕ್ರಮೇಣ ೧೮೯೨ರಲ್ಲಿ ತನ್ನದೇ ಆದ ಶಾಲೆಯನ್ನು ವಿಂಬಲ್‌ಡನ್ನಿನಲ್ಲಿ ತೆರೆದಳು. ಅಲ್ಲಿ ಅವಳಿಗೆ ಯಾವುದು ಪ್ರಿಯವಾಗಿತ್ತೋ ಅದನ್ನು ಬೋಧಿಸಲು ಸ್ವಾತಂತ್ರ್ಯ ಸಿಕ್ಕಿತು.

ಆಕೆ ನೋಡಲು ಗೌರವರ್ಣದ ತೇಜಸ್ವಿಯಾಗಿದ್ದಳು, ಸದಾ ಮಂದಹಾಸ ಮೊಗದಲ್ಲಿ ಚಿಮ್ಮುತ್ತಿತ್ತು. ಇನ್ನೊಬ್ಬರಿಗೆ ಕಲಿಸುವ ಸ್ವಭಾವ ಆಕೆಗೆ ದೈವದತ್ತವಾಗಿ ಬಂದಿತ್ತು. ತನ್ನ ವಿದ್ಯಾರ್ಥಿಗಳ ಮೇಲೆ ಅದ್ಭುತ ಪ್ರಭಾವವನ್ನು ಬೀರುತ್ತಿದ್ದಳು. ಸ್ವಲ್ಪ ಕಾಲದಲ್ಲಿಯೇ ಲಂಡನ್ನಿನಲ್ಲಿ ಪ್ರಖ್ಯಾತ ಬೋಧಕಳಾದಳು. ಸಾಹಿತ್ಯ ಮತ್ತು ಧರ್ಮದಲ್ಲಿ ತುಂಬ ಆಸಕ್ತಿ ಇತ್ತು ಅವಳಿಗೆ.

ಬಾಲ್ಯದಿಂದಲೂ ಕ್ರೈಸ್ತಧರ್ಮದ ವಾತಾವರಣದಲ್ಲಿ ಬೆಳೆದಿದ್ದಳು. ಅವಳ ತಂದೆ ದೊಡ್ಡ ಬೋಧಕನಾಗಿದ್ದ. ಈ ಬೋಧನೆಯ ಕಲೆ ಅವಳಲ್ಲಿ ರಕ್ತಗತವಾಗಿ ಬಂದಿತ್ತು. ಜೀಸಸ್ ಕ್ರೈಸ್ತನ ಮೇಲೆ ಅದ್ಭುತ ವಿಶ್ವಾಸ ಮತ್ತು ಅವನ ತತ್ತ್ವಗಳಲ್ಲಿ ತುಂಬುಶ್ರದ್ಧೆಯಿತ್ತು. ಆದರೆ ಅವಳಿಗೆ ಸುಮಾರು ಹದಿನೆಂಟು ವರುಷವಾಗುವ ಹೊತ್ತಿಗೆ ಧರ್ಮವೆಂದರೆ ಬರೀ ನಂಬಿಕೆಯಲ್ಲ , ಧರ್ಮದಲ್ಲಿ ಬೆಳಕು ಕಾಣಬೇಕು, ಅದರಿಂದ ಶಾಂತಿ ಬರಬೇಕು; ಇದಲ್ಲದೆ ಬರೀ ಕೆಲವು ಸಿದ್ಧಾಂತಗಳನ್ನು ನಂಬಿದರೆ ಮಾತ್ರ ಸಾಲದು, ಸಿದ್ಧಾಂತ ಸ್ವಾನುಭವವಾಗಬೇಕು—ಎಂದು ಆಕೆ ಆಲೋಚಿಸತೊಡಗಿದಳು. ಸ್ವತಂತ್ರ ಆಲೋಚನಾ ಪ್ರವೃತ್ತಿ ಅವಳದಾಗಿತ್ತು. ಹಾಗೆ ಸ್ವತಂತ್ರವಾಗಿ ಆಲೋಚನೆ ಮಾಡಲು ತಾನಿದ್ದ ಚರ್ಚಿನಲ್ಲಿ ಅವಕಾಶವಿರಲಿಲ್ಲ. ಚರ್ಚಿಗೆ ಹೋಗುವುದನ್ನು ನಿಲ್ಲಿಸಿದಳು. ಅಂದರೆ ಅವಳು ನಾಸ್ತಿಕಳಾಗಲಿಲ್ಲ. ಜೀವನದಲ್ಲಿ ಒಂದು ನಂಬಿಕೆಯ ಊರುಗೋಲು ಬೇಕು. ಅದು ನಮ್ಮನ್ನು ಅನುಭವದ ಕಡೆಗೆ ತೆಗೆದುಕೊಂಡು ಹೋಗಬೇಕು. ಅವಳ ಮನಸ್ಸು ಈಗ ಅಶಾಂತಿಯಿಂದ ತಾಡಿತವಾಯಿತು. ಹಳೆಯ ನಂಬಿಕೆಗಳು ಹೋದವು, ಹೊಸ ಅನುಭವ ಬರಲಿಲ್ಲ. ಇದೊಂದು ತ್ರಿಶಂಕುವಿನ ಅವಸ್ಥೆ. ಜೀವನದಲ್ಲಿ ಎಲ್ಲರೂ ಈ ಮಾರ್ಗದ ಮೂಲಕ ಹೋಗಲೇಬೇಕಾಗಿದೆ. ಈ ಒಣ ಮಾರ್ಗ ಹೋದ ಮೇಲೆಯೇ ಸವಿಯನ್ನು ನಾವು ಕಾಣಲು ಸಾಧ್ಯ. ಇದೊಂದು ಪರ್ವ ಸಮಯ.

ಆಗಲೆ ಬುದ್ಧನ ಜೀವನ ಮತ್ತು ಅವನ ಸಂದೇಶವನ್ನು ಓದತೊಡಗಿದಳು. ಅವನ ಸಂದೇಶ ಅವಳಿಗೆ ತುಂಬಾ ಹಿಡಿಸಿತು. ಮೂರು ವರುಷಗಳ ಕಾಲ ಬೌದ್ಧಧರ್ಮದ ವಿಷಯಗಳನ್ನು ಅಧ್ಯಯನ ಮಾಡತೊಡಗಿದಳು. ಇದರಿಂದ ತಾತ್ಕಾಲಿಕ ತೃಪ್ತಿ ಬಂತು. ಕೆಲವು ಹಳೆಯ ಸಮಸ್ಯೆಗಳು ಹೋದವು. ಆದರೆ ಅದರ ಬದಿಯಲ್ಲೇ ಹೊಸ ಸಮಸ್ಯೆಗಳು ಉದ್ಭವಿಸಿದವು. ಜೀವನದಲ್ಲಿ ಯಾವಾಗ ಒಂದು ಆಧ್ಯಾತ್ಮಿಕ ದಾಹ ಹುಟ್ಟುವುದೊ ಅದನ್ನು ತೃಪ್ತಿಪಡಿಸುವ ವ್ಯಕ್ತಿಯೂ ಸಿಕ್ಕುವನು. ಜೀವನದ ನಿಯಮವೇ ಇದು.

### ಗುರುದರ್ಶನ

ನರೇಂದ್ರನಾಥದತ್ತ ಎಂಬುವನು ವಿಶ್ವನಾಥದತ್ತ ಮತ್ತು ಭುವನೇಶ್ವರಿ ದೇವಿ ಎಂಬ ದಂಪತಿಗಳಿಗೆ ೧೮೬೩ನೇ ಇಸವಿ ಜನವರಿ ೧೨ನೇ ತಾರೀಖಿನಲ್ಲಿ ಕಲ್ಕತ್ತೆಯಲ್ಲಿ ಜನಿಸಿದನು. ಅವನದು ಬಹುಮುಖದ ವ್ಯಕ್ತಿತ್ವ. ಆಟಪಾಟಗಳಲ್ಲಿ ಹೇಗೆ ಮುಂದೊ ಹಾಗೆಯೇ ಸಂಗೀತದಲ್ಲಿಯೂ ಮುಂದೆ, ಕಿನ್ನರಕಂಠ. ತಾನು ಬಿ.ಎ. ಪಾಸು ಮಾಡುವ ಸಮಯದಲ್ಲಿ ಬ್ರಹ್ಮಸಮಾಜಕ್ಕೆ ಸೇರಿದ ಮಹರ್ಷಿ ದೇವೇಂದ್ರನಾಥ ಠಾಕೂರರೊಡನೆ ''ಮಹಾಶಯರೆ, ನೀವು ದೇವರನ್ನು ಕಂಡಿರುವಿರಾ?'' ಎಂದು ಕೇಳಿದ. ಅದರಂತೆಯೇ ಹಲವರನ್ನು ಕೇಳಿದ. ಸರಿಯಾದ ಉತ್ತರ ಸಿಕ್ಕದೆ ಕೊನೆಗೆ ಶ್ರೀರಾಮಕೃಷ್ಣರ ಬಳಿಗೆ ಬಂದು ತನ್ನ ದಾಹವನ್ನು ಇಂಗಿಸಿಕೊಂಡನು. ಶ್ರೀರಾಮಕೃಷ್ಣರ ಕಾಲಾನಂತರ ನರೇಂದ್ರನೇ ಸ್ವಾಮಿ ವಿವೇಕಾನಂದರಾಗಿ ಪರಿವ್ರಾಜಕರಾಗಿ ಭರತಖಂಡವನ್ನೆಲ್ಲಾ ಸುತ್ತಾಡುತ್ತಿದ್ದಾಗ ಯಾರೋ ''ಅಮೇರಿಕಾ ದೇಶದಲ್ಲಿ ವಿಶ್ವಧರ್ಮ ಸಮ್ಮೇಳನ ನಡೆಯಲಿದೆ. ನೀವು ಅಲ್ಲಿಗೆ ಹೋದರೆ ನಿಮ್ಮ ಸಂದೇಶಕ್ಕೆ ಮಾನ್ಯತೆ ದೊರಕುವುದು'' ಎಂದು ಹೇಳಿದರು. ಅದರಂತೆಯೇ ೧೮೯೩ರಲ್ಲಿ ಚಿಕಾಗೋ ನಗರದಲ್ಲಿ ವಿಶ್ವಧರ್ಮ ಸಮ್ಮೇಳನದಲ್ಲಿ ಮಾತನಾಡಿ ಲೋಕವಿಖ್ಯಾತರಾದರು. ವೇದಾಂತದ ವಿಷಯಗಳನ್ನು ಎಲ್ಲರಿಗೂ ತಿಳಿಯುವಂತೆ ಹೃದಯಂಗಮವಾಗಿ ಬೋಧಿಸುತ್ತ ಅಮೆರಿಕಾ ದೇಶದಲ್ಲೆಲ್ಲಾ ೧೮೯೫ರ ತನಕ ಸುತ್ತಾಡಿದರು. ೧೮೯೫ರಲ್ಲಿ ಕೆಲವು ಆಂಗ್ಲರ ಆಮಂತ್ರಣದ ಮೇರೆಗೆ ಲಂಡನ್ನಿಗೆ ಹೋದರು. ಅಲ್ಲಿ



**ಚಿಕಾಗೋದಲ್ಲಿ ಸ್ವಾಮೀಜಿ**

ಹಲವು ಉಪನ್ಯಾಸಗಳನ್ನು ಮಾಡಿ 'ಹಿಂದೂ ಯೋಗಿ' ಎಂದು ಖ್ಯಾತಿಯನ್ನು ಗಳಿಸಿದರು.

ಲಂಡನ್ನಿನಲ್ಲಿ ಶ್ರೀಮತಿ ಇಸಾಬೆಲ ಮಾರ್ಗಸನ್ ಎಂಬ ಪ್ರತಿಭಾವಂತೆ ಇದ್ದಳು. ಈಕೆ ಮಾರ್ಗರೆಟ್‌ಗೂ ಸ್ನೇಹಿತೆಯಾಗಿದ್ದಳು. ಒಂದು ದಿನ ಇಸಾಬೆಲ ತನ್ನ ಮನೆಯಲ್ಲಿ ಉಪನ್ಯಾಸ ಮಾಡಬೇಕೆಂದು ಸ್ವಾಮಿ ವಿವೇಕಾನಂದರಿಗೆ ಆಮಂತ್ರಣವನ್ನು ಕಳುಹಿಸಿದಳು. ಆ ಸಮಯದಲ್ಲಿ ಮಾರ್ಗರೆಟ್ ನೋಬಲ್ ಕೂಡ ಅಲ್ಲಿದ್ದಳು.

ಅಂದು ಭಾನುವಾರ. ಸ್ವಾಮಿ ವಿವೇಕಾನಂದರು ಅಲ್ಲಿಗೆ ಬಂದು ಮಾತನಾಡಲು ಉಪಕ್ರಮಿಸಿದರು. ಅವರು ಕಾವಿಯ ನಿಲುವಂಗಿಯನ್ನು ಹಾಕಿಕೊಂಡಿದ್ದರು. ಮಾರ್ಗರೆಟ್ ಸ್ವಾಮಿ ವಿವೇಕಾನಂದರ ಪ್ರಶಾಂತ ಮುಖವನ್ನು ಕಂಡಳು. ಆಧ್ಯಾತ್ಮಿಕ ವಾತಾವರಣ ಆ ಸ್ಥಳದಲ್ಲಿ ಅನುರಣಿತವಾಗುತ್ತಿತ್ತು. ಮಧ್ಯೆ ಮಧ್ಯೆ ಸ್ವಾಮಿ ವಿವೇಕಾನಂದರು ''ಶಿವ ಶಿವ'' ಎನ್ನುತ್ತಿದ್ದರು.

ಮಾರ್ಗರೆಟ್‌ಗೆ ಮೊದಲು ಅವರ ಮಾತಿನಲ್ಲಿ ಒಂದು ನವೀನತೆ ಕಾಣದಿದ್ದರೂ, ಕ್ರಮೇಣ ಅವರ ಮಾತನ್ನು ಕೇಳುತ್ತಿದ್ದಂತೆ ಅವರ ಭಾವನೆಗಳಲ್ಲಿ ಆಸಕ್ತಿ ಕೆರಳಿತು. ಪ್ರತಿದಿನವೂ ಅವರ ಪ್ರವಚನಕ್ಕೆ ಹೋಗತೊಡಗಿದಳು. ವಿವೇಕಾನಂದರು ಹೇಳಿದುದನ್ನು ಚೆನ್ನಾಗಿ ಮಂಥನ ಮಾಡತೊಡಗಿದಳು. ಕ್ರಮೇಣ ಅವರ ಸಂದೇಶಕ್ಕೆ ಮನ ಸೋತಳು. ಒಂದು ದಿನ ಮಾತನಾಡುತ್ತಿದ್ದಾಗ ಸ್ವಾಮಿ ವಿವೇಕಾನಂದರು ಹೀಗೆ ಹೇಳಿದರಂತೆ, ''ಪ್ರಪಂಚಕ್ಕೆ ಈಗ ಬೇಕಾಗಿರುವುದು ದಾರಿಯಲ್ಲಿ ನಿಂತು 'ದೇವರು ವಿನಃ ನನಗೆ ಏನೂ ಬೇಕಾಗಿಲ್ಲ' ಎಂದು ಹೇಳಬಲ್ಲ ಇಪ್ಪತ್ತು ಜನ ಸ್ತ್ರೀ ಪುರುಷರು. ಯಾರು ಇದಕ್ಕೆ ಸಿದ್ಧರಾಗಿದ್ದೀರಿ?'' ಎಂದು. ವಿವೇಕಾನಂದರು ಮಾರ್ಗರೆಟ್‌ಗೆ ಬರೆದ ಕಾಗದದಲ್ಲಿ ''ಬಹುಜನರ ಹಿತಕ್ಕೆ ಪ್ರಪಂಚದ ಅತ್ಯಂತ ಶ್ರೇಷ್ಠ ವ್ಯಕ್ತಿಗಳು ತಮ್ಮನ್ನು ಬಲಿದಾನ ಮಾಡಿಕೊಳ್ಳಬೇಕು. ನೂರಾರು ಮಂದಿ ಬುದ್ಧರು, ಅನುಕಂಪ ಮತ್ತು ಪ್ರೀತಿಯಿಂದ ಪ್ರೇರಿತರಾದವರು ಬೇಕಾಗಿದ್ದಾರೆ!'' ಎಂದು ತಿಳಿಸಿದ್ದರು. ಮತ್ತೊಂದು ದಿನ ಮಾತನಾಡುತ್ತಿದ್ದಾಗ ''ನೀನು ಈ ಸೇವೆಗೆ ಸೇರುವುದಕ್ಕೆ ಸಿದ್ಧಳಾಗಿರುವೆಯೋ'' ಎಂದು ಕೇಳಿದರು. ''ನಮ್ಮ ದೇಶದ ಜನರನ್ನು ಮೇಲೆತ್ತುವ ಕೆಲಸದಲ್ಲಿ ಸ್ತ್ರೀಯರು ಬೇಕಾಗಿದ್ದಾರೆ. ನೀನು ಅದಕ್ಕೆ ಸಮ್ಮತಿ ಇತ್ತರೆ ಭರತಖಂಡಕ್ಕೆ ದೊಡ್ಡ ಸಹಾಯವಾಗುವುದು'' ಎಂದರು. ಇದನ್ನು ಕೇಳಿದಾಗ ಅವಳಿಗೆ ಅತೀವ ಸಂತೋಷವಾಯಿತು. ಅವಳು ತನ್ನ ಜೀವನವನ್ನು ಬದಲಾಯಿಸಿ ಇಂಡಿಯಾ ದೇಶಕ್ಕೆ ಬರಲು ಸಿದ್ಧಳಾದಳು.

ಮೊದಲು ವಿವೇಕಾನಂದರು ಕಲ್ಕತ್ತೆಗೆ ಬಂದರು. ಅನಂತರ ಇಂಡಿಯಾ ದೇಶದ ಪರಿಸ್ಥಿತಿಯನ್ನು ವಿವರಿಸಿ ಆಕೆಗೆ ಪತ್ರ ಬರೆದರು. ''ಇಲ್ಲಿ ಕಷ್ಟಕಾರ್ಪಣ್ಯ, ಮೂಢನಂಬಿಕೆ ಇವೆ. ಮೊದಮೊದಲು ಜನ ಅನುಮಾನದಿಂದ ನೋಡುವರು. ಇಂಗ್ಲೆಂಡಿನ ಯಾವ ಸೌಕರ್ಯಗಳೂ ಇಲ್ಲ. ಬೇಕಾದರೆ ನೀನು ಬರಬಹುದು. ಒಂದು ವೇಳೆ ನೀನು ಹಿಂತಿರುಗಿ ಹೋದರೂ ನಾನು ನಿನ್ನನ್ನು ಈಗ ಹೇಗೆ ಪ್ರೀತಿಸುತ್ತಿರುವೆನೋ ಹಾಗೇ ಪ್ರೀತಿಸುವೆ'' ಎಂದು ಅವರು ಬರೆದರು.

### ಇಂಡಿಯಾ

ಮಾರ್ಗರೆಟ್ ೧೮೯೮ ಜನವರಿ ೨೮ರಲ್ಲಿ ಇಂಡಿಯಾ ದೇಶಕ್ಕೆ ಬಂದಳು. ಸ್ವಾಮಿ ವಿವೇಕಾನಂದರು ಕಲ್ಕತ್ತೆಯ ಬಂದರಿನಲ್ಲಿ ಅವಳನ್ನು ಬರಮಾಡಿಕೊಂಡರು. ಮಾರ್ಗರೆಟ್‌ಗೆ ಈ ವಿಶಾಲ ಪ್ರಪಂಚವಾದ ಇಂಡಿಯಾ ದೇಶದಲ್ಲಿ ಸ್ವಾಮಿ ವಿವೇಕಾನಂದರು ವಿನಃ ಬೇರೆ ಯಾರೂ ಪರಿಚಯವಿರಲಿಲ್ಲ. ಅವಳು ಚೌರಂಗಿಯ ಹೋಟೆಲಿನಲ್ಲಿ ಮೊದಲು ಕೆಲವು ದಿನಗಳು ಇದ್ದಳು. ಕೆಲವು ಆಂಗ್ಲೇಯರೊಡನೆ ಕಲ್ಕತ್ತೆಯನ್ನು ನೋಡಿ ಬಂದಳು. ಆಗಿನ ಕಾಲದಲ್ಲಿ ಚೌರಂಗಿಯಲ್ಲಿ ಕೇವಲ ಆಂಗ್ಲೇಯರು ಮಾತ್ರ ಇದ್ದರು. ಹಿಂದೂಗಳು ಇರುವ ಕಡೆ ಅವರನ್ನು ಕಾಣಲು ಹೋಗಿ ಬಂದಳು. ಕೆಲವು ದಿನಗಳಾದ ಮೇಲೆ ಸ್ವಾಮಿ ವಿವೇಕಾನಂದರನ್ನು ಕಾಣಲು ಕೆಲವು ಅಮೆರಿಕ ಶಿಷ್ಯರು ಬಂದರು. ಅವರೇ ಸಾರಾ ಬುಲ್ ಮತ್ತು ಜೊಸೆಫಿನ್ ಮ್ಯಾಕ್ಲಿಯಾಡ್. ಮಾರ್ಗರೆಟ್‌ಗೂ ಇವರಿಗೂ ನಿಕಟ ಸಂಬಂಧ ಬೆಳೆಯಿತು.

ಈ ಮೂವರೂ ಕಲ್ಕತ್ತೆಯಿಂದ ಸ್ವಲ್ಪ ಮೈಲಿ ದೂರದಲ್ಲಿರುವ ಬೇಲೂರು ಮಠಕ್ಕೆ ಬಂದರು. ಅಲ್ಲಿ ಗಂಗಾನದಿಯ ತೀರದಲ್ಲಿರುವ ಒಂದು ಮನೆಯಲ್ಲಿ ಕೆಲವು ಕಾಲ ತಂಗಿದ್ದರು. ಸ್ವಾಮೀಜಿ ಪ್ರತಿದಿನವೂ ಅಲ್ಲಿಗೆ ಹೋಗಿ ತಮ್ಮ ಆದರ್ಶ ಮತ್ತು ಕೆಲಸದ ವಿಷಯ ಮಾತನಾಡುತ್ತಿದ್ದರು. ಅವರಿಗೆ ರಾಜಪುತ್ರರ ಶೌರ್ಯ, ಸಿಖ್ಖರಲ್ಲಿದ್ದ ಶ್ರದ್ಧೆ, ಮರಾಠರಲ್ಲಿದ್ದ ಧೈರ್ಯ ಮುಂತಾದುವುಗಳನ್ನು ಹೇಳಿದರು. ಅವರಿಗೆ ಭಾರತೀಯ ಸ್ತ್ರೀ ಪುರುಷರ ಆದರ್ಶಗಳನ್ನು ವಿವರಿಸಿದರು.

ಮಾರ್ಚ್ ೧೭ನೇ ತಾರೀಖು ಮಾರ್ಗರೆಟ್ ಶ್ರೀರಾಮಕೃಷ್ಣರ ಅರ್ಧಾಂಗಿಯಾದ ಶ್ರೀಮಾತೆ ಶಾರದಾದೇವಿಯವರನ್ನು ಕಂಡಳು.



**ಗುರು ಮತ್ತು ಶಿಷ್ಯೆ**

ಅವರನ್ನು ತುಂಬಾ ಮೆಚ್ಚಿಕೊಂಡಳು. ಮಾಧುರ್ಯ ಸೌಹಾರ್ದಗಳ ಚಿಲುಮೆ ಇವರು ಎಂದಳು.

ಮಾರ್ಚ್ ೨೫ನೇ ತಾರೀಖು ಮತ್ತೊಂದು ಗಮನಾರ್ಹ ಘಟನೆ ನಡೆಯಿತು. ಅಂದು ಶುಕ್ರವಾರ. ಮಾರ್ಗರೆಟ್‌ಗೆ ಸ್ವಾಮಿ ವಿವೇಕಾನಂದರು ಬ್ರಹ್ಮಚರ್ಯ ದೀಕ್ಷೆಯನ್ನಿತ್ತು **'ನಿವೇದಿತಾ'** ಎಂದು ನಾಮಕರಣ ಮಾಡಿದರು. ಅಂದಿನಿಂದ ಅವಳು ಭಗವಂತನಿಗೆ ಅರ್ಪಿತ ಪ್ರಾಣಳಾದಳು.

ಆ ವರ್ಷದ ಬೇಸಿಗೆಯಲ್ಲಿ ನಿವೇದಿತಾ ಮತ್ತು ಇತರ ವಿದೇಶೀ ಸ್ತ್ರೀಯರು ಸ್ವಾಮೀಜಿಯೊಡನೆ ಉತ್ತರಭಾರತ ಯಾತ್ರೆಗೆ ಹೊರಟರು. ಸ್ವಾಮೀಜಿ ಹೋದ ಕಡೆಯಲ್ಲೆಲ್ಲಾ ಹಿಂದೂ ಸಂಸ್ಕೃತಿ, ತತ್ತ್ವ ಅವರ ಆದರ್ಶ ಇವುಗಳನ್ನು ವಿವರಿಸತೊಡಗಿದರು. ಮೊದಲು ಪಾಟ್ನಾಗೆ ಹೋದರು. ಹತ್ತಿರದಲ್ಲಿ ಹರಿಯುತ್ತಿದ್ದ ಗಂಗಾನದಿ ಅವರನ್ನು ಆಕರ್ಷಿಸಿತು. ಬುದ್ಧನು ತಪಸ್ಸುಗೈದ ಬೋಧಗಯೆಯನ್ನು ಸಂದರ್ಶಿಸಿದರು. ಮುಂದೆ ಹಿಮಾಲಯದ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿಯಿತ್ತು, ಅನಂತರ ಎಲ್ಲರೂ ಕಾಶ್ಮೀರಕ್ಕೆ ಹೋದರು. ಕಾಶ್ಮೀರದಲ್ಲಿ ಪ್ರೇಕ್ಷಣೀಯ ಸ್ಥಳಗಳನ್ನೆಲ್ಲ ನೋಡಿ, ಸ್ವಾಮೀಜಿ ಅಮರನಾಥಕ್ಕೆ ನಿವೇದಿತಾಳೊಡನೆ ಹೋದರು. ಇತರರೊಡನೆ ಅಮರನಾಥಕ್ಕೆ ಹೋಗುತ್ತಿದ್ದಾಗ ಸ್ವಾಮೀಜಿ ಎಲ್ಲರಂತೆಯೇ ವೇಷಭೂಷಣಗಳನ್ನು ತೊಟ್ಟರು. ಅನಂತರ ವಿಶಾಲವಾದ ಗುಹೆಯಲ್ಲಿರುವ ಶಿವನನ್ನು ದರ್ಶನ ಮಾಡಿದರು. ಆ ವಾತಾವರಣದಲ್ಲಿ ಸಂಪೂರ್ಣ ಭಾವೈಕ್ಯರಾದರು.

ಸ್ವಾಮಿ ವಿವೇಕಾನಂದರು ನಿವೇದಿತೆಯೊಡನೆ ಹೋಗುತ್ತಿದ್ದಾಗ ಇಂಡಿಯಾ ದೇಶದ ಇತಿಹಾಸ, ಅಲ್ಲಿದ್ದ ರಾಜರು, ಯೋಧರು, ಸಾಧುಸಂತರು ಅವರಿಂದ ರಚಿತವಾದ ಕಲಾಕೌಶಲ್ಯಗಳನ್ನು ವಿವರಿಸಿದರು. ನಿವೇದಿತಾ ಇಂಗ್ಲೆಂಡ್ ತುಂಬಾ ದೊಡ್ಡ ಜನಾಂಗವೆಂದು ಕೊಂಡಿದ್ದಳು. ಭರತಖಂಡಕ್ಕೆ ಅವರು ಮಹದುಪಕಾರ ಮಾಡಿದರು ಎಂದು ಭಾವಿಸಿಕೊಂಡಿದ್ದಳು. ಭರತಖಂಡಕ್ಕೆ ಬೇಕಾದಷ್ಟು ಒಳ್ಳೆಯದನ್ನು ಇಂಗ್ಲಿಷರು ಮಾಡಿದ್ದರು. ಆದರೆ ಅವರು ದೊಡ್ಡ ಅಪಕಾರವನ್ನು ಕೂಡ ಮಾಡಿದ್ದಾರೆ ಎಂಬುದನ್ನು ನಂಬಲು ಅವಳಿಗೆ ಆಗಲಿಲ್ಲ. ಸ್ವಾಮಿ ವಿವೇಕಾನಂದರಿಗೂ ನಿವೇದಿತಾಳಿಗೂ ಹಲವು ಭಿನ್ನಾಭಿಪ್ರಾಯಗಳಿದ್ದವು. ಅವನ್ನು ಅಷ್ಟು ಸುಲಭವಾಗಿ ರಾಜಿ ಮಾಡಿಕೊಳ್ಳಲು ಆಗಲಿಲ್ಲ. ಆಗ ನಿವೇದಿತಾಳಿಗೆ ಕೆಲವು ಕಾಲ ಸ್ವಾಮಿ ವಿವೇಕಾನಂದರಿಂದ ಬೇರೆ ಇರುವುದು ಮೇಲು ಅನ್ನಿಸಿತು.

ಆ ಸಮಯದಲ್ಲಿ ಭಗವದ್ಗೀತೆಯನ್ನು ಓದಿದಳು, ಧ್ಯಾನ ಜಪಗಳನ್ನು ಮಾಡಿದಳು. ಅವಳ ಮನಸ್ಸು ಇವುಗಳಿಂದ ಶುಭ್ರವಾದಾಗ ತನ್ನ ತಪ್ಪು ಚೆನ್ನಾಗಿ ಗೊತ್ತಾಯಿತು. ಹಲವು ದಿನಗಳು ನಿರ್ಜನದಲ್ಲಿ ಇದ್ದಾದ ಮೇಲೆ ಒಂದು ದಿನ ಸ್ವಾಮೀಜಿ ನಿವೇದಿತಾಳನ್ನು ಆಶೀರ್ವದಿಸಿದರು. ಅಂದಿನಿಂದ ಅವಳು ಶಾಂತಿಯನ್ನು ಅನುಭವಿಸಿದಳು.

ಸ್ವಾಮಿ ವಿವೇಕಾನಂದರು ಆತ್ಮನ ಮೋಕ್ಷ ಮತ್ತು ಜಗತ್ತಿನ ಹಿತ ಎಂಬ ಭಾವವನ್ನು ಚೆನ್ನಾಗಿ ವಿವರಿಸಿದರು. ಒಬ್ಬನು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಧ್ಯಾನ ಜಪಗಳನ್ನು ಮಾಡಬೇಕು. ಅನಂತರ ಎಲ್ಲರ ಒಳ್ಳೆಯದಕ್ಕೂ ತನ್ನ ಬಾಳನ್ನು ಅರ್ಪಿಸಬೇಕು ಎಂಬ ಸಿದ್ಧಾಂತವನ್ನು ನಿವೇದಿತಾ ಅರ್ಥಮಾಡಿಕೊಂಡಳು. ಆಕೆ ಭರತಖಂಡಕ್ಕೆ ಸೇವೆ ಮಾಡಲು ಬಂದವಳು. ನಿವೇದಿತಾ ಭರತಖಂಡಕ್ಕೆ ಶಿಷ್ಯೆಯಂತೆ ಬಂದಳು. ಅವಳಲ್ಲಿ ಮತ್ತೊಬ್ಬರಿಗೆ ಉಪಕಾರ ಮಾಡುತ್ತಿರುವೆನು ಎಂಬ ಭಾವನೆ ಇರಲಿಲ್ಲ.

### ಶಾಲೆ

ಕಲ್ಕತ್ತೆಗೆ ಬಂದಮೇಲೆ ನಿವೇದಿತಾ ಬಾಗ್‌ಬಜಾರಿನಲ್ಲಿ ಶ್ರೀಮಾತೆಯವರಿದ್ದ ಮನೆಗೆ ಹೋದಳು. ಅವರೊಡನೆ ಶ್ರೀರಾಮಕೃಷ್ಣರ ಭಕ್ತೆಯರೂ ಇದ್ದರು. ನಿವೇದಿತಾಗೆ ಪ್ರತ್ಯೇಕವಾದ ಒಂದು ಕೋಣೆ ಇರಲಿಲ್ಲ, ಇತರರೊಡನೆ ಇದ್ದಳು. ಸರಳ ಜೀವನ ನಡೆಸುತ್ತಾ ಭಗವಂತನ ಧ್ಯಾನ ಜಪ ಪೂಜೆಯಲ್ಲಿ ಕಾಲ ಕಳೆದಳು. ನಿವೇದಿತಾ ಇದೇ ಮೊದಲ ಬಾರಿ ಹಿಂದೂಗಳ ಮನೆಯಲ್ಲಿ ಇದ್ದದ್ದು. ಒಂದು ವಾರ ಅಲ್ಲಿದ್ದ ಮೇಲೆ ಅವಳು ತನ್ನ ಸ್ವಂತ ಮನೆಗೆ ಹೋದಳು. ಇದು ಶ್ರೀಮಾತೆ ಇದ್ದ ಮನೆಯ ಹತ್ತಿರವೇ ಇತ್ತು.

ಬೋಸಪಾರ ಬೀದಿಯಲ್ಲಿ ಹದಿನಾರನೆ ಮನೆಯೇ ಅವಳದಾಗಿತ್ತು. ಕಾಳಿಯ ಪೂಜೆಯ ದಿನ ಬಾಲಕಿಯರ ಶಾಲೆ ಅಲ್ಲಿ ಆರಂಭವಾಯಿತು. ಶ್ರೀಮಾತೆಯವರು ಪ್ರಾರಂಭೋತ್ಸವವನ್ನು ಮಾಡಿದರು. ಸ್ವಾಮಿ ವಿವೇಕಾನಂದರು ಮತ್ತು ಇತರ ಗುರು ಭಕ್ತರುಗಳು ಅಲ್ಲಿಗೆ ಬಂದಿದ್ದರು. ಶ್ರೀಮಾತೆಯವರು ಶಾಲೆಯನ್ನು ಆದರ್ಶ ಮಹಿಳೆಯರ ಬೀಡು ಆದಾಗಲಿ ಎಂದು ಆಶೀರ್ವದಿಸಿದರು.

ಮುಂದಿನ ಮಾರ್ಚ್‌ನಲ್ಲಿ ಪ್ಲೇಗು ಜಾಡ್ಯ ಕಲ್ಕತ್ತೆಯಲ್ಲಿ ಹರಡಿತು. ಸಾಧ್ಯವಾದವರು ತಮ್ಮ ಸ್ಥಳ ಬಿಟ್ಟು ಹೋದರು. ಸ್ವಾಮಿ ವಿವೇಕಾನಂದರು ತಮ್ಮ ಶಿಷ್ಯರೊಡನೆ ಪ್ಲೇಗಿನ ನಿವಾರಣೆಯ ಕೆಲಸದಲ್ಲಿ ಮೈಮರೆತರು. ಸೋದರಿ ನಿವೇದಿತಾ ಕೂಡ ಕೆಲವು ಸೇವಾದಳದೊಂದಿಗೆ ಪ್ಲೇಗಿನ ನಿವಾರಣೆಯ ಕೆಲಸಕ್ಕೆ ಕೈಹಾಕಿದಳು.

ಸೋದರಿ ನಿವೇದಿತಾ ತಾನೇ ಬೀದಿಯನ್ನು ಗುಡಿಸಲು ಪ್ರಯತ್ನಿಸುತ್ತಿದ್ದಾಗ ಇತರರೂ ಅವಳ ನೆರವಿಗೆ ಬಂದರು. ಪ್ಲೇಗಿನ ಸಮಯದಲ್ಲಿ ವಿದ್ಯಾರ್ಥಿಗಳು ಏನು ಮಾಡಬೇಕೆಂದು ಬೋಧನೆ ಮಾಡಿದಳು. ಇವಳ ಸೇವೆಯನ್ನು ಸುತ್ತಮುತ್ತ ಇದ್ದವರೆಲ್ಲ ಮೆಚ್ಚಿದರು. ಆಕೆಯಿಂದ ಸ್ಫೂರ್ತಿಯನ್ನು ಪಡೆದು ಇತರರೂ ಈ ಸೇವಾಕಾರ್ಯದಲ್ಲಿ ಭಾಗಿಗಳಾದರು.

ನಿವೇದಿತಾ ಶಾಲೆಯನ್ನು ಸಣ್ಣ ರೀತಿಯಲ್ಲಿ ಪ್ರಾರಂಭಿಸಿದಳು. ಇನ್ನು ಆರು ತಿಂಗಳ ನಂತರ ಆ ಕೆಲಸವನ್ನು ಮುಂದುವರಿಸಬೇಕಾದರೆ ಹಣದ ಆವಶ್ಯಕತೆ ಇತ್ತು. ಅದೇ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರು ಯೂರೋಪ್ ಮತ್ತು ಅಮೇರಿಕಾ ದೇಶಗಳಿಗೆ ಹೊರಟರು. ಸೋದರಿ ನಿವೇದಿತಾ ಕೂಡ ಹಣ ಸಂಗ್ರಹಣಕ್ಕಾಗಿ ಅವರೊಡನೆ ವಿದೇಶಕ್ಕೆ ಹೋದಳು. ಹಡಗಿನಲ್ಲಿದ್ದಾಗ ತಮ್ಮ ಗುರುವಿನೊಡನೆ ನಿವೇದಿತಾ ಮಾತನಾಡುತ್ತಿದ್ದಳು. ಈ ಸಂಭಾಷಣೆ ಅವಳಿಗೊಂದು ಅಧ್ಯಯನವಾಯಿತು. ಅದಕ್ಕಿಂತ ಲಾಭದಾಯಕವಾದುದು, ಸ್ವಾಮಿ ವಿವೇಕಾನಂದರು ಹಡಗಿನಲ್ಲಿ ಏನು ಹೇಳುತ್ತಿದ್ದರೊ ಅದನ್ನು ಅವಳು ''ನಾ ಕಂಡಂತೆ ನನ್ನ ಗುರುದೇವ'' ಎಂಬ ಪುಸ್ತಕದಲ್ಲಿ ಬರೆದಿಟ್ಟಿರುವುದು. ಇದೊಂದು ಸ್ಮೃತಿಸಂಕಲನವಾಗಿದ್ದು ಸ್ವಾಮೀಜಿಯವರನ್ನು ತಿಳಿದುಕೊಳ್ಳುವುದಕ್ಕೆ ಈ ಪುಸ್ತಕ ಮಹಾ ಉಪಕಾರಿಯಾಗಿದೆ. ಸ್ವಾಮೀಜಿ ನಿವೇದಿತಾಳೊಡನೆ ಜುಲೈ ೩೧ನೇ ತಾರೀಖು ಲಂಡನ್ನನ್ನು ತಲುಪಿ ಆಗಸ್ಟ್ ೧೭ನೇ ತಾರೀಖು ಅಮೇರಿಕಾಕ್ಕೆ ಹೋದರು. ನಿವೇದಿತಾ ಲಂಡನ್ನಿನಲ್ಲಿ ಒಂದು ತಿಂಗಳು ಇದ್ದಳು.

ಅನಂತರ ನಿವೇದಿತಾ ಹಣ ಸಂಗ್ರಹಣೆಗೆ ಅಮೇರಿಕಾ ದೇಶಕ್ಕೆ ಹೋದಳು. ಅಮೇರಿಕಾ ದೇಶದಲ್ಲಿ ಜನರ ಸಂಕುಚಿತ ಮನೋಭಾವವನ್ನು ವಿಶಾಲಪಡಿಸಲು ಯತ್ನಿಸಿದಳು. 'ಬಾಲಕಿಯರಿಗೆ ಒಂದು ಶಾಲೆ' ಎಂಬ ಸಣ್ಣ ಪುಸ್ತಕವನ್ನು ಬರೆದಳು. ಅವಳ ಭಾಷಣಗಳು ಪ್ರಭಾವಕಾರಿಯಾದುವು. ಅಮೇರಿಕಾ ಜನರಲ್ಲಿ ಇಂಡಿಯಾ ದೇಶದ ಜನರ ಮೇಲೆ ಇದ್ದ ಪೂರ್ವಕಲ್ಪಿತ ಕಾಲ್ಪನಿಕ ಭಾವನೆಗಳನ್ನು ನಿವಾರಿಸಲು ಯತ್ನಿಸಿದಳು. ಅದಕ್ಕೆ ಬೇಕಾದಷ್ಟು ಟೀಕೆಗಳು ಬಂದುವು. ಆದರೆ ನಿವೇದಿತಾ ಧೈರ್ಯದಿಂದ ಅವನ್ನು ಎದುರಿಸಿದಳು. ಟೀಕೆ ಟಿಪ್ಪಣಿಗಳಿಗೆ ಆಕೆ ಮಣಿಯಲಿಲ್ಲ.



ಅಮೇರಿಕಾದಿಂದ ನಿವೇದಿತಾ ಸ್ವಾಮೀಜಿಯನ್ನು ನೋಡಲು ಫ್ರಾನ್ಸಿಗೆ ಹೋದಳು. ಆಗ ಅವರು ಫ್ರಾನ್ಸಿನ ಬ್ರಿಟಾನಿ ಎಂಬ ಸ್ಥಳದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಅಲ್ಲಿಂದ ಅವರು ನಿವೇದಿತಾಳಿಗೆ ಒಂದು ಆಶೀರ್ವಚನವನ್ನು ಬರೆದು ಕಳುಹಿಸಿದ್ದರು. ಇಂಗ್ಲಿಷಿನಲ್ಲಿ ಅದು ಹೀಗಿದೆ:

'' The mother's heart, the hero's will
The sweetness of the southern breeze,
The sacred charm and strength that dwell
On Aryan altars, flaming, free
All these be yours and many more,
No ancient soul could dream before--
Be thou to India's future son
The Mistress, servent, friend in one.''

''ತಾಯಿಯ ಹೃದಯ, ವೀರನ ಪ್ರಚಂಡ ಇಚ್ಛಾಶಕ್ತಿ, ದಕ್ಷಿಣ ತಂಗಾಳಿಯ ಮಾಧುರ್ಯ, ಆರ್ಯರ ಯಜ್ಞಕುಂಡದಿಂದ ಏಳುವ ಜ್ಯೋತಿ ಮತ್ತು ಸ್ವಾತಂತ್ರ್ಯದಲ್ಲಿರುವ ಪವಿತ್ರ ಆಕರ್ಷಣೆ ಹಾಗೂ ಶಕ್ತಿ, ಇವುಗಳೆಲ್ಲ , ಜೊತೆಗೆ ಯಾವ ಪುರಾತನ ವ್ಯಕ್ತಿಯೂ ಕಲ್ಪಿಸಿಕೊಳ್ಳುವುದಕ್ಕೂ ಅಸಾಧ್ಯವಾದ ಸದ್ಗುಣಗಳೆಲ್ಲವೂ ನಿನ್ನ ಪಾಲಿಗೆ ಬರಲಿ. ನೀನು ಭವಿಷ್ಯ ಭರತಖಂಡದ ಪುತ್ರನಿಗೆ ಗೃಹಿಣಿ, ದಾಸಿ ಮತ್ತು ಸಖಿ ಎಲ್ಲವೂ ಆಗು.''

ನಿವೇದಿತಾ ಇಂಗ್ಲೆಂಡಿನ ಹಲವು ಕಡೆಗಳಲ್ಲಿ ಭಾರತದ ಸಂಬಂಧವಾಗಿ ಹಲವು ಉಪನ್ಯಾಸಗಳನ್ನು ನೀಡಿದಳು. ಇಂಗ್ಲಿಷರು ಇದನ್ನು ಮೆಚ್ಚಲಿಲ್ಲ.

ಏಕೆಂದರೆ ಆಗ ಅವರು ಭಾರತ ದೇಶವನ್ನು ಆಳುತ್ತಿದ್ದರು. ಆಳಲ್ಪಟ್ಟವರನ್ನು ಹೊಗಳುವುದನ್ನು ಅವರು ಮೆಚ್ಚಲಿಲ್ಲ. ನಿವೇದಿತಾ ೧೯೦೨, ಜನವರಿಯಲ್ಲಿ ಕಲ್ಕತ್ತೆಗೆ ಹಿಂದಿರುಗಿದಳು. ಅಷ್ಟರ ಹೊತ್ತಿಗೆ ಅವಳು ಇಂಡಿಯಾ ದೇಶವನ್ನು ತನ್ನ ದೇಶವೆಂದು, ಭಾರತೀಯರನ್ನು ತನ್ನ ಭಾರತೀಯರು ಎಂದು ಪರಿಗಣಿಸತೊಡಗಿದ್ದಳು. ಕಲ್ಕತ್ತೆಗೆ ಹಿಂತಿರುಗಿ ಬಾಗ್‌ಬಜಾರ್‌ನಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡಳು. ವಿದ್ಯಾಲಯವನ್ನು ನಡೆಸಲು ಅವಳಿಗೆ ಸಹಾಯಕಳಾಗಿದ್ದ ಸೋದರಿ ಕ್ರಿಸ್ಟೈನ್ ಎಂಬ ಅಮೆರಿಕನ್ ಮಹಿಳೆ ಅದೇ ಮನೆಯಲ್ಲಿ ವಾಸಿಸುತ್ತಿದ್ದಳು.

ಅನೇಕ ಜನ ಪ್ರಖ್ಯಾತ ವ್ಯಕ್ತಿಗಳು ಅವಳನ್ನು ಕಾಣಲು ಅಲ್ಲಿಗೆ ಬರುತ್ತಿದ್ದರು. ಸ್ವಾಮಿ ವಿವೇಕಾನಂದರು, ಶ್ರೀಮಾತೆ ಶಾರದಾದೇವಿಯರು, ಹಲವು ಸಂನ್ಯಾಸಿ ಭಕ್ತರು ಮತ್ತು ಗೃಹಸ್ಥ ಭಕ್ತರು ಅಲ್ಲಿಗೆ ಬರುತ್ತಿದ್ದರು. ಕವಿಗಳು, ಚಿತ್ರಕಾರರು, ರಾಜಕಾರಣಿಗಳು, ವಿದ್ಯಾ

ವಂತರು, ವಿಜ್ಞಾನಿಗಳಿಗೆ ಅದು ಬಿಡಾರವಾಯಿತು. ಆ ಮನೆಯನ್ನು ''ಸಹೋದರಿಯರ ಮನೆ'' ಎಂದು ನಾಮಕರಣ ಮಾಡಿದರು. ಈ ಮನೆಯಲ್ಲಿ ತನ್ನ ಕೊನೆಗಾಲದವರೆಗೆ ಆಕೆ ಇದ್ದಳು. ಯಾರಾದರೂ ಆರೋಗ್ಯ ನಿಮಿತ್ತ ಬೇರೆ ಕಡೆಗೆ ಹೋಗಿ ಎಂದು ಒತ್ತಾಯ ಮಾಡಿದಾಗ, ''ನನಗೆ ಮೊದಲು ವಾಸಕ್ಕೆ ಸ್ಥಳ ಕೊಟ್ಟ ಮನೆಯನ್ನು ಹೇಗೆ ಬಿಡುವುದು'' ಎಂದು ಅಲ್ಲಿಯೇ ಇದ್ದಳು. ಪುನಃ ಅಲ್ಲಿ ಶಾಲೆಯನ್ನು ಪ್ರಾರಂಭ ಮಾಡಿದಳು. ಆ ಸಮಯದಲ್ಲಿ ಸ್ವಾಮಿ ವಿವೇಕಾನಂದರು ಕಾಶಿಯಲ್ಲಿದ್ದರು. ಅವರು ನಿವೇದಿತಾಳಿಗೆ ಶುಭ ಕೋರಿ ಒಂದು ಚೆನ್ನಾದ ಕಾಗದವನ್ನು ಬರೆದರು.

ವಸಂತ ಋತುವಿನಲ್ಲಿ ಅಲ್ಲಿ ಸರಸ್ವತಿ ಪೂಜೆಯನ್ನು ನೆರವೇರಿಸಿದಳು. ಗಂಡಸರು ಹೆಂಗಸರು ಶ್ರೀಮಂತರು ಬಡವರು ಎಲ್ಲರೂ ಈ ಉತ್ಸವದಲ್ಲಿ ಭಾಗವಹಿಸಿದರು. ಶಾಲೆ ಶುರುವಾದ ಪ್ರಾರಂಭದಲ್ಲಿ ಜನರು ಆ ಶಾಲೆಗೆ ತಮ್ಮ ಮಕ್ಕಳನ್ನು ಕಳುಹಿಸಲು ಒಪ್ಪುತ್ತಿರಲಿಲ್ಲ. ಕ್ರಮೇಣ ತಂದೆತಾಯಿಗಳಿಗೆ ಅವಳ ಉದ್ದೇಶ ಮನದಟ್ಟಾಗಿ ಮಕ್ಕಳನ್ನು ಕಳುಹಿಸಲು ಒಪ್ಪಿಕೊಂಡರು. ಅಲ್ಲಿಗೆ ಬರುವ ಮಕ್ಕಳ ಮೇಲೆ ತನ್ನ ಪ್ರಭಾವವನ್ನು ಬೀರಿದಳು. ಮಕ್ಕಳೆಲ್ಲಾ ಅವಳನ್ನು ತಮ್ಮ ತಾಯಿಯಂತೆ ಪ್ರೀತಿಸತೊಡಗಿದರು. ಶಾಲೆಗೆ ಮಕ್ಕಳ ತಾಯಿ ತಂದೆಗಳೂ ಬಂದು ನೋಡಲು ಅವಕಾಶ ಕೊಟ್ಟಳು. ತಾನು ಪುಸ್ತಕವನ್ನು ಬರೆದು ಹಣ ಸಂಪಾದನೆ ಮಾಡಿ ಅದರಿಂದ ಶಾಲೆಯನ್ನು ನಡೆಸುತ್ತಿದ್ದಳು. ಕೆಲವು ಅಮೆರಿಕಾ ಮತ್ತು ಇಂಡಿಯಾ ದೇಶದ ಭಕ್ತರು ಅವಳಿಗೆ ಸಹಾಯ ಮಾಡಿದರು. ಶ್ರೀಮತಿ ಬುಲ್ ಆಕೆಯ ಬಹುಭಾಗದ ವೆಚ್ಚವನ್ನು ವಹಿಸಿಕೊಂಡಳು.

ಮೊದಲು ಈ ಶಾಲೆಯನ್ನು ''ಶ್ರೀರಾಮಕೃಷ್ಣ ಬಾಲಿಕಾ ವಿದ್ಯಾಲಯ'' ಎಂದು ಕರೆಯುತ್ತಿದ್ದರು. ಕೆಲವು ಪಾಶ್ಚಾತ್ಯರು ಅದನ್ನು 'ವಿವೇಕಾನಂದರ ಶಾಲೆ' ಎಂದು ಕರೆದರು. ಅಲ್ಲಿದ್ದ ಜನ ಅದನ್ನು ನಿವೇದಿತಾ ಶಾಲೆ ಎಂದು ಕರೆದರು. ಅವಳ ಕಾಲಾನಂತರ ೧೯೧೮ರಲ್ಲಿ ಶ್ರೀರಾಮಕೃಷ್ಣ ಮಹಾಸಂಘ ಅದನ್ನು ತೆಗೆದುಕೊಂಡು ''ಶ್ರೀರಾಮಕೃಷ್ಣ ಮಿಶನ್ ಸೋದರಿ ನಿವೇದಿತಾ ಶಾಲೆ'' ಎಂದು ಹೆಸರಿಸಿತು. ೧೯೬೩ರಿಂದ ಶಾರದಾ ಮಿಷನ್ ಅದರ ಜವಾಬ್ದಾರಿಯನ್ನು ತೆಗೆದುಕೊಂಡಿತು.

ಸ್ವಾಮಿ ವಿವೇಕಾನಂದರು ಶಾಲೆಗೆ ಹಲವು ವೇಳೆ ಬರುತ್ತಿದ್ದರು. ಅವರು ೧೯೦೨ ಜೂನ್ ೨೮ರಲ್ಲಿ ಕೊನೆಯ ಸಲ ಅಲ್ಲಿಗೆ ಬಂದರು. ೧೯೦೨ನೇ ಜುಲೈ ೨ನೇ ತಾರೀಖು ಸ್ವಾಮಿ ವಿವೇಕಾನಂದರನ್ನು ನೋಡಲು ನಿವೇದಿತಾ ಬೇಲೂರು ಮಠಕ್ಕೆ ಹೋದಳು. ಅಂದು ಬುಧವಾರ, ಏಕಾದಶಿ. ಸ್ವಾಮೀಜಿ ಉಪವಾಸವಿದ್ದರು. ಆದರೆ ನಿವೇದಿತಳಿಗೆ ತಮ್ಮ ಹತ್ತಿರ ಆಸನವನ್ನು ಹಾಕಿ ಊಟ ಮಾಡಿಸಿದರು. ಊಟವಾದ ಮೇಲೆ ಸ್ವಾಮಿ ವಿವೇಕಾನಂದರು ಅವಳಿಗೆ ಕೈ ತೊಳೆಯಲು ನೀರು ಹಾಕಿದರು. ಅನಂತರ ಒಂದು ಕರವಸ್ತ್ರದಿಂದ ಅವಳ ಕೈಗಳನ್ನು ಒರೆಸಿದರು. ನಿವೇದಿತಳಿಗೆ ಇದು ಅಷ್ಟು ಹಿಡಿಸಲಿಲ್ಲ. ಏಕೆಂದರೆ ಸ್ವಾಮಿ ವಿವೇಕಾನಂದರು ತನ್ನ ಗುರುಗಳು, ತಾನು ಅವರ ಶಿಷ್ಯೆ. ಈ ವಿಚಿತ್ರ ವರ್ತನೆಯ ಬಗ್ಗೆ ಸ್ವಾಮೀಜಿಯವರನ್ನು ವಿಚಾರಿಸಿದಾಗ, 'ಯೇಸು ತನ್ನ ಶಿಷ್ಯರ ಪಾದಗಳನ್ನು ತೊಳೆಯಲಿಲ್ಲವೆ!' ಎಂದು ಅವರು ಉತ್ತರಿಸಿದರು. ಆದರೆ ಅದು ಅವನ ಕೊನೆಯ ದಿನದಂದು ಎಂದು ಹೇಳುವುದರಲ್ಲಿ ಇದ್ದವಳು ಮಾತನ್ನು ಒಳಗೆಯೇ ನುಂಗಿಕೊಂಡಳು. ಇದು ಅಕ್ಷರಶಃ ಸತ್ಯವಾಯಿತು.

ಸ್ವಾಮಿ ವಿವೇಕಾನಂದರು ತಮ್ಮ ಶಿಷ್ಯಳಿಗೆ ಅಂದು ಅಪಾರ ಪ್ರೇಮವನ್ನು ವ್ಯಕ್ತಪಡಿಸಿದರು. ನಿವೇದಿತಾ ಸಂತೋಷದಿಂದ ಮನೆಗೆ ಹಿಂತಿರುಗಿದಳು. ಶುಕ್ರವಾರ ತಾನು ಚೆನ್ನಾಗಿರುವೆ ಎಂದು ಕಾಗದ ಬರೆದರು. ಆದರೆ ಮಾರನೇ ದಿನ ಮುಂಜಾನೆ ಅವರು ತೀರಿಕೊಂಡರು ಎಂಬ ಸುದ್ದಿ ಬರಸಿಡಿಲಿನಂತೆ ಬಡಿಯಿತು. ಸುದ್ದಿ ತಿಳಿದ ತತ್‌ಕ್ಷಣವೇ ಬೇಲೂರು ಮಠಕ್ಕೆ ಹೋದಳು. ಬೆಳಗಿನಿಂದ ಮಧ್ಯಾಹ್ನ ೩ ಗಂಟೆಯವರೆಗೆ ಸ್ವಾಮಿ ವಿವೇಕಾನಂದರ ಶರೀರಕ್ಕೆ ಗಾಳಿಯನ್ನು ಬೀಸುತ್ತಿದ್ದಳು. ಬೇಲೂರು ಮಠದ ಅಂಗಳಕ್ಕೆ ದೇಹವನ್ನು ತಂದರು. ದೇಹಕ್ಕೆ ಗಂಗಾಸ್ನಾನ ಮಾಡಿಸಿದರು. ಹೊಸ ಕಾವಿಯನ್ನು ಉಡಿಸಿ ಪುಷ್ಪಗಳಿಂದ ಅಲಂಕರಿಸಿದರು. ಸ್ವಾಮಿ ವಿವೇಕಾನಂದರೇ ತೋರಿಸಿದ ಸ್ಥಳದಲ್ಲಿ ಅಂತ್ಯಕ್ರಿಯೆ ನಡೆಯಿತು. ಚಿತೆಗೆ ಬೆಂಕಿ ಇಡುವಾಗ ''ಜೈ ಶ್ರೀ ಗುರುಮಹಾರಾಜ್ ಕಿ, ಜೈ ಸ್ವಾಮೀಜಿ ಮಹಾರಾಜ್ ಕಿ'' ಎಂದು ಎಲ್ಲರೊಡನೆ ನಿವೇದಿತಾ ಉಚ್ಚರಿಸಿದಳು. ಹಿಂದಿನ ದಿನ ತನ್ನ ಕೈಗಳನ್ನು ಅಕ್ಕರೆಯಿಂದ ತೊಳೆದವರು ಇಂದು ಮಾಯವಾದರು.

### ಅನಂತರ

ನಿವೇದಿತಾ ಸ್ವಾಮೀಜಿ ಸಾವಿಗೆ ಅಳಲಿಲ್ಲ. ಸ್ವಾಮೀಜಿ ಯಾವುದಕ್ಕೆ ಬಂದರೋ ಆ ಕಾರ್ಯದಲ್ಲಿ ತನ್ಮಯಳಾದಳು. ಆಕೆಯ ಪಾಲಿಗೆ ಸ್ವಾಮೀಜಿ ಕಾಲವಾಗಿರಲಿಲ್ಲ. ಭರತಖಂಡದ ಸೇವೆಯೇ ತಾನು ಸ್ವಾಮೀಜಿಗೆ ಮಾಡುವ ಕರ್ತವ್ಯವೆಂದು ಭಾವಿಸಿದಳು. ಅಂದಿನಿಂದ ಭಾರತೀಯರ ಜಾಗೃತಿಯ ಕೆಲಸಕ್ಕೆ ಕೈ ಹಾಕಿದಳು. ಆಧ್ಯಾತ್ಮಿಕ ಭಾವನೆಯನ್ನು ಬದಿಗಿರಿಸಿ, ಇಡೀ ದೇಶವನ್ನು ಉದ್ಧರಿಸಲು ಮನಸ್ಸು ಮಾಡಿದಳು. ಶ್ರೀರಾಮಕೃಷ್ಣ ಸಂಘದಲ್ಲಿದ್ದರೆ ಅದು ಒಂದು ಆತಂಕವೆಂದು ಅದನ್ನು ತ್ಯಜಿಸಿ ರಾಜಕೀಯದ ಕಡೆ ತಿರುಗಿದಳು. ಆಕೆ ಚೆನ್ನಾಗಿ ಬರೆಯಬಲ್ಲಳು, ಚೆನ್ನಾಗಿ ಮಾತನಾಡಬಲ್ಲಳು. ಇವುಗಳಿಂದ ಭರತಖಂಡವನ್ನು ಜಾಗೃತಗೊಳಿಸಿದಳು. ಇಂಗ್ಲಿಷರಿಗೆ ಅಂಜದೆ ಮುಚ್ಚುಮರೆಯಿಲ್ಲದೆ ಅವರ ದೌರ್ಬಲ್ಯವನ್ನು ಎತ್ತಿ ಹಿಡಿದಳು. ಭರತಖಂಡದ ಅನೇಕ ಸ್ಥಳಗಳಿಗೆ ಹೋಗಿ ಉಜ್ವಲವಾದ ಭಾಷಣ ಮಾಡಿದಳು. ಆಂಗ್ಲೇಯರು ಅವಳಿಗೆ ಯಾವ ತೊಂದರೆಯನ್ನೂ ಕೊಡಲಿಲ್ಲ. ಏಕೆಂದರೆ ವೈಸ್‌ರಾಯನಿಂದ ಹಿಡಿದು ಅನೇಕ ಗಣ್ಯ ವ್ಯಕ್ತಿಗಳು ಅವಳನ್ನು ಗೌರವಿಸುತ್ತಿದ್ದರು. ''ಇಡೀ ದೇಶವನ್ನು ನಿಮ್ಮದು ಎಂದು ಭಾವಿಸಿ ನೀವು ಅದಕ್ಕೆ ಕೆಲಸ ಮಾಡಬೇಕಾಗಿದೆ. ಜ್ಞಾನ, ಶಕ್ತಿ, ಸಂತೋಷ ಮತ್ತು ಸಂಪತ್ತು ಇವುಗಳನ್ನು ಧರೆಗೆ ಇಳಿಸಲು ಶ್ರಮಪಡಬೇಕಾಗಿದೆ'' ಎಂದಳು. ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ಹಲವು ವಿಷಯಗಳ ಮೇಲೆ ಮಾತನಾಡಿದಳು. ಪ್ರೈಮರಿ ಶಾಲೆ, ಸೆಕೆಂಡರಿ ಶಾಲೆ, ವಿಶ್ವವಿದ್ಯಾನಿಲಯ, ಸ್ತ್ರೀಯರ ವಿದ್ಯಾಭ್ಯಾಸ, ತಾಂತ್ರಿಕ ಸಾಧನೆ ಎಲ್ಲಾ ಕ್ಷೇತ್ರದಲ್ಲಿಯೂ ತನ್ನ ಪ್ರಭಾವವನ್ನು ಬೀರಿದಳು. ತಾನು ಒಂದು ಸಣ್ಣ ಶಾಲೆಯನ್ನು

ನಡೆಸುತ್ತಿದ್ದರೂ, ಅನೇಕ ವಿದ್ಯಾವಂತರಿಗೆ, ಕಲಾಭಿಮಾನಿಗಳಿಗೆ, ವಿಜ್ಞಾನಿಗಳಿಗೆ, ಇತರ ದೇಶಭಕ್ತರಿಗೆ ಸ್ಫೂರ್ತಿಯನ್ನು ಕೊಡುತ್ತಿದ್ದಳು. ''ವಂದೇ ಮಾತರಂ'' ಬಹಿರಂಗದಲ್ಲಿ ಹಾಡುವುದಕ್ಕೆ ಇಂಗ್ಲಿಷರು ಧಕ್ಕೆ ತಂದರೂ ಇವಳ ಶಾಲೆಯಲ್ಲಿ ಅದನ್ನು ಹಾಡುತ್ತಿದ್ದರು.

ನಿವೇದಿತಾ ತನ್ನ ಶಾಲೆಯಲ್ಲಿ ಸ್ವದೇಶೀ ವಸ್ತುಗಳನ್ನು ತಯಾರು ಮಾಡುವುದರಲ್ಲಿ ಜಯಶೀಲಳಾದಳು. ನೇಯ್ಗೆ ಕಲಿಸುವುದಕ್ಕೆ ಒಬ್ಬ ಉಪಾಧ್ಯಾಯರನ್ನು ತೆಗೆದುಕೊಂಡಳು. ಹುಡುಗಿಯರು ಅವಳಿಗೆ 'ಚರಕಾ ಮಾ' ಎಂದು ಅಡ್ಡ ಹೆಸರನ್ನು ಕೊಟ್ಟರು.

ಭಾರತೀಯರ ಕಲೆ ಜಾಗೃತವಾಗಬೇಕೆಂಬುದೇ ಅವಳ ಹೆಬ್ಬಯಕೆ. ನಮ್ಮಲ್ಲಿ ಎಲ್ಲೋರ ಅಜಂತದಂತಹ ಕಲಾ ಸಂಪ್ರದಾಯವಿರುವಾಗ ಇತರರನ್ನು ಏತಕ್ಕೆ ಅಂಧರಾಗಿ ಅನುಸರಿಸುತ್ತೀರಿ ಎಂದಳು. ಕೃಷ್ಣ, ರಾಮ, ಶಿವ, ಬುದ್ಧ, ಭೀಷ್ಮ, ಯುಧಿಷ್ಠಿರ, ಶಿವಾಜಿ, ಪ್ರತಾಪಸಿಂಗ್ ಮುಂತಾದವರ ಚಿತ್ರಗಳನ್ನು ಬರೆಯಿರಿ ಎಂದು ಪ್ರೇರೇಪಿಸಿದಳು. ನಿವೇದಿತಾ ಅವನೀಂದ್ರ ಠಾಕೂರ್, ನಂದ ಲಾಲ್ ಬೋಸ್ ಮುಂತಾದ ಕಲಾವಿದರಿಗೆ ಸ್ಫೂರ್ತಿ ಕೊಟ್ಟು ಭಾರತೀಯ ಕಲೆಯ ಕಡೆ ಅವರ ಮನಸ್ಸನ್ನು ತಿರುಗಿಸಿದಳು. ಅವಳ ಮತ್ತೊಂದು ಆಸೆ ಭಾರತ ವಿಜ್ಞಾನದಲ್ಲಿ ಮುಂದುವರಿಯಬೇಕು ಎಂಬುದು. ಅದಕ್ಕಾಗಿ ಜೆ.ಸಿ. ಬೋಸ್, ಪಿ. ಸಿ. ರಾಯ್ ಮುಂತಾದವರೊಡನೆ ಸ್ನೇಹ ಬೆಳೆಸಿಕೊಂಡು ಅವರ ಕಾರ್ಯಕ್ಕೆ ಪ್ರೋತ್ಸಾಹ ನೀಡಿದಳು. ಕೆಲವು ಜೆ. ಸಿ. ಬೋಸರ ಪುಸ್ತಕಗಳನ್ನೂ ಮತ್ತು ರವೀಂದ್ರನಾಥ ಠಾಕೂರರ ಪುಸ್ತಕಗಳನ್ನೂ ಬಂಗಾಳಿಯಿಂದ ಆಂಗ್ಲ ಭಾಷೆಗೆ ಅನುವಾದ ಮಾಡಿದಳು. ರವೀಂದ್ರನಾಥರಿಗೆ ಆಕೆ ಗುರುವಿನ ಸ್ಥಾನದಲ್ಲಿದ್ದಳು.

ಸ್ತ್ರೀಯರಿಗೆ ತಮ್ಮ ಆದರ್ಶವನ್ನು ಬಿಟ್ಟು ಇತರರನ್ನು ಅಂಧರಾಗಿ ಅನುಕರಿಸಬೇಡಿ ಎಂದಳು. ಸ್ತ್ರೀಯರಲ್ಲಿ ಪವಿತ್ರ ನಾರಿಯರು ಹಿಂದೆ ಇದ್ದರು. ಸೀತೆ, ಸಾವಿತ್ರಿ, ಉಮಾ, ಗಾಂಧಾರಿ ಮುಂತಾದವರ ಆದರ್ಶವನ್ನು ಎತ್ತಿಹಿಡಿದಳು. ಅಹಲ್ಯಾಬಾಯಿ, ಲಕ್ಷ್ಮೀಬಾಯಿ ಸಾಯುವವರೆಗೆ ತಮ್ಮ ದೇಶಕ್ಕೆ ಹೇಗೆ ಸೇವೆಯನ್ನು ಸಲ್ಲಿಸಿದರು ಎಂಬುದನ್ನು ಉಜ್ವಲವಾದ ವಾಣಿಯಲ್ಲಿ ಹೇಳಿದಳು. ಒಮ್ಮೆ ಭರತಖಂಡದ ಸ್ತ್ರೀಯರು ಜಾಗೃತರಾದರೆ ಇಡೀ ಜೀವನಕ್ಕೆ ಚೈತನ್ಯವನ್ನು ನೀಡಬಲ್ಲರು ಎಂದು ಹೇಳಿದಳು. ಇಂಡಿಯಾ ದೇಶದಲ್ಲಿ ಭಿನ್ನ ಭಿನ್ನ ಭಾಷೆಗಳಿವೆ, ಜಾತಿಗಳಿವೆ, ಧರ್ಮಗಳಿವೆ. ಅದರ ಹಿಂದೆ ಒಂದು ಐಕ್ಯತೆ ಇದೆ. ನಿವೇದಿತಾ ಅದನ್ನು ಎತ್ತಿಹಿಡಿದಳು.

೧೯೦೭ರಲ್ಲಿ ನಿವೇದಿತಾ ಪಾಶ್ಚಾತ್ಯ ದೇಶಗಳಿಗೆ ಹೋದಳು. ಅಲ್ಲಿ ಎರಡು ವರುಷಗಳು ಇದ್ದು ಪುನಃ ಇಂಡಿಯಾ ದೇಶಕ್ಕೆ ೧೯೦೯ರಲ್ಲಿ ಬಂದಳು. ತನ್ನ ಸೇವಾಕಾರ್ಯದಲ್ಲಿ ತನ್ಮಯಳಾದಳು. ಕಲ್ಕತ್ತೆಯಲ್ಲಿದ್ದಾಗ ಅನೇಕವೇಳೆ ಅವಳು ಶ್ರೀಮಾತೆಯವರನ್ನು ಕಾಣಲು ಹೋಗುತ್ತಿದ್ದಳು. ಶ್ರೀಮಾತೆ ತನ್ನ ಮನೆಗೆ ಬಂದಾಗಲೆಲ್ಲಾ ಮನೆಯನ್ನು ತಳಿರುತೋರಣಗಳಿಂದ ಅಲಂಕರಿಸಿ ಅವರನ್ನು ಸ್ವಾಗತಿಸುತ್ತಿದ್ದಳು. ಶ್ರೀಮಾತೆಯವರನ್ನು ತನ್ನ ಪ್ರಿಯ ತಾಯಿ ಎಂದು ಕರೆಯುತ್ತಿದ್ದಳು. ಅವರಿಗೆ ಸಣ್ಣಪುಟ್ಟ ಸೇವೆಯನ್ನು ಅತ್ಯಂತ ಪ್ರೀತಿಯಿಂದ ಮಾಡುತ್ತಿದ್ದಳು.

ನಿವೇದಿತಾ ಗೋಪಾಲೇರ್‌ಮಾಳನ್ನು ನೋಡಿದಾಗ ಅವಳ ವಯಸ್ಸು ಆಗಲೆ ಎಂಭತ್ತಕ್ಕೆ ಮೀರಿತ್ತು. ಅವಳು ಬಾಲಗೋಪಾಲನನ್ನು ದೇವರಂತೆ ಪ್ರೀತಿಸಿ ಹಲವು ದಿವ್ಯಾನುಭವಗಳನ್ನು ಪಡೆದಿದ್ದಳು. ನಿವೇದಿತಾಳಿಗೆ ಆಕೆಯ ಮೇಲೆ ಅಪಾರ ಪ್ರೀತಿ ಗೌರವ. ಅವಳೂ ನಿವೇದಿತೆಯನ್ನು ಮಗಳಂತೆ ಪ್ರೀತಿಸುತ್ತಿದ್ದಳು. ಗೋಪಾಲೇರ್ ಮಾಗೆ ೧೯೦೪ರಲ್ಲಿ ಖಾಯಿಲೆಯಾದಾಗ ನಿವೇದಿತೆಯು ಅವಳನ್ನು ತನ್ನ ಮನೆಯಲ್ಲಿ ಇರಿಸಿಕೊಂಡಿದ್ದಳು. ಗೋಪಾಲೇರ್ ಮಾಳ ಸಂಬಂಧವಾಗಿ ಅಪೂರ್ವ ನಿಧಿ ನಮ್ಮ ಮನೆಯಲ್ಲಿರುವುದು ಎನ್ನುತ್ತಿದ್ದಳು. ಆ ವೃದ್ಧೆಯ ಸೇವೆ ಮಾಡುವುದರಲ್ಲಿ ಎಷ್ಟು ಆದರ ಆನಂದ ಅವಳಿಗೆ! ಮೂರು ವರುಷಗಳಾದ ಮೇಲೆ ಗೋಪಾಲೇರ್ ಮಾ ನಿವೇದಿತಾ ಮನೆಯಲ್ಲಿ ಕಾಲವಾದಳು. ಎರಡು ದಿನಗಳಾದ ಮೇಲೆ ಅವಳ ಹೆಸರಿನಲ್ಲಿ ನಿವೇದಿತಾ ಪೂಜೆ ಸಲ್ಲಿಸಿ ಭಜನೆ ಭೋಜನಾದಿಗಳನ್ನು ಏರ್ಪಡಿಸಿದಳು.

ಸೋದರಿ ನಿವೇದಿತೆಗೆ ಪರಮ ಆಪ್ತ ಸ್ನೇಹಿತರು ಎಂದರೆ ವಿಶ್ವವಿಖ್ಯಾತ ವಿಜ್ಞಾನಿಯಾದ ಜಗದೀಶ ಚಂದ್ರಬೋಸ್ ಮತ್ತು ಅವರ ಸತಿ ಅಬಲಾ ಬೋಸ್. ನಿವೇದಿತಾ, ಬೋಸರ ಲೇಖನಗಳನ್ನು ಇಂಗ್ಲಿಷಿಗೆ ತರಲು ಸಹಾಯ ಮಾಡಿದಳು. ಅವರ ಹೆಸರಿನಲ್ಲಿ ಒಂದು ವಿಜ್ಞಾನ ಭವನ ಆಗಬೇಕೆಂದು ಆಕೆ ಆಶಿಸುತ್ತಿದ್ದಳು. ಅದು ನಿವೇದಿತಾ ತೀರಿಕೊಂಡಮೇಲೆ ೧೯೧೭ರಲ್ಲಿ ನೆರವೇರಿತು.ಅದರ ಪ್ರಾರಂಭೋತ್ಸವದ ಸಂದರ್ಭದಲ್ಲಿ, ತನಗೆ ಸಹಾಯ ಮಾಡಿದವರಲ್ಲಿ ನಿವೇದಿತಾ ಅಗ್ರಗಣ್ಯಳು, ಈಗ ಆಕೆ ಪ್ರಪಂಚವನ್ನು ತೊರೆದಿರುವಳು ಎಂದು ಬೋಸರು ವ್ಯಥೆಪಟ್ಟರು.

ಭರತಖಂಡ ಮೇಲಕ್ಕೆ ಬರಲು ಅದಕ್ಕೆ ಸ್ವಾತಂತ್ರ್ಯ ಬರಬೇಕು. ಹಾಗೆ ಆಗಬೇಕಾದರೆ ಯಾವ ಯಾವ ಪ್ರಖ್ಯಾತ ವ್ಯಕ್ತಿಗಳು ಆಗಿನ ಕಾಲದಲ್ಲಿ ಇದ್ದರೂ ಅವರೊಡನೆಲ್ಲ ನಿಕಟ ಸಂಬಂಧವನ್ನು ಇಟ್ಟುಕೊಂಡಿದ್ದಳು ನಿವೇದಿತಾ. ಅವರಲ್ಲಿ ಕೆಲವರ ಹೆಸರನ್ನು ಇಲ್ಲಿ ಹೇಳುವೆವು. ಸುರೇಂದ್ರನಾಥ ಬ್ಯಾನರ್ಜಿ, ಜಿ.ಕೆ. ಗೋಖಲೆ, ಆರ್.ಸಿ. ದತ್ - ಇವರು ಮಂದಗಾಮಿ ಚಳುವಳಿಗಾರರು. ರಾಜಕೀಯ ಕ್ಷೇತ್ರದಲ್ಲಿ ತೀವ್ರವಾದಿಗಳ ಗುಂಪಿನಲ್ಲಿ ಬಿಪಿನ್ ಚಂದ್ರಪಾಲ್, ಅರವಿಂದ ಘೋಷ್, ಬಾಲಗಂಗಾಧರ ತಿಲಕ್-ಇವರೇ ಮುಂತಾದವರಿದ್ದರು. ನಿವೇದಿತಾ ಯಾವುದೇ ಪಕ್ಷಕ್ಕೆ ಸೇರದೆ, ರಾಜಕೀಯಕ್ಕೆ ಕೈ ಹಾಕದೆ ಇದ್ದರೂ ಎಲ್ಲರೂ ಅವಳನ್ನು ಗೌರವದಿಂದ ನೋಡುತಿದ್ದರು.

**ಅಂತ್ಯ**

ಬಿಡುವಿಲ್ಲದ ಕೆಲಸದಿಂದ ನಿವೇದಿತಾಳ ಆರೋಗ್ಯ ಶಿಥಿಲವಾಗತೊಡಗಿತು. ೧೯೦೫ರಲ್ಲಿ ಒಮ್ಮೆ ರೋಗಗ್ರಸ್ತಳಾಗಿದ್ದಳು. ೧೯೦೭ ರಲ್ಲಿ ಕ್ಷಾಮ ಮತ್ತು ಅತಿವೃಷ್ಟಿಯಿಂದ ದೇಶ ಪೀಡಿತವಾದಾಗ ತನ್ನ ಕೈಲಾದ ಸಹಾಯವನ್ನೆಲ್ಲ ಮಾಡಿದಳು. ಬಡವರ ಮನೆಗಳಿಗೆ ಹೋಗಿ ಅವರ ಸ್ಥಿತಿಗತಿಗಳನ್ನು ವಿಚಾರಿಸಿ ತನಗೆ ಸಾಧ್ಯವಾದ ನೆರ

ವನ್ನು ನೀಡಿದಳು. ಒಳ್ಳೆಯ ಕೆಲಸ ಮಾಡುವುದಕ್ಕೆ ಯಾವ ವಿಘ್ನಗಳು ಬಂದರೂ ಅದನ್ನು ಲೆಕ್ಕಿಸುತ್ತಿರಲಿಲ್ಲ. ಜನರ ಸಹಿಷ್ಣುತಾಶಕ್ತಿಯನ್ನು ಮನಗಂಡಳು. ಯಾವಾಗಲೂ ಬಡವರನ್ನು ಕಂಡರೆ ಅವಳಿಗೆ ಅನುಕಂಪ. ಈ ಕೆಲಸ ಅವಳ ಆರೋಗ್ಯವನ್ನು ಹದಗೆಡಿಸಿತು. ಅನಂತರ ಯಾವುದಾದರೂ ರೋಗದಿಂದ ನರಳುತ್ತಿದ್ದಳು. ತಾನು ಇರುವ ತನಕ ಸ್ವಾಮಿ ವಿವೇಕಾನಂದರ ಆಣತಿಯನ್ನು ಪಾಲಿಸುವು ದರಲ್ಲಿ ತನ್ಮಯಳಾಗಿದ್ದಳು. ಸ್ವಾಮಿ ವಿವೇಕಾನಂದರು ಭರತಖಂಡದ ವಿಷಯದಲ್ಲಿ ಹೀಗೆ ಹೇಳಿರುವರು: ''ಇನ್ನು ಐವತ್ತು ವರುಷಗಳ ವರೆಗೆ ನಮ್ಮ ಮಾತೃಭೂಮಿಯ ಹಿತವೇ ಪಲ್ಲವಿಯಾಗಿರಬೇಕು. ಸದ್ಯಕ್ಕೆ ಉಳಿದ ದೇವದೇವಿಯರನ್ನು ಮರೆಯೋಣ.''

''ಜೀವಂತವಾಗಿರುವ ದೇವರು ನಮ್ಮ ಭಾರತಮಾತೆ. ಇವ ಳೊಬ್ಬಳೆ ಜಾಗ್ರತ ದೇವರು. ಎಲ್ಲಾ ಕಡೆಯಲ್ಲಿಯೂ ಅವಳ ಕೈಗಳು, ಕಾಲುಗಳು, ಕಿವಿಗಳು. ಅವಳು ಎಲ್ಲವನ್ನೂ ವ್ಯಾಪಿಸಿಕೊಂಡಿರು ವಳು. ಈ ದೇವಿಯನ್ನು ನಾವು ಆರಾಧಿಸುವ. ಉಳಿದೆಲ್ಲ ದೇವರನ್ನು ಸದ್ಯಕ್ಕೆ ಮರೆಯುವ.''

೧೯೧೦ರಲ್ಲಿ ನಿವೇದಿತಾ ಮತ್ತೊಮ್ಮೆ ಅಮೇರಿಕಾಕ್ಕೆ ಹೋದಳು. ಅವಳ ಸ್ನೇಹಿತೆ ಶ್ರೀಮತಿ ಬುಲ್ ತುಂಬ ಕಾಯಿಲೆಯಲ್ಲಿದ್ದಳು. ಅವಳು ೧೯೧೧ನೇ ಜನವರಿಯಲ್ಲಿ ತೀರಿಕೊಂಡಳು. ಅನಂತರ ನಿವೇದಿತಾ ಇಂಗ್ಲೆಂಡಿಗೆ ಹೋದಳು. ಮಾರ್ಚಿ ತಿಂಗಳಲ್ಲಿ ಪ್ಯಾರಿಸ್ಸಿಗೆ ಹೋಗಿ ಏಪ್ರಿಲ್ ತಿಂಗಳಲ್ಲಿ ಇಂಡಿಯಾ ದೇಶಕ್ಕೆ ಹಿಂತಿರುಗಿದಳು.

ಬೇಸಿಗೆಯ ರಜಾ ದಿನಗಳಲ್ಲಿ ಬೋಸ್ ದಂಪತಿಗಳೊಡನೆ ಆಲ್ಮೋರಕ್ಕೆ ಹೋದಳು. ಪೂಜಾ ದಿನಗಳಲ್ಲಿ ಅಕ್ಟೋಬರ್ ತಿಂಗಳಲ್ಲಿ ಡಾರ್ಜಿಲಿಂಗಿಗೆ ಹೋಗಬೇಕೆಂದು ಇಚ್ಛಿಸಿದಳು. ಡಾರ್ಜಿಲಿಂಗಿಗೆ ಹೋಗುವುದಕ್ಕೆ ಮುಂಚೆ ತನ್ನ ಕಲ್ಕತ್ತೆಯನ್ನು ಕೊನೆಯ ಬಾರಿ ಬಿಡು ತ್ತಿರುವೆನು ಎಂದು ಭಾವಿಸಿದಳು. ತನಗೆ ಗೊತ್ತಿರುವವರನ್ನೆಲ್ಲ ನೋಡಿ ಕೊಂಡು ಬಂದಳು. ಶ್ರೀಮಾತೆ ಆಗ ಜಯರಾಮವಟಿಯಲ್ಲಿದ್ದರು. ಅವರನ್ನು ನೋಡಲು ಆಗಲಿಲ್ಲ. ಬಾಗ್‌ಬಜಾರಿನಲ್ಲಿ ತಾನಿದ್ದ ಮನೆಗೆ ಹೋಗಿ ಎಲ್ಲರಿಂದಲೂ ಬೀಳ್ಕೊಂಡಳು. ಕಲ್ಕತ್ತೆಯಲ್ಲಿ ಶ್ರೀಮಾತೆಯ ಗುರುಭಗಿನಿಯಾದ ಯೋಗಿನ್ ಮಾಳನ್ನು ನೋಡಿ, ಅವರಿಂದ ಬೀಳ್ಕೊಳ್ಳುವ ಸಮಯದಲ್ಲಿ ''ಯೋಗಿನ್ ಮಾ, ನಾನು ಮರಳಿ ಬರುವುದಿಲ್ಲ ಎನಿಸುವುದು'' ಎಂದಳು.

ಯೋಗಿನ್ ಮಾ ತುಂಬ ವ್ಯಾಕುಲದಿಂದ ''ಏತಕ್ಕೆ ಹೀಗೆ ಹೇಳು ತ್ತೀಯೆ?'' ಎಂದರು. ಅದಕ್ಕೆ ನಿವೇದಿತಾ ''ನನಗೆ ಗೊತ್ತಿಲ್ಲ. ಏನೋ ನನಗೆ ಹಾಗೆ ಅನ್ನಿಸುವುದು. ಇದೇ ನನ್ನ ಕೊನೆ'' ಎಂದಳು.

ಯೋಗಿನ್ ಮಾ, ''ಇಂತಹ ವಿಷಯಗಳನ್ನು ಮಾತನಾಡ ಬೇಡ'' ಎಂದು ಮಾತನ್ನು ಬೇರೆ ಕಡೆಗೆ ತಿರುಗಿಸಿದರು. ಆದರೂ ಯೋಗಿನ್ ಮಾ ನಿವೇದಿತಾ ವಿಷಯದಲ್ಲಿ ತುಂಬಾ ಕಾತರರಾದರು.

ನಿವೇದಿತಾ ಬೋಸ್ ದಂಪತಿಗಳೊಡನೆ ಡಾರ್ಜಿಲಿಂಗಿಗೆ ಹೋದಳು. ಅಲ್ಲಿ ರೇವಿಲ್ಲ ಎಂಬ ಮನೆಯಲ್ಲಿ ತಂಗಿದರು. ಕೆಲವು ಕಾಲ ಅಲ್ಲಿ ಸೌಖ್ಯದಿಂದ ಇದ್ದಳು. ಅನಂತರ ದೂರದಲ್ಲಿರುವ ಸಾಂಡ ಕ್‌ಫು ಎಂಬ ಪರ್ವತವನ್ನು ಹತ್ತಿ ನೋಡಿಕೊಂಡು ಬರಬೇಕೆಂದು ಎಲ್ಲರೂ ಆಶಿಸಿದರು. ಆಗ ಅವರು ಹೋಗುವ ದಿವಸವೇ ನಿವೇ ದಿತಳಿಗೆ ರಕ್ತಬೇಧಿ ಪ್ರಾಪ್ತವಾಯಿತು. ಪ್ರಖ್ಯಾತ ವೈದ್ಯರನ್ನೆಲ್ಲ ಕರೆ ದರು, ಎಲ್ಲಾ ಔಷಧಿಗಳನ್ನು ಕೊಟ್ಟರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ತಾನು ಇಹಲೋಕವನ್ನು ಬಿಡುತ್ತಿರುವೆ ಎನ್ನಿಸಿತು ನಿವೇದಿತಳಿಗೆ. ಅಂತಹ ಶೋಚನೀಯ ಅವಸ್ಥೆಯಲ್ಲಿಯೂ ಧೈರ್ಯದಿಂದ ಸಂತೋಷದಿಂದ ಇತರರೊಡನೆ ಮಾತನಾಡಿದಳು.

ಅಕ್ಟೋಬರ್ ಏಳನೆ ದಿನ ತನ್ನ ಅಂತಿಮ ಉಯಿಲನ್ನು ಬರೆದಿ ಟ್ಟಳು. ತಾನು ಬರೆದ ಪುಸ್ತಕಗಳ ಹಕ್ಕನ್ನೆಲ್ಲಾ ಬೇಲೂರು ಮಠದ ಟ್ರಸ್ಟಿಗಳಿಗೆ ಕೊಟ್ಟು, ಅದರಿಂದ ಬರುವ ಆದಾಯವನ್ನು ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಖರ್ಚು ಮಾಡಬೇಕು ಎಂದು ಬರೆದಿಟ್ಟಳು.

ಬುದ್ಧನ ವಿಶ್ವಪ್ರೇಮ ಮತ್ತು ಶಾಂತಿಯ ಪ್ರಾರ್ಥನೆ ಮಾಡಿ ದಳು. ಮೃತ್ಯು ಸಮೀಪಿಸುತ್ತಿತ್ತು. ಹಿಂತಿರುಗಿ ಬರದ ಗಾಢ ಧ್ಯಾನಕ್ಕೆ ಅಣಿಯಾಗುತ್ತಿದ್ದಳು. 'ಅಸತ್ತಿನಿಂದ ಸತ್ಯಕ್ಕೆ, ಅಜ್ಞಾನದಿಂದ ಜ್ಞಾನಕ್ಕೆ, ಮೃತ್ಯುವಿನಿಂದ ಅಮೃತತ್ವಕ್ಕೆ ನನ್ನನ್ನು ಕರೆದುಕೊಂಡು ಹೋಗು' ಎನ್ನುವ ಪ್ರಾರ್ಥನೆಯೊಂದಿಗೆ ಕೊನೆ ಉಸಿರನ್ನು ಎಳೆದಳು. ಮೃತ ದೇಹಕ್ಕೆ ದಹನ ಸಂಸ್ಕಾರವಾಯಿತು. ಸುತ್ತಮುತ್ತ ಇದ್ದ ಪರಿಚಯ ಸ್ಥರೆಲ್ಲರೂ ಶ್ಮಶಾನಕ್ಕೆ ಬಂದರು. ತಮ್ಮ ಕಣ್ಣುಗಳನ್ನು ಒರೆಸಿಕೊಳ್ಳುತ್ತ ಅವರು ಹೋದರು. ನಿವೇದಿತಾ ಧೀರಳು, ಸಾವಿಗೆ ಅಂಜದವಳು. ಅದನ್ನೇ ಎದುರು ನೋಡುತ್ತಿದ್ದಳು. ಅದು ಬಂದಾಗ ಈ ಪ್ರಪಂಚದ ತೆರೆಯ ಹಿಂದೆ ಇರುವ ಅವ್ಯಕ್ತ ಪ್ರಪಂಚಕ್ಕೆ ಸಂತಸದಿಂದ ಹಾರಿ ದಳು. ನಿವೇದಿತಾ ಎಂಬ ಜೀವವಹನಿ ಪರಬ್ರಹ್ಮ ಸಾಗರದಲ್ಲಿ ಸಂಗಮ ವಾಯಿತು.

### ನಿವೇದಿತಾ ಬರೆದ ಪುಸ್ತಕಗಳು

1. The Master as I Saw Him
2. Notes of Some Wanderings with Swami Vivekananda
3. Kedarnath and Badri Narayan
4. Kali the Mother
5. Shiva and Buddha
6. An Indian Story of Love and Death
7. Lambs Among Wolves
8. Aggressive Hinduism
9. Web of Indian Life
10. Studies from the Eastern Home
11. Religion and Dharma
12. Civic and National Ideals
13. Hints on National Education in India
14. Footfalls of Indian History
15. Cradle Tales of Hinduism
16. Myths of the Hindus and Buddhists.
17. The Complete Works of Sister Nivedita *(In 5 Volumes)*



# ‘ಅವರು ಮಾಧುರ್ಯದ ಅಂತರಾತ್ಮವೇ ಆಗಿರುವರು’

## ಸೋದರಿ ನಿವೇದಿತಾ ಕಂಡಂತೆ ಶ್ರೀಮಾತೆಯವರು

**ಸ್ವಾಮಿ ನಿತ್ಯಸ್ಥಾನಂದ**

ಶ್ರೀಮಾತೆ ಶಾರದಾದೇವಿಯವರ ವಿಶ್ವವಿಶಾಲ ಮಾತೃಹೃದಯದಲ್ಲಿ ವಿದೇಶೀ ಮಹಿಳೆಯರನ್ನೂ ತನ್ನವರನ್ನಾಗಿ ಮಾಡಿಕೊಳ್ಳುವ ಅಸೀಮ ಪ್ರೀತಿ ವ್ಯಕ್ತವಾಗುತ್ತಿತ್ತು. ನಿವೇದಿತೆಯಂತೂ ಶ್ರೀಮಾತೆಯವರ ಪಾಲಿಗೆ ಚಿಕ್ಕ ಮಗುವಿನಂತೆಯೇ ಆಗಿಬಿಟ್ಟಳು. ನಿವೇದಿತಾ ಕಣ್ಣಲ್ಲಿ ಶ್ರೀಮಾತೆ ಹೇಗೆ ಕಂಡರು ಎಂಬ ವಿಷಯವನ್ನು ಕುರಿತು ವಿವರಿಸಿರುವ ಲೇಖಕರು ‘ವಿವೇಕಪ್ರಭ’ದ ಪ್ರಥಮ ಸಂಪಾದಕರಾಗಿದ್ದರು. ಅವರು ಮೈಸೂರು ಆಶ್ರಮದ ಅಧ್ಯಕ್ಷರೂ ಆಗಿದ್ದರು; ಪ್ರಸ್ತುತ ಮೈಸೂರು ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಕನ್ನಡದಲ್ಲಿ ವಿಸ್ತೃತವಾಗಿ ಬರೆದ ‘**ಸೋದರಿ ನಿವೇದಿತಾ**’ ಜೀವನಚರಿತ್ರೆ ಮೈಸೂರು ಶ್ರೀರಾಮಕೃಷ್ಣ ಆಶ್ರಮದಿಂದ ಪ್ರಕಟವಾಗಿದೆ, ಅತ್ಯಂತ ಜನಪ್ರಿಯವೂ ಆಗಿದೆ. ಉತ್ತಮ ಬರಹಗಾರರೂ, ವಾಗ್ಮಿಗಳೂ, ಚಿಂತಕರೂ ಆಗಿರುವ ಸ್ವಾಮೀಜಿಯವರು ಅನೇಕ ಮಹತ್ವದ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ.



**ಸೋ**ದರಿ ನಿವೇದಿತಾ ಅತ್ಯಂತ ತೀಕ್ಷ್ಣವೂ ಸೂಕ್ಷ್ಮವೂ ಆದ ಬುದ್ಧಿಶಕ್ತಿಯನ್ನು ಹೊಂದಿದ್ದಳು. ಯಾವುದೇ ವಿಷಯವನ್ನು ಅಧ್ಯಯನಕ್ಕೆ ತೆಗೆದುಕೊಂಡರೂ ಅದರ ಹೃದಯಾಂತರಾಳವನ್ನು ಪ್ರವೇಶಿಸುತ್ತಿದ್ದಳು. ವಿದೇಶೀ ಸಂಸ್ಕೃತಿಯಿಂದ ಬಂದಿದ್ದರೂ ಅವಳು ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಅರ್ಥೈಸುವ ರೀತಿ ಎಲ್ಲರೂ ಮೆಚ್ಚುವಂತಹದು. ಆಕೆಯ ಅಂತರ್ದೃಷ್ಟಿ ಅದೆಷ್ಟು ಅಪೂರ್ವವಾದುದೆಂದರೆ ಆಪಾತತಃ ಅರ್ಥಹೀನವಾಗಿ ಕಂಡುಬರುವ ಹಿಂದೂ ಪದ್ಧತಿ, ಸಂಪ್ರದಾಯ ಮತ್ತು ಆಚರಣೆಗಳಲ್ಲಿಯೂ ಅದಾವುದೋ ವಿಶೇಷ ವೈಶಿಷ್ಟ್ಯದ ಹೊಳಹು ಅವಳಿಗೆ ಗೋಚರವಾಗುತ್ತಿತ್ತು. ಆಕೆಯ ಈ ತೀಕ್ಷ್ಣ ಬುದ್ಧಿಶಕ್ತಿಯಿಂದಾಗಿ ಅವಳು ನೀಡುವ ಶ್ರೀಮಾತೆಯವರ ವ್ಯಕ್ತಿಚಿತ್ರವು ನಮಗೆ ತುಂಬ ಪ್ರಾಮುಖ್ಯವೆನಿಸುತ್ತದೆ. ಶ್ರೀಮಾತೆಯವರ ಜೀವನವನ್ನು ತುಂಬ ಆಳವಾಗಿ ಅರ್ಥಮಾಡಿಕೊಂಡಿದ್ದುದರಿಂದಲೇ ಅವಳಲ್ಲಿ ಅವರ ಬಗ್ಗೆ ಅಪಾರ ಭಕ್ತಿ ಉಂಟಾದುದು. ಅತಿ ಸಾಮಾನ್ಯವೆನಿಸುವ ಘಟನೆಗಳಲ್ಲಿಯೂ ಗಂಭೀರ ಆಧ್ಯಾತ್ಮಿಕ ಅರ್ಥವು ನಿವೇದಿತಾಳ ಅಂತರ್ದೃಷ್ಟಿಗೆ ಗೋಚರವಾಗುತ್ತಿತ್ತು. ಅವಳು ಒಮ್ಮೆ ಶ್ರೀಮಾತೆಯವರ ಬಗ್ಗೆ ಬರೆಯುತ್ತಾಳೆ: ‘‘ಭಾವಿಸುವುದರಲ್ಲಿ ಅವರು ಪರಿಪೂರ್ಣರು’’ ಎಂದು. ಶ್ರೀಮಾತೆಯವರ ಪರಿಶುದ್ಧ ಭಾವವು ಮಕ್ಕಳೆಲ್ಲರನ್ನೂ ಹೇಗೆ ತನ್ನ ತೆಕ್ಕೆಯಲ್ಲಿ ಹಿಡಿದಿರಿಸಿಕೊಳ್ಳುತ್ತಿತ್ತು ಎಂಬುದನ್ನು ನಿವೇದಿತಾ ಸರಿಯಾಗಿ ಗ್ರಹಿಸಿದಳು. ಈ ದೃಷ್ಟಿಯಿಂದಲೇ, ಶ್ರೀಮಾತೆಯವರು ಜಗತ್ತಿನಲ್ಲಿಯೇ ಅತಿಶ್ರೇಷ್ಠ ಮಹಿಳೆಯೆಂದು ನಿವೇದಿತಾ ತೀರ್ಮಾನಿಸುತ್ತಾಳೆ.

ಶ್ರೀಮಾತೆಯವರು ಪುರುಷ ಭಕ್ತರ ಮುಂದೆ ಮುಖ ಮುಚ್ಚಿಕೊಂಡೇ ಇರುತ್ತಿದ್ದರು. ತಮ್ಮ ಪತಿಯ ಮುಂದೆಯೂ ಲಜ್ಜಾಪಟಾವೃತರಾಗಿರುತ್ತಿದ್ದರು. ಪ್ರಾರಂಭದಲ್ಲಿ ನಿವೇದಿತಾಳಿಗೆ ಇದು ತುಂಬ ವಿಚಿತ್ರವೆನಿಸುತ್ತಿತ್ತು. ಆದರೆ ಮುಂದೆ ಇದರ ಹಿಂದಿರುವ ಭಾವವನ್ನು ಗ್ರಹಿಸಲು ಸಮರ್ಥಳಾದಳು. ಈ ಕುರಿತು ನಿವೇದಿತಾ ಬರೆಯುತ್ತಾಳೆ: ‘‘ಎಲ್ಲ ವಿಷಯದಲ್ಲಿಯೂ ತಮ್ಮನ್ನು ಮರೆಮಾಚಿಕೊಳ್ಳುವ ಅವರ ಈ ಭಾವವನ್ನು ನೋಡಿದಾಗ ನನ್ನಂತರಂಗವು ಅತ್ಯಾಶ್ಚರ್ಯದಿಂದ ತುಂಬಿಕೊಳ್ಳುತ್ತದೆ.’’

ನಿವೇದಿತಾ ಶ್ರೀಮಾತೆಯವರನ್ನು ಅಷ್ಟೊಂದು ಭಕ್ತಿಭಾವದಿಂದ ಕಾಣಲು ಕಾರಣೀಭೂತವಾದುದು ಯಾವುದು? ಸರಳತೆಯ ಮುಸುಕಿನ ಹಿಂದೆ ಶ್ರೀಮಾತೆಯವರ ಅತಿಮಾನುಷ ಶ್ರೇಷ್ಠತೆಯನ್ನು ಅವಳು ಕಂಡುಕೊಂಡಳು. ಅವಳ ಮಾತಿನಲ್ಲಿಯೇ ಹೇಳಬೇಕೆಂದರೆ: ‘‘ಶ್ರೀಮಾತೆಯವರಲ್ಲಿ ಕಾಣುತ್ತಿದ್ದ ಜ್ಞಾನ ಮತ್ತು ಮಾಧುರ್ಯ ಅತ್ಯಂತ ಸರಳ ಸ್ತ್ರೀಯರಿಗೆ ಮಾತ್ರ ದಕ್ಕುವಂತಹದು.’’

ಸರಳತೆಯ ಗುಣ ಅಷ್ಟು ಸರಳವಾಗಿ ದಕ್ಕುವಂತಹುದಲ್ಲ. ‘‘ಅನೇಕ ಜನ್ಮಗಳ ಪುಣ್ಯದ ಫಲವಾಗಿ ಒಬ್ಬ ವ್ಯಕ್ತಿ ಸರಳನಾಗಿ

ಹುಟ್ಟುತ್ತಾನೆ'' ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಸರಳತೆ ಅತ್ಯಂತ ಸ್ವಾಭಾವಿಕವಾದರೂ ಸ್ವಾಭಾವಿಕ ಸ್ಥಿತಿಯಲ್ಲಿರುವುದು ಅತ್ಯಂತ ಸುಲಭವಾದರೂ ಅಸ್ವಾಭಾವಿಕವಾಗಿ ಇರುವುದೇ ಜನರ ಸ್ವಭಾವವಾಗಿರುತ್ತದೆ. ಇದಕ್ಕೆ ಸಾಮಾಜಿಕ ಸನ್ನಿವೇಶಗಳೂ ಬಹು ಮಟ್ಟಿಗೆ ಕಾರಣಗಳಾಗಿರುತ್ತವೆ. ಇಂದಿನ ಸಮಾಜ ಅತ್ಯಂತ ಸಂಕೀರ್ಣ ವಾಗುತ್ತಿದೆ. ವಾಣಿಜ್ಯಸಂಸ್ಕೃತಿ, ಅಸಂಖ್ಯ ಬಗೆಯ ಉಡುಗೆ ತೊಡಿಗೆಗಳು, ವಿವಿಧ ಮನರಂಜನಾ ಕಾರ್ಯಕ್ರಮಗಳು, ಕಲ್ಪನಾ ತೀತವಾದ ಗ್ಯಾಡ್ಜೆಟ್‌ಗಳು, ಬಗೆಬಗೆಯ ಜಾಹಿರಾತುಗಳು, ಪ್ರಚಾರ ಪ್ರಿಯತೆ (publicity glamour) ಇತ್ಯಾದಿಗಳು ವ್ಯಕ್ತಿಯ ಮೇಲೆ ಪ್ರಭಾವವನ್ನು ಬೀರಿ ಅವನನ್ನು ಸ್ವಾಭಾವಿಕತೆಯಿಂದ ದೂರ ಸೆಳೆಯುತ್ತವೆ. ಸಾಮಾಜಿಕ ಸನ್ನಿವೇಶಗಳಿಗೆ ಮಣಿದು ಅವನು ತನ್ನ ಸಹಜತೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ಕೃತಕ ನಗೆ, ಕೃತಕ ವರ್ತನೆ, ಕೃತಕ ಮಾತು ಇವು ಅನೇಕರಿಗೆ ಸಹಜವಾಗಿಬಿಟ್ಟಿರುತ್ತವೆ. ಸರಳತೆಯ ಗುಣವನ್ನು ಮೆಚ್ಚುವ ಸಾಮರ್ಥ್ಯವನ್ನೂ ಅವರು ಕಳೆದುಕೊಂಡಿರುತ್ತಾರೆ. ಸರಳರಾಗಿದ್ದರೆ ಜನ ಮೆಚ್ಚುವುದಿಲ್ಲವೆಂದು ಸಮಾಜದೊಡನೆ ಹೊಂದಿಕೊಳ್ಳುವುದಕ್ಕಾಗಿ, ಒಟ್ಟಿನಲ್ಲಿ ಸಾಮಾಜಿಕ ವ್ಯಕ್ತಿಯಾಗಿ ತಮ್ಮ ಉಳಿವಿಗಾಗಿ, ಅನೇಕರು ಕೃತಕತೆಯನ್ನು ಜೀವನ ವಿಧಾನವಾಗಿ ಸ್ವೀಕರಿಸುತ್ತಾರೆ. ಇಂತಹ ಸಮಾಜದಲ್ಲಿ ಸಹಜತೆಯೇ ಅಸಹಜವಾಗಿ ತೋರುವುದು ಸಹಜವಾಗಿಯೇ ಇದೆ.

ಆದಾಗ್ಯೂ ನಿಜವಾದ ಶ್ರೇಷ್ಠತೆ ಇರುವುದು ಸರಳತೆಯಲ್ಲಿ. ಸರಳತೆಯ ಹಿಂದಿರುವ ಶ್ರೇಷ್ಠತೆಯು ಕೆಲವೇ ಭಾಗ್ಯವಂತರ ಗಮನಕ್ಕೆ ಬರುವಂತಹುದು. ನಿವೇದಿತಾ ಅಂತಹ ಓರ್ವ ವ್ಯಕ್ತಿ. ಶ್ರೀಮಾತೆಯವರ ಮಡಿವಂತಿಕೆ ಮತ್ತು ಸರಳತೆಯ ಹಿಂದೆ ಅವರ ಮೇರುಸದೃಶ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ಅವಳು ಅನಾವರಣ ಗೊಳಿಸಿದಳು. ಜೋಸೆಫಿನ್ ಮ್ಯಾಕ್ಲೋಡ್‌ಳಿಗೆ ನಿವೇದಿತಾ ಒಮ್ಮೆ ಬರೆಯುತ್ತಾಳೆ: ''ನನ್ನ ಶ್ರೀಮಾತೆಯವರು ಸರಳ ಹಿಂದೂ ಮಹಿಳೆ ಅಷ್ಟೆ. ಆದರೂ ನನಗನಿಸುವಂತೆ ಅವರು ಇಂದು ಜಗತ್ತಿನಲ್ಲೇ ಅತ್ಯಂತ ಶ್ರೇಷ್ಠ ಮಹಿಳೆ. ಅವರು ಚಿಕ್ಕಮಗುವಿನಂತಿರುವರು. ಅವರಲ್ಲಿ ಜೀವಂತಿಕೆ ಮತ್ತು ಪ್ರಭೆ ಎದ್ದು ಕಾಣುತ್ತವೆ... ಅವರು ಯಾವಾಗಲೂ ಸಮಾನವಾಗಿ ಇರುತ್ತಾರೆ. ಆ! ಎಂದಿಗೂ ಬದ ಲಾಗದ ವ್ಯಕ್ತಿಯೊಡನಿರುವುದು ಎಂಥಾ ಸುಖ! ಅವರು ಸಾರ್ವ ತ್ರಿಕ, ಸಾರ್ವಕಾಲಿಕ ಆದರ್ಶ ಹಿಂದೂ, ಆದರ್ಶ ಶಿಷ್ಯೆ ಮತ್ತು ಆದರ್ಶ ಮಹಿಳೆ.'' ***(Reminiscences of Sri Sarada Devi**, Advaita Ashrama, Kolkata, P. 118)*

ಶ್ರೀಮಾತೆಯವರು ತಮ್ಮ ಅತ್ಯಂತ ಸರಳತೆಯಿಂದಾಗಿ ಚಿಕ್ಕ ಮುಗ್ಧ ಬಾಲಕಿಯಂತೆ ನಿವೇದಿತಾಗೆ ಕಾಣಿಸಿಕೊಂಡರು. ಅವಳು ಮುಂದೆ ಮ್ಯಾಕ್ಲೋಡ್‌ಳಿಗೆ ಹೀಗೆ ಬರೆಯುತ್ತಾಳೆ: ''ಶ್ರೀಮಾತೆ ಯವರು ಚಿಕ್ಕವರಾಗಿ ಕಾಣಿಸಿಕೊಳ್ಳುತ್ತಾರೆ. ಅವರು ಆನಂದಭರಿತ ರಾಗಿರುತ್ತಾರೆ. ಸದಾ ಕ್ರಿಯಾಶೀಲರು. ಅಷ್ಟಾದರೂ ಅವರ ವಯಸ್ಸು ೬೫ (೫೫) ಮೀರಿದೆ. ನಾನು ಅವರಿಗಿಂತ ಹಿರಿಯಳಾಗಿ ಕಾಣಿಸಿಕೊಳ್ಳುತ್ತೇನೆ, ನನಗಿನ್ನೂ ೪೫... ಅವರ ಧ್ವನಿಯೂ ಎಳೆಯ ದಾಗಿದೆ. ಹನ್ನೊಂದು ವರ್ಷದ ಹಿಂದಿನಂತೆಯೇ ಈಗಲೂ ಅವರ ನಗುವಿನಲ್ಲಿ ಆನಂದವಿದೆ.'' ಶ್ರೀಮಾತೆಯವರ ಈ ವ್ಯಕ್ತಿವೈಶಿಷ್ಟ್ಯಕ್ಕೆ ಸಂಬಂಧಿಸಿದಂತೆ ಸಾಧುವೊಬ್ಬರ ಹೇಳಿಕೆಯನ್ನು ಇಲ್ಲಿ ಉಲ್ಲೇಖಿಸ ಬಹುದು: ''ಅವರ ಮುಖಭಾವದಲ್ಲಿ ಮುಗ್ಧಬಾಲಕಿಯ ಕೋಮ ಲತೆ ಮತ್ತು ಮಾರ್ದವತೆ, ಬಾಯಲ್ಲಿ ಕರುಣೆ ಮತ್ತು ಸಹಾನು ಭೂತಿಯ ಮಾತುಗಳು ಮಾತ್ರ. ಕಣ್ಣಿನಲ್ಲಿ ಅವರ್ಣನೀಯ ಸ್ವರ್ಗೀಯ ಕಾಂತಿ, ಆ ರೂಪದಲ್ಲಿ ನೋಡಿದವರಿಗೆ ಇವರು ನನ್ನ ತಾಯಿಯೇ ಎಂಬ ಭಾವನೆಯನ್ನು ಹುಟ್ಟಿಸುವ ಅದ್ಭುತ ಶಕ್ತಿ. ನಿಜವಾಗಿಯೂ ನಸುನೋಟಕ್ಕೆ ಕಾಣಿಸದ ಸೂಕ್ಷ್ಮ ಗಾಂಭೀರ್ಯ ಅವರದು. ಅಸಾಮಾನ್ಯ ದೇಹಸೌಂದರ್ಯವಾಗಲಿ ನೋಡಿದಾಕ್ಷಣ ಭಯ-ಭಕ್ತಿಯನ್ನು ಹುಟ್ಟಿಸುವ ಮಹಾಠೀವಿಯಾಗಲಿ ಅವರ ದಾಗಿರಲಿಲ್ಲ.'' *(ಶ್ರೀಮಾತೆ ಶಾರದಾದೇವಿ, ಪು. ೩೪೬)*

ಶ್ರೀಮಾತೆಯವರು ಮಗುವಿನಂತಹ ಸರಳತೆಯಿಂದ ಭೂಷಿತ ರಾಗಿದ್ದರೂ ಅವರ ಮುಂದೆ ಬಾಲಿಶ ಚೇಷ್ಟೆಗೆ ಅವಕಾಶವಿರಲಿಲ್ಲ. ಅವರ ವ್ಯಕ್ತಿತ್ವದಲ್ಲಿ ಅಂತಹ ಘನತೆ-ಗಾಂಭೀರ್ಯವಿತ್ತು. ಅವರ ಈ ಗುಣವೈಶಿಷ್ಟ್ಯವನ್ನು ಗುರುತಿಸಿ ನಿವೇದಿತಾ ಬರೆಯುತ್ತಾಳೆ: ''ಆದರೂ, ನನಗನಿಸುವಂತೆ, ಅವರ ಸೌಜನ್ಯತೆಯಲ್ಲಿ ಕಂಡು ಬರುವ ರಾಜಗಾಂಭೀರ್ಯ, ಮತ್ತು ಅವರ ಅಪೂರ್ವ ತೆರೆದ ಮನಸ್ಸು, ಅವರ ಆಧ್ಯಾತ್ಮಿಕ ವ್ಯಕ್ತಿತ್ವದಷ್ಟೇ ಅದ್ಭುತವಾದವು. ಅವರ ಮುಂದೆ ಎಂಥಾ ನೂತನವೂ ಜಟಿಲವೂ ಆದ ಪ್ರಶ್ನೆಯನ್ನಿರಿಸಿದರೂ ಅವರು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಲು ಹಿಂಜರಿ ಯುವುದನ್ನು ನಾನು ಗಮನಿಸಿಲ್ಲ. ತಮ್ಮ ನಿರ್ದುಷ್ಟ ಒಳದೃಷ್ಟಿ ಯಿಂದ ವಿಷಯದ ಅಂತರಾಳವನ್ನೇ ಪ್ರವೇಶಿಸುತ್ತಿದ್ದರು, ಮತ್ತು ಸಮಸ್ಯೆಯನ್ನು ಕುರಿತಂತೆ ಸರಿಯಾದ ದೃಷ್ಟಿಕೋನ ಪ್ರಶ್ನಕನಲ್ಲಿ ಉಂಟಾಗುವಂತೆ ಮಾಡುತ್ತಿದ್ದರು.'' ***(Reminiscences of Sri Sarada Devi,** Advaita Ashrama, Kolkata, P. 112)*

ಆಳವೂ ವಿಶಾಲವೂ ಆದ ಹೃದಯದೊಂದಿಗೆ ಶ್ರೀಮಾತೆಯವ ರಲ್ಲಿ, ಯಾವಾಗಲೂ ಸದ್ಗುಣಗಳ ಕಡೆಗೇ ಒಲವುಳ್ಳ ತೀಕ್ಷ್ಣ ಬುದ್ಧಿಯೂ ಇತ್ತು. ಬುದ್ಧಿಶಕ್ತಿ ಬೆಳೆಯುವುದು ಕೇವಲ ಅದರ ಪ್ರಯೋಗದಿಂದಲ್ಲ, ನೀತಿವಂತ ಬಾಳುವೆಯ ಮೂಲಕ ಎಂಬ ಈ ಒಂದು ಸತ್ಯವನ್ನು ಆಧುನಿಕ ಶಿಕ್ಷಣವು ಗಂಭೀರವಾಗಿ ಪರಿಗಣಿಸ ಬೇಕಾಗಿದೆ ಎಂಬುದು ಚಿಂತಕರೊಬ್ಬರ ಅಭಿಪ್ರಾಯ. ತಮ್ಮ ಸಾಮಾನ್ಯ ಜೀವನದ ಸರಳತೆಯಲ್ಲಿ ಶ್ರೀಮಾತೆಯವರು ಧರ್ಮ ಜೀವನದ ಅತಿಶ್ರೇಷ್ಠ ನಿಯಮಗಳನ್ನು ಹೊರಮೂಡಿಸಿದರು; ತಮ್ಮ ಪರಿಶುದ್ಧ ಭಾವದ ಮೂಲಕ ಅನೇಕರ ಜೀವನವನ್ನು ಪರಿವರ್ತಿಸಿದರು; ತಮ್ಮ ಅಹೇತುಕ ಪ್ರೇಮಶಕ್ತಿಯ ಮೂಲಕ ಎಲ್ಲರೂ ಅವರನ್ನು ಗೌರವಿಸುವಂತೆ, ಪೂಜಿಸುವಂತೆ ಮತ್ತು ಅನುಸರಿಸುವಂತೆ ಒತ್ತಾಯಿಸಿದರು.

ಶ್ರೀಮಾತೆ ಶಾರದಾದೇವಿಯವರಿಗೆ ಹಳ್ಳಿಯ (ಜಯರಾಮ ಬಾಟಿಯ) ಮುಕ್ತ ವಾತಾವರಣದಲ್ಲಿರುವುದೆಂದರೆ ತುಂಬ ಆನಂದ.

ಅಲ್ಲಿ ಅವರಿಗೆ ಪಟ್ಟಣದ ಯಾವ ಅನುಕೂಲತೆಗಳೂ ಲಭ್ಯವಿರಲಿಲ್ಲ. ಅವರಿಗೆ ಸಹಾಯ ಮಾಡಲು ಸೇವಕರೂ ಇರಲಿಲ್ಲ ಮತ್ತು ಸಂಬಂಧಿಕರು ಕೊಡುತ್ತಿದ್ದ ಕಷ್ಟಗಳಂತೂ ಹೇಳತೀರದು. ಆದರೂ ಅಲ್ಲಿರುವುದೇ ಅವರಿಗೆ ಆನಂದ. ಅಲ್ಲಿ ಸ್ವಚ್ಛಂದವಾಗಿ ಓಡಾಡಿಕೊಂಡು ಇರುತ್ತಿದ್ದರು, ಕೊಲ್ಕತ್ತಾದಿಂದ ಹೊರಟಾಗ ಹಾಯೆನಿಸುತ್ತಿತ್ತು ಅವರಿಗೆ. ಕೊಲ್ಕತ್ತಾದಲ್ಲಿ ಪಂಜರದೊಳಗಿನ ಹಕ್ಕಿಯಂತೆ ಇರಬೇಕಾಗುತ್ತಿತ್ತು. ಅಲ್ಲಿ ಅವರ ಊಟ, ಚಲನ-ವಲನ, ಸಂದರ್ಶನ ಗಂಟೆಗೆ ಸರಿಯಾಗಿ ಆಗಬೇಕಿತ್ತು. ಆದರೆ ಹಳ್ಳಿಯಲ್ಲಿ ಹಾಗಲ್ಲ, ತಮ್ಮ ಮನಸ್ಸಿಗೆ ಬಂದಂತೆ ಇರಬಹುದಿತ್ತು. ನಾಗರಿಕ ಔಪಚಾರಿಕತೆಗಳ ವಿರುದ್ಧ ಅವರು ಆಗಾಗ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುತ್ತಿದ್ದುದುಂಟು: ''ಕೋಲ್ಕತ್ತಾದಲ್ಲಿ ನಾನು ಮಾತನಾಡುವಾಗ ಒಂದೊಂದು ಶಬ್ದವನ್ನೂ ತೂಗಿನೋಡಬೇಕು, ಎಲ್ಲಿ ಜನ ನೊಂದುಕೊಳ್ಳುತ್ತಾರೊ ಎಂದು. ಜಯರಾಮಬಾಟಿಯಲ್ಲಿಯೇ ನನಗೆ ಹಾಯೆನಿಸುತ್ತದೆ. ಹಳ್ಳಿಯವರಿಗೆ ಮನಸ್ಸಿಗೆ ಬಂದದ್ದನ್ನು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುತ್ತೇನೆ. ಅವರೂ ಅಷ್ಟೆ, ಯಾವ ಮುಚ್ಚುಮರೆಯೂ ಇಲ್ಲ. ಆದರೆ ಕಲ್ಕತ್ತದಲ್ಲಿ ಸ್ವಲ್ಪ ಹದತಪ್ಪಿದರೂ ಸಾಕು ಜನ ನೊಂದುಕೊಳ್ಳುತ್ತಾರೆ.''

ಕೊಲ್ಕತ್ತದಲ್ಲಿ ಅವರಿಗೆ ಅನೇಕ ಶ್ರೀಮಂತ ವಿದ್ಯಾವಂತ ಭಕ್ತರಿದ್ದರು, ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರು ಮತ್ತು ಯುವ ಸಂನ್ಯಾಸಿಗಳು ಇದ್ದರು. ಅವರೆಲ್ಲ ಅತ್ಯಂತ ಪೂಜ್ಯಭಾವದಿಂದ ಅವರನ್ನು ನೋಡಿಕೊಳ್ಳುತ್ತಿದ್ದರು. ಆದರೂ ತುಂಬ ಅನಾದರದ ಕಷ್ಟದ ಹಳ್ಳಿಯ ವಾತಾವರಣದಲ್ಲಿಯೇ ಅವರು ಇರಲು ಇಷ್ಟಪಡುತ್ತಿದ್ದರು. ಇದಕ್ಕೆ ಮುಖ್ಯಕಾರಣ ಅವರು ಸರಳತೆಯನ್ನು ತುಂಬ ಪ್ರೀತಿಸುತ್ತಿದ್ದುದು. ಅವರಿಗೆ ಪಟ್ಟಣಿಗರ ಗೌರವಾದರಗಳಿಗಿಂತ ಹಳ್ಳಿಗರ ಮುಗ್ಧ, ಸರಳ ವರ್ತನೆ ಇಷ್ಟವಾಗಿತ್ತು. ಅವರು ಹಳ್ಳಿಗರಿಂದ ಯಾವುದೇ ವಿಶೇಷ ಗೌರವವನ್ನೂ ನಿರೀಕ್ಷಿಸಲಿಲ್ಲ. ಪಟ್ಟಣದಿಂದ ಬಂದ ಭಕ್ತರು ಶ್ರೀಮಾತೆಯವರಿಗೆ ತೋರಿಸುತ್ತಿದ್ದ ಭಕ್ತಿಯನ್ನು ನೋಡಿ ಕೆಲವು ಹಳ್ಳಿಗರಿಗೆ ಆಶ್ಚರ್ಯವಾಗುತ್ತಿತ್ತು. ಅವರು ಶ್ರೀಮಾತೆಯವರನ್ನು ಕೇಳುತ್ತಿದ್ದರು: ''ತಾಯಿ, ಅವರೆಲ್ಲ ನಿಮಗೆ ಅಷ್ಟೊಂದು ಗೌರವಿಸುತ್ತಾರೆ, ಪೂಜಿಸುತ್ತಾರೆ, ಆದರೆ ನಮಗೆ ನಿಮ್ಮಲ್ಲಿ ಅಂಥ ವಿಶೇಷವೇನೂ ಕಾಣುತ್ತಿಲ್ಲವಲ್ಲ?'' ಶ್ರೀಮಾತೆಯವರು ಮುಗುಳ್ನಕ್ಕು ಹೇಳುತ್ತಿದ್ದರು, ''ವಿಶೇಷವೇನು ಬಂತು! ನಾನೊಬ್ಬ ಸಾಮಾನ್ಯ ಮಹಿಳೆ, ನಿಮ್ಮ ಶಾರದೆ, ಅಷ್ಟೆ'' ಎಂದು. ಹಳ್ಳಿಗರಿಗೆ ಅವರು ಪ್ರೀತಿಯ ಸಹೋದರಿ ಶಾರದೆಯಾಗಿದ್ದರು. ಅವರಿಗೆಲ್ಲ ಅವರು ಮುಗ್ಧ ಬಾಲಕಿಯಾಗಿದ್ದರು. ಆ ರೀತಿ ಅವರ ಪ್ರೀತಿಯನ್ನು ಸವಿಯುವುದರಲ್ಲೇ ಶ್ರೀಮಾತೆಯವರಿಗೆ ಅತ್ಯಾನಂದ. ಸ್ವಾಮಿ ಅಶೇಷಾನಂದರು ಹೇಳುತ್ತಾರೆ: ''ಶ್ರೀಮಾತೆಯವರ ಜೀವನದಿಂದ ನಾನು ಕಲಿತ ಎರಡು ಪಾಠಗಳೆಂದರೆ, ಪವಿತ್ರತೆ ಮತ್ತು ಸರಳತೆ. ಜೀವನದ ಪ್ರತಿಯೊಂದು ಮಹಾನ್ ವಸ್ತುವೂ ಸರಳ. ಶೈಶವಾವಸ್ಥೆಯಲ್ಲಿ ನಾವು ಸವಿಯುವ ಮಾತೃಸ್ನೇಹ ಅದೆಷ್ಟು ಸರಳ! ಆದರೆ ಶ್ರೀಮಾತೆಯವರ ಸರಳತೆ ಅಸಾಧಾರಣವಾದುದು!''

ಈ ಅತುಲನೀಯ ಸರಳತೆಯ ಹಿಂದಿರುವ ರಹಸ್ಯವನ್ನು ನಿವೇದಿತಾ ಅನಾವರಣಗೊಳಿಸುತ್ತಾಳೆ: ''ಶ್ರೀಮಾತೆಯವರ ಬಾಳುವೆಯನ್ನು ನೋಡಿದಾಗ ಅವರು ತಾವರೆಯ ಎಲೆಯಂತಿದ್ದರು ಎನಿಸುತ್ತದೆ. ಎಲ್ಲ ಕಡೆಯಿಂದಲೂ ಪ್ರಪಂಚವನ್ನು ಸ್ಪರ್ಶಿಸಿದರೂ ಯಾವುದರಿಂದಲೂ ವಿಚಲಿತರಾಗದ ಮತ್ತು ಕಲುಷಿತರಾಗದ ಜೀವನ ಅವರದಾಗಿತ್ತು. ಅವರ ಜೀವನ ದಿವ್ಯಾನಂದಭರಿತವಾಗಿತ್ತು. ಅವರು ಯಾವಾಗಲೂ ಪರಿಪೂರ್ಣ ಪತ್ನಿಯಾಗಿ ಆ ಹಿಂದೂ ಆದರ್ಶದಂತೆ ಬಾಳಿದರು. ಆಹ್! ಎಷ್ಟೊಂದು ಪರಿಪೂರ್ಣರು ಅವರು! ಅವರ ಪ್ರೀತಿ ಎಷ್ಟು ಆಳ! ನಿಜವಾಗಿಯೂ ಆಶ್ಚರ್ಯವೆನಿಸುತ್ತದೆ.'' *(ಅದೇ, ಪು. ೧೧೭)*

ಶ್ರೀಮಾತೆಯವರಲ್ಲಿದ್ದ ಈ ನಿರ್ವಿಕಾರ ವಾಸ್ತವದೃಷ್ಟಿಗೆ ಮುಖ್ಯ ಕಾರಣ ಅವರ ಯಥಾರ್ಥ ಸರಳತೆ. ಈ ಸರಳತೆಯ ಮೂಲ ಅವರ ಮನಸ್ಸು ನಿಷೇಧಾತ್ಮಕ ಭಾವಗಳಿಂದ ಮುಕ್ತವಾಗಿದ್ದುದು. ಈ ನಿಷೇಧಾತ್ಮಕ ಭಾವಗಳೇ ನಮ್ಮ ದೃಷ್ಟಿಕೋನವನ್ನು ವಿಕೃತಗೊಳಿಸುವುದು.

ಬಾಹ್ಯ ಸರಳತೆ ಆಂತರಿಕ ಸರಳತೆಯನ್ನು ಅವಲಂಬಿಸಿರುತ್ತದೆ. ಆಂತರಿಕ ಸರಳತೆಯನ್ನು ಕೆಡಿಸುವ ಶಕ್ತಿ ಯಾವುದೆಂದರೆ ರಾಗ ದ್ವೇಷಗಳಿಂದ ಉಕ್ಕುವ ಬಲವಾದ ಭಾವೋದ್ವೇಗಗಳು. ಇಂತಹ ಭಾವೋದ್ವೇಗಗಳ ಒತ್ತಡಕ್ಕೆ ಒಳಗಾದಾಗ ಆಲೋಚನೆಗಳು ವಕ್ರವಾಗುತ್ತವೆ. ಬೆಳಕಿನ ಕಿರಣಗಳು ಕೂಡ ತುಂಬ ಗುರುತ್ವವುಳ್ಳ ಆಕಾಶಕಾಯದ ಹತ್ತಿರ ಬರುವಾಗ ವಕ್ರವಾಗುತ್ತವೆ ಎಂದು ವಿಜ್ಞಾನಿಗಳು ಹೇಳುತ್ತಾರೆ. ಹಾಗೆಯೇ ಭಾವೋದ್ವೇಗಗಳ ಪ್ರಭಾವದಿಂದಾಗಿ ನಮ್ಮ ಆಲೋಚನೆಗಳು ವಿಕೃತಗೊಳ್ಳುತ್ತವೆ, ವಸ್ತುನಿಷ್ಠವಾಗಿ ಆಲೋಚಿಸುವ ಸಾಮರ್ಥ್ಯವನ್ನು ನಾವು ಕಳೆದುಕೊಳ್ಳುತ್ತೇವೆ. ಇದರ ಪರಿಣಾಮವಾಗಿಯೇ ವಸ್ತು, ವ್ಯಕ್ತಿ ಮತ್ತು ಘಟನೆಗಳು ನಮ್ಮ ಪಾಲಿಗೆ ಯಾಥಾರ್ಥತೆಯನ್ನು ಕಳೆದುಕೊಳ್ಳುತ್ತವೆ. ನಮ್ಮ ಆಲೋಚನೆಗಳ ವಿಕೃತಿಗೆ ಅನುಗುಣವಾಗಿ ಅವೂ ವಿಕೃತಿಯನ್ನು ಹೊಂದುತ್ತವೆ. ನಮ್ಮ ಆಲೋಚನೆ ನೇರವೂ ಸರಳವೂ ಆಗಿದ್ದರೆ, ನಮ್ಮಲ್ಲಿ ಯಥಾರ್ಥ ದೃಷ್ಟಿ ಇದ್ದರೆ, ವ್ಯಕ್ತಿ ಮತ್ತು ಘಟನೆಗಳು ದೋಷಯುಕ್ತವಾಗಿ ಕಾಣುವುದಿಲ್ಲ, ವಾಸ್ತವವಾಗಿ ಕಾಣುತ್ತವೆ. ಒಬ್ಬ ವ್ಯಕ್ತಿ ತಪ್ಪು ಮಾಡಬಹುದು; ನಾವು ಆ ತಪ್ಪನ್ನು ಗುರುತಿಸಿದರೂ, ವ್ಯಕ್ತಿಯ ಮೇಲೆ ಸಂಪೂರ್ಣ ದೋಷಾರೋಪಣೆ ಮಾಡಬೇಕಾದ ಆವಶ್ಯಕತೆ ಇಲ್ಲ. ಅವನು ಮಾಡುವ ತಪ್ಪು (ಅದು ಕೊಲೆಯೇ ಆಗಿರಬಹುದು) ಒಂದು ಘಟನೆ ಮತ್ತು ಹಲವಾರು ಅಂಶಗಳು (factors) ಕೂಡಿ ಆ ಘಟನೆ ನಡೆದಿದೆ. ಅವುಗಳಲ್ಲಿ ಬಾಹ್ಯ ಸನ್ನಿವೇಶಗಳು ಹಾಗೂ ವ್ಯಕ್ತಿಯ ಮಾನಸಿಕ ಒತ್ತಡಗಳೂ ಸೇರಿರುತ್ತವೆ. ಆದ್ದರಿಂದ ಇಲ್ಲಿ ವ್ಯಕ್ತಿ ಅನೇಕ ಒತ್ತಡಗಳ ಬಲಿಪಶುವಾಗಿ ಒಂದು ತಪ್ಪನ್ನು ಮಾಡಿರುತ್ತಾನೆ. ಈ ವಾಸ್ತವ ದೃಷ್ಟಿ ಇದ್ದರೆ ವ್ಯಕ್ತಿಯ ಬಗ್ಗೆ ಸಹಾನುಭೂತಿ ನಮಗುಂಟಾಗುತ್ತದೆಯೇ ಹೊರತು, ತಿರಸ್ಕಾರ ಅಥವಾ ದ್ವೇಷ ಅಲ್ಲ.

ಈ ವಾಸ್ತವ ದೃಷ್ಟಿ ಆಂತರಿಕ ಸರಳತೆಯ ಪರಿಣಾಮ. ಶ್ರೀಮಾತೆಯವರ ಮನಸ್ಸು ಸರಳವಾಗಿದ್ದುದರಿಂದಲೇ ಅವರು ದೋಷದರ್ಶಿಗಳಾಗಿರಲಿಲ್ಲ. ಒಬ್ಬ ಕಳ್ಳನನ್ನೂ ಸಹಾನುಭೂತಿಯಿಂದ ಪುತ್ರನನ್ನಾಗಿ

ಸ್ವೀಕರಿಸಿದರು. ಕಳ್ಳತನ ಸರಿ ಎಂಬುದು ಅವರ ಅಭಿಪ್ರಾಯವಲ್ಲ. ಆದರೆ ಒಬ್ಬ ವ್ಯಕ್ತಿಯನ್ನು ಕಳ್ಳನನ್ನಾಗಿ ನೋಡಲು ಅವರ ಮನಸ್ಸು ನಿರಾಕರಿಸಿತು. ಸ್ವಾಮಿ ವಿವೇಕಾನಂದರು ಹೇಳುವಂತೆ ಒಂದು ಮಗುವಿಗೆ ಕಳ್ಳನು ಕಾಣಿಸುವುದಿಲ್ಲ, ಅದು ಕಳ್ಳನನ್ನು ಒಂದು ವ್ಯಕ್ತಿಯಾಗಿ ನೋಡುತ್ತದೆ ಅಷ್ಟೆ. ಮಗುವು ಮನಸ್ಸಿನ ಅಪಕ್ವತೆಯಿಂದಾಗಿ ಕಳ್ಳನನ್ನು ನೋಡದಿದ್ದರೆ, ಶ್ರೀಮಾತೆಯವರು ಮನಸ್ಸಿನ ಪೂರ್ಣ ಪಕ್ವತೆಯಿಂದಾಗಿ ಕಳ್ಳನನ್ನು ಕಾಣಲಿಲ್ಲ. ಅವರ ಮನಸ್ಸು ಭಾವೋದ್ವೇಗಗಳಿಂದ ವಿಕೃತಗೊಂಡಿರಲಿಲ್ಲ. ವ್ಯಕ್ತಿಯನ್ನು ವ್ಯಕ್ತಿಯಾಗಿ ಕಂಡರು, ವ್ಯಕ್ತಿಯಾಗಿ ಪ್ರೀತಿಸಿದರು. ಆದ್ದರಿಂದ ಅವರ ಪ್ರೀತಿಯು ಎಲ್ಲರೆಡೆಗೂ ಸಮಾನವಾಗಿ ಹರಿಯಿತು, ನೇರವಾಗಿ ಹರಿಯಿತು, ಅದಕ್ಕೆ ಭಾವೋದ್ವೇಗಗಳ ತಡೆಯಿರಲಿಲ್ಲ. ಇದು ಅವರ ಅಂತರಿಕ ಸರಳತೆಯ ಪರಿಣಾಮ. ''ನನ್ನ ದಯೆಯನ್ನು ಸಂಪಾದಿಸದವನು ನಿಜವಾಗಿಯೂ ದುರದೃಷ್ಟವಂತನೆ. ನಾನು ದಯೆ ತೋರದ ಯಾವನನ್ನೂ ನಾನರಿಯೆ – ಒಂದು ಹುಳವನ್ನೂ ಕೂಡ!'' ಎನ್ನುತ್ತಾರೆ ಶ್ರೀಶಾರದಾದೇವಿಯವರು.

ಶ್ರೀಮಾತೆಯವರ ಈ ಅಹೇತುಕ ಪ್ರೀತಿಯನ್ನು ಕುರಿತಾಗಿ ನಿವೇದಿತಾ ಬರೆಯುತ್ತಾಳೆ: ''ಅವರು ತುಂಬ ಮಡಿವಂತರು, ಆದರೂ ಅವರು ಪಾಶ್ಚಾತ್ಯ ಮಹಿಳೆಯರಾದ ಶ್ರೀಮತಿ ಬುಲ್ ಮತ್ತು ಕುಮಾರಿ ಮ್ಯಾಕ್ಲೋಡ್‌ರನ್ನು ನೋಡಿದಾಕ್ಷಣ ಅವರ ಮಡಿವಂತಿಕೆಯೆಲ್ಲ ಕರಗಿಹೋಯಿತು, ಆ ಮಹಿಳೆಯರೊಡನೆ ತಿಂಡಿಯನ್ನು ಹಂಚಿಕೊಂಡರು!''

ಇಂದಿನ ವಾಣಿಜ್ಯ ಯುಗದಲ್ಲಿ ನಾವು ವ್ಯಕ್ತಿಯನ್ನು ವ್ಯಕ್ತಿಯಾಗಿ ಕಾಣುವುದಿಲ್ಲ, ಒಂದು ಉಪಯುಕ್ತ ವಸ್ತುವಾಗಿ ಕಾಣುತ್ತೇವೆ. 'ಉಪಯೋಗಿಸಿ ಬಿಸಾಕು' (use and throw) ಎಂಬ ನಿಯಮವನ್ನು ಮನುಷ್ಯನಿಗೂ ಅನ್ವಯಿಸುತ್ತಿರುವುದು ಸ್ಪಷ್ಟವಾಗಿ ಕಂಡು ಬರುತ್ತಿದೆ. ಆದರೆ ಈ ಧೋರಣೆಯನ್ನು ಶ್ರೀಮಾತೆಯವರು ಸಾಮಾನ್ಯ ವಸ್ತುಗಳಿಗೂ ಅನ್ವಯಿಸುತ್ತಿರಲಿಲ್ಲ. ಈ ರೀತಿ ಎಲ್ಲರಿಗೂ ಮತ್ತು ಎಲ್ಲದಕ್ಕೂ ಯೋಗ್ಯ ಗೌರವವನ್ನು ತೋರಿಸುವ ಸ್ವಭಾವ ಸರಳತೆಯ ಒಂದು ಮುಖ್ಯ ಲಕ್ಷಣ. ಈ ಲಕ್ಷಣದಿಂದ ಶೋಭಿಸುವ ವ್ಯಕ್ತಿಯು ಯಾವಾಗಲೂ ಶಾಂತಿ ಮತ್ತು ಆನಂದವನ್ನು ಹೊರ ಸೂಸುತ್ತಿರುತ್ತಾನೆ. ಆ ವ್ಯಕ್ತಿಯ ಪ್ರಭಾವದ ವಲಯದೊಳಗೆ ಬರುವ ಎಲ್ಲರೂ ಈ ಶಾಂತಿ ಮತ್ತು ಆನಂದದಿಂದ ಪರಿಪ್ಲುತರಾಗುತ್ತಾರೆ. ಈ ವಿಷಯದಲ್ಲಿ ನಿವೇದಿತಾಳ ಮಾತನ್ನು ಕೇಳೋಣ: ''ಆಃ! ಆಶ್ಚರ್ಯ! ಶ್ರೀಮಾತೆಯರೊಡನಿರುವುದೆಂದರೆ ಎಂಥ ಅದ್ಭುತ ಎಂಬುದನ್ನು ನಿನಗೆ ನಾನು ಹೇಳಲಾರೆ. ಅಂಥ ಒಂದು ಸ್ಥಳ ನಿಜವಾಗಿಯೂ ಇದೆ, ಒಬ್ಬನ ಹೃದಯದ ಕನಸಿನ ಲೋಕ ಇಲ್ಲಿದೆ. ಆ ಮನೆಯೊಳಗೆ ಎಂಥ ಒಂದು ಮಾಧುರ್ಯ! ದೈನಂದಿನ ಕಾರ್ಯಾರಂಭಕ್ಕೆ ಮುಂಚೆ ಆ ಕೊಠಡಿಗೊಮ್ಮೆ ಪ್ರವೇಶಿಸಿದರೆ ಸಾಕು – ಆ ಪ್ರೇಮಚಂದ್ರಿಕೆಯ ಶೀತಳ ಸ್ಪರ್ಶ ಅದೆಷ್ಟು ಮುದವನ್ನು ನೀಡುತ್ತದೆ! ಅದು ನಮ್ಮಿಂದ ಏನನ್ನೂ ಬಯಸುವುದಿಲ್ಲ. ಆಃ! ನಾನದನ್ನು ವರ್ಣಿಸಲಾರೆ! ''

ಸರಳತೆಯ ಇನ್ನೊಂದು ಲಕ್ಷಣ ತನ್ನ ದೋಷವನ್ನು ಮರೆ ಮಾಚದೆ ಒಪ್ಪಿಕೊಳ್ಳುವುದು. ಸರಳ ವ್ಯಕ್ತಿಗಳ ಮನಸ್ಸು ಮುಕ್ತವಾಗಿರುತ್ತದೆ. ಯಾವುದನ್ನೂ ಬಚ್ಚಿಡುವ ಪ್ರಯತ್ನ ಮಾಡುವುದಿಲ್ಲ. ದ.ರಾ.ಬೇಂದ್ರೆಯವರು ಹೇಳುವಂತೆ, **'ಮುಚ್ಚಿಡುವುದೇಕಿನ್ನು, ಬಚ್ಚಿಡುವುದಿದನೆಲ್ಲಿ, ಮುಚ್ಚುಮರೆ ಮಾಳ್ಪದಕೆ ಮುಸುಕು ಇಹುದೆಲ್ಲಿ?'** ಮುಚ್ಚಿಡುವ ಆವಶ್ಯಕತೆಯೇ ಇರುವುದಿಲ್ಲ ಹಾಗೂ ಮುಚ್ಚಿಡಲೇಬೇಕಾದಂತಹದೇನೂ ಅವರಲ್ಲಿ ಇರುವುದಿಲ್ಲ. ಏಕೆಂದರೆ ಅವರದು ಪವಿತ್ರಾಂತರಂಗ. ಶ್ರೀಮಾತೆಯವರು ಪವಿತ್ರತಾ ಸ್ವರೂಪಿಣಿಯೇ ಆಗಿದ್ದರು. ಅವರು ಮರೆಮಾಚಬೇಕಾದ ದೋಷಗಳಾವುವೂ ಇರಲೇ ಇಲ್ಲ. ಸಣ್ಣ ಪುಟ್ಟ ತಪ್ಪುಗಳಾದರೂ ಅವನ್ನು ಮರೆಮಾಚುವ ಸ್ವಭಾವವೇ ಅವರಲ್ಲಿರಲಿಲ್ಲ. ಏಕೆಂದರೆ ಅವರು ಯಾವತ್ತೂ ಲೋಕಮಾನ್ಯತೆಯನ್ನು ಬಯಸಿದವರಲ್ಲ. ಲೋಕದ ಕಣ್ಣಿಗೆ ತಾನು ಶ್ರೇಷ್ಠವ್ಯಕ್ತಿಯೆಂದು ತೋರಿಸಿಕೊಳ್ಳುವ ಪ್ರಯತ್ನವನ್ನು ಅವರೆಂದೂ ಮಾಡಲೇ ಇಲ್ಲ. ಆದ್ದರಿಂದಲೇ ಅವರ ನಡೆನುಡಿಗಳಲ್ಲಿ ಮನಸೆಳೆಯುವ ಸಹಜತೆ ಇತ್ತು. ಇದರಿಂದಲೇ ಅವರು ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ತಪ್ಪೊಪ್ಪಿಕೊಳ್ಳುವ ಈ ಕಲೆ, ಈ ಸರಳತೆ ವ್ಯಕ್ತಿ–ವ್ಯಕ್ತಿಗಳ ನಡುವಿನ ಸಂಬಂಧವನ್ನು ಉತ್ತಮಗೊಳಿಸುವುದು.

ಶ್ರೀಮಾತೆಯವರು ತಮ್ಮ ದೋಷವನ್ನು ಒಪ್ಪಿಕೊಳ್ಳುವ ವಿಧಾನ ಅದೆಷ್ಟು ಚಿತ್ತಾಕರ್ಷಕ! ಈ ಕೆಳಗಿನ ಘಟನೆ ಇದಕ್ಕೊಂದು ನಿದರ್ಶನ: ಒಮ್ಮೆ ಮಾಯಾವತಿಯಿಂದ ಬಂದಿದ್ದ ಭೂತಿಯಾ ಬಾಲಕಿಯರು ಶ್ರೀಮಾತೆಯವರಿಗೊಂದು ಸುಂದರವಾದ ಆಸನವನ್ನು ಕೊಟ್ಟಿದ್ದರು. ಅವರಿಗದು ತುಂಬ ಮೆಚ್ಚಿಕೆಯಾಗಿದ್ದು, ಆ ಬಾಲಕಿಯರ ಭಕ್ತಿ ಮತ್ತು ಕೌಶಲವನ್ನು ಅವರು ಮನತುಂಬ ಹೊಗಳಿದ್ದರು. ಅವರು ಅದನ್ನು ಪೂಜೆಗೆ ಕುಳಿತುಕೊಳ್ಳುವಾಗ ಉಪಯೋಗಿಸುತ್ತಿದ್ದರು. ಒಂದು ದಿನ ಭಕ್ತನೊಬ್ಬನು ಶ್ರೀಮಾತೆಯವರನ್ನು ನೋಡಲು ಹೋಗಿದ್ದಾಗ ಅವರು ಚಿಂತಾಕ್ರಾಂತರಾಗಿ ತಲೆಯ ಮೇಲೆ ಕೈ ಇಟ್ಟುಕೊಂಡು ಕುಳಿತಿದ್ದರು. ಅವರ ಪಕ್ಕದಲ್ಲಿ ಈಳಿಗೆ ಮಣೆಯಿತ್ತು, ಮತ್ತೆ ಅದರೆರಡು ಪಕ್ಕದಲ್ಲಿ ಆಸನದ ತುಂಡಾದ ಎರಡು ಭಾಗಗಳಿದ್ದವು. ಅವರು ಈ ಭಕ್ತನನ್ನು ನೋಡಿದ ಕೂಡಲೇ, ''ನೋಡು ಮಗು, ಎಂಥ ಕೆಲಸ ಮಾಡಿಬಿಟ್ಟೆ'' ಎಂದು ಅತ್ಯಂತ ಕಳವಳದಿಂದ ನುಡಿದರು. ಅನಂತರ ಆಸನದ ಎರಡು ತುಂಡುಗಳನ್ನು ಅವನಿಗೆ ತೋರಿಸಿ ಅತ್ಯಂತ ಪಶ್ಚಾತ್ತಾಪದಿಂದ ನುಡಿದರು, ''ಆ ಬೆಟ್ಟದ ಹುಡುಗಿಯರು ಕೊಟ್ಟಿದ್ದ ಆ ಸುಂದರ ಆಸನ ತುಂಬ ದೊಡ್ಡದಾಗಿತ್ತು. ಅದು ಹೆಚ್ಚು ಜಾಗವನ್ನು ಆಕ್ರಮಿಸಿಕೊಳ್ಳುತ್ತಿತ್ತು. ನನಗೆ ಅಷ್ಟು ದೊಡ್ಡ ಆಸನ ಬೇಕಿರಲಿಲ್ಲ. ಆದ್ದರಿಂದ ಅದನ್ನು ಒಳಭಾಗಕ್ಕೆ ಮಡಿಸಿದೆ. ಆದರೆ ಒಳ್ಳೆಯ ಕಸೂತಿ–ಚಿತ್ರಗಳೆಲ್ಲ ಮರೆಯಾದವು. ಅಷ್ಟೇ ಅಲ್ಲದೆ ಕುಳಿತುಕೊಳ್ಳುವುದಕ್ಕೂ ಕಠಿಣವೆನಿಸಿತು. ಇನ್ನೊಂದು ರೀತಿ ಮಡಿಸಿದಾಗ ಕಸೂತಿ–ಚಿತ್ರಗಳು ನೆಲಕ್ಕೆ ತಗುಲಿ ಹಾಳಾಗುವ ಸಂಭವವಿತ್ತು. ಹೇಗೆ ಮಡಿಸಿದರೂ ಕುಳಿತುಕೊಳ್ಳಲು ಅನುಕೂಲವಾಗಿರಲಿಲ್ಲ, ಮತ್ತು ನೋಡುವುದಕ್ಕೂ ಚೆನ್ನಾಗಿ ಕಾಣುತ್ತಿರಲಿಲ್ಲ. ಆಗ ನನಗೆ ಯೋಚನೆ ಬಂತು – ಇದನ್ನು ಎರಡಾಗಿ ತುಂಡು ಮಾಡಿದರೆ ಅದು ಚಿಕ್ಕದಾಗುವುದು ಮಾತ್ರವಲ್ಲದೆ ಇಬ್ಬರು

ಉಪಯೋಗಿಸಬಹುದು – ಎಂದು. ಈ ಈಳಿಗೆಮಣೆಯಿಂದ ಅದನ್ನು ಕತ್ತರಿಸಿದೆ. ಆದರೆ ವಕ್ರವಾಗಿ ಕತ್ತರಿಸಿದ್ದರಿಂದ ಎರಡೂ ಹಾಳಾದವು. ನಾನೆಂಥ ಕೆಲಸ ಮಾಡಿಬಿಟ್ಟೆ ಎಂದು ಈಗ ವ್ಯಥೆಯಾಗುತ್ತಿದೆ. ಸರಳಾ ಇದ್ದಳು, ಅವಳಿಗೆ ಹೇಳಿದ್ದರೆ ಸರಿಯಾಗಿ ಕತ್ತರಿಸಿಕೊಡುತ್ತಿದ್ದಳು. ನಾನೆಂಥ ಮೂರ್ಖೆ! ಯಾರಾದರೂ ಇದನ್ನುನೋಡಿದರೆ ನಗುತ್ತಾರೆ.'' *('ಶ್ರೀಮಾತೆ ಶಾರದಾದೇವಿ', ಪು. ೩೬೩ -೬೪)*

ತಾವು ಎಷ್ಟೇ ಗೌರವಕ್ಕೆ ಪಾತ್ರರಾಗಿದ್ದರೂ ಶ್ರೀಮಾತೆಯವರು ತಮ್ಮ ಸ್ವಾಧೀನವನ್ನು ಕಳೆದುಕೊಂಡಿರಲಿಲ್ಲ ಮತ್ತು ಅವರು ಎಂದಿನಂತೆಯೇ ಸರಳರಾಗಿದ್ದರು. ಅವರ ಈ ಗುಣವನ್ನು ಪ್ರತಿಬಿಂಬಿಸುವ ಅನೇಕ ಘಟನೆಗಳಿವೆ. ಅವರು ಉದ್ಬೋಧನದಲ್ಲಿದ್ದಾಗ ಒಮ್ಮೆ ಜೊಸೆಫಿನ್ ಮ್ಯಾಕ್ಲೋಡ್ ಅವರನ್ನು ಸಂಧಿಸಲು ಬಂದಳು. ಅನೇಕ ಮಹಿಳಾ ಭಕ್ತರು ಫಲಪುಷ್ಪಗಳನ್ನು ತಂದು ಅವರಿಗೆ ಅರ್ಪಿಸುತ್ತ ಅವರಿಗೆ ಪ್ರಣಾಮ ಮಾಡುತ್ತಿದ್ದರು. ಈಗ ಮ್ಯಾಕ್ಲೋಡ್‌ಗೆ ಗೊಂದಲ – ತಾನೂ ಎಲ್ಲರಂತೆ ಪ್ರಣಾಮ ಮಾಡುವುದೇ ಬೇಡವೇ ಎಂದು ಯೋಚಿಸುತ್ತ ನಿಂತುಬಿಟ್ಟಳು. ಕೂಡಲೇ ಶ್ರೀಮಾತೆ ಯವರು ಆಕೆಯ ಮುಖವನ್ನೊಮ್ಮೆ ವೀಕ್ಷಿಸಿದರು. ಆಕೆಯ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, ನೀನೇನೂ ಹಾಗೆ ಮಾಡಬೇಕಾಗಿಲ್ಲ ಎಂದು ಕೈಸನ್ನೆಯ ಮೂಲಕ ಸೂಚಿಸಿದರು. ಇತರರ ಅಂತರಂಗವನ್ನು ಅರ್ಥಮಾಡಿಕೊಳ್ಳುವ ಅವರ ಆ ತಾಯ್ತನದ ಅರಿವು ನಿಜವಾಗಿಯೂ ಅಪೂರ್ವವಾದುದು.

ಅನೇಕರು ಶ್ರೀಮಾತೆಯವರ ಮಾತೃಪ್ರೇಮವನ್ನು ಸವಿದರು, ಅವರನ್ನು ಗುರುವಾಗಿ ಸ್ವೀಕರಿಸಿ ಮುಕ್ತರಾದರು. ಮತ್ತನೇಕರು ಅನೇಕ ರೀತಿಯಲ್ಲಿ ಅವರ ಪ್ರಯೋಜನವನ್ನು ಪಡೆದರು. ಆದರೆ ಅವರ ಅಪೂರ್ವ ಸರಳತೆಯ ಹಿಂದಿರುವ ಶ್ರೇಷ್ಠತೆಯನ್ನು ಗುರುತಿಸಿದವರು ಕೆಲವೇ ಮಂದಿ. ಅಂಥವರಲ್ಲಿ ಒಬ್ಬಳು ಸೋದರಿ ನಿವೇದಿತಾ.

ಮಗುವಿಗೆ ತಾಯಿಯು ಸರ್ವಶಕ್ತೆ. ಎಂತಹ ಭಯಾನಕ ಸನ್ನಿವೇಶದಲ್ಲಿಯೂ ಕೂಡ ಮಗುವು ತಾಯಿಯ ಮಡಿಲಲ್ಲಿ ತಾನು ಸಂಪೂರ್ಣ ಸುರಕ್ಷಿತವೆಂದು ಭಾವಿಸುತ್ತದೆ. ನಿವೇದಿತಾಳ ಭಾವವೂ ಅದೇ ಆಗಿತ್ತು. ಈ ಭಾವವು ಅವಳ ಈ ಕೆಳಗಿನ ಮಾತಿನಲ್ಲಿ ವ್ಯಕ್ತವಾಗಿದೆ. ''ನಾನು ದೀರ್ಘ ಕಾಲ ಜೈಲಿಗೆ ಹೋಗಬೇಕಾಗಿ ಬಂದರೂ ನನ್ನ ಸ್ನೇಹಿತರಾರೂ ಆ ಕುರಿತು ಚಿಂತಿಸಬೇಕಾಗಿಲ್ಲ. ಏಕೆಂದರೆ ನಾನು ಕೂಡಲೆ ಧ್ಯಾನಮಗ್ನಳಾಗಿ ಶ್ರೀಮಾತೆಯವರು ಯಾವ ಉನ್ನತ ಮಟ್ಟದಲ್ಲಿರುವರೋ ಆ ಮಟ್ಟಕ್ಕೆ ಏರಿಬಿಡುತ್ತೇನೆ. ಅವರ ಆಳ ಅನುಭವ ಮತ್ತು ಅಪಾರ ಪ್ರೇಮ, ಅದರೊಡನೆ ಸಂಮಿಳಿತಗೊಂಡಿರುವ ಅವರ ಆ ಮಾಧುರ್ಯ ಮತ್ತು ಪ್ರಶಾಂತತೆ – ಇದು ಯಾವ ಕಲ್ಪನೆಗೂ ಮೀರಿದುದು.''

*(**Reminiscences of Sri Sarada Devi,** Advaita Ashrama, Kolkata, P. 116)* ❖

# ಸೋದರಿ ನಿವೇದಿತಾ ಕಂಡ ಸ್ವಾಮಿ ವಿವೇಕಾನಂದರು

ಪ್ರವ್ರಾಜಿಕಾ ಧರ್ಮಪ್ರಾಣಾ

ನಿವೇದಿತಾ ತನ್ನ ಗುರು ಸ್ವಾಮಿ ವಿವೇಕಾನಂದರನ್ನು ಕುರಿತು ತನ್ನ ಕೃತಿಗಳಲ್ಲಿ ವಿಸ್ತಾರವಾಗಿ ಬರೆದಿದ್ದಾಳೆ. ಪಾಶ್ಚಾತ್ಯ ದೃಷ್ಟಿಕೋನದಿಂದ ಭಾರತೀಯ ಮಹಾಪುರುಷನೊಬ್ಬನ ಜೀವನವನ್ನು ಅರಿಯಬಯಸುವ ವಿನೀತ ಶಿಷ್ಯೆಯೊಬ್ಬಳ ಕುತೂಹಲ, ಸಮರ್ಪಣ ಭಾವ, ಭಕ್ತಿ-ಗೌರವ, ಕುಶಾಗ್ರಮತಿ ಇವೇ ಮೊದಲಾದ ವಿಶಿಷ್ಟ ಅಂಶಗಳನ್ನು ಇಲ್ಲಿ ಸೆರೆಹಿಡಿದಿರುವ ಲೇಖಕಿ, ಚಿಕ್ಕಮಗಳೂರು ಶ್ರೀಶಾರದಾ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



ಸ್ವಾಮಿ ವಿವೇಕಾನಂದರ ಹೆಸರು ಜಗತ್ತಿನಾದ್ಯಂತ ಹರಡಿ ಲೋಕಪ್ರಸಿದ್ಧವಾಗಿದೆ. ಅವರು ಜಗತ್ತಿಗೆ ನೀಡಿದ ಸಂದೇಶ, ಉಪದೇಶಗಳು ಎಲ್ಲಾ ಕಡೆ ಹರಡಿ ಉತ್ತಮ ರೀತಿಯಲ್ಲೇ ಕಾರ್ಯೋನ್ಮುಖವಾಗಿದೆ. ಅಂತೆಯೇ ಭಾರತದಲ್ಲಿಯೂ. ಆದರೆ ಅಂದು ಸ್ವಾಮೀಜಿ ಪರಿವ್ರಾಜಕರಾಗಿ ಭಾರತವನ್ನೆಲ್ಲಾ ಸುತ್ತಿ ನಡೆದು ಜನರ ಸಮಸ್ಯೆಯನ್ನು ಕಂಡು ಅದರ ಪರಿಹಾರಕ್ಕಾಗಿ ಚಿಂತಿಸಿದಾಗ ಅದಕ್ಕಾಗಿ ಭಾರತದಲ್ಲಿ ಅವರಿಗೆ ಯಾವ ಸಹಾಯವೂ ಸಿಗಲಿಲ್ಲ. ಅವರು ಪಾಶ್ಚಾತ್ಯ ದೇಶಕ್ಕೆ ಹೋಗಿ ಅಲ್ಲಿಯ ಜನರಿಗೆ ಸನಾತನ ಧರ್ಮವನ್ನು ತಿಳಿಸಿ, ಭಾರತದ ಹಿರಿಮೆಯನ್ನು ತಿಳಿಸಿ, ಅವರಿಂದ ಭಾರತಕ್ಕೆ ಸಹಾಯವಾಗುವಂತೆ ಮಾಡಿದರು. ಅಂದು ಸ್ವಾಮೀಜಿಯ ಮನಸ್ಸಿನಲ್ಲಿ ನಡೆದ ದುಃಖ, ಗೊಂದಲ, ಕಳವಳ, ಸಂಶಯವನ್ನು ಅರ್ಥಮಾಡಿಕೊಂಡವರಲ್ಲಿ ಭಾರತೀಯರು ಅತಿ ವಿರಳ. ಪಾಶ್ಚಾತ್ಯರಲ್ಲಿ ಅನೇಕರು ಅರ್ಥಮಾಡಿಕೊಂಡರು. ಅವರಲ್ಲಿ ಮಿಸ್ ಮಾರ್ಗರೆಟ್ ಎಲಿಜಬೆತ್ ನೋಬಲ್ ಒಬ್ಬಳು. ಪಶ್ಚಿಮದಲ್ಲೇ ಹುಟ್ಟಿ, ಅಲ್ಲಿಯ ಸಂಸ್ಕೃತಿಯಲ್ಲಿ ಬೆಳೆದು, ಅಲ್ಲಿಯ ಧರ್ಮವನ್ನು ಅನುಸರಿಸಿದ ಮಿಸ್ ನೋಬಲ್ ಸ್ವಾಮಿ ವಿವೇಕಾನಂದರನ್ನು ಅರ್ಥಮಾಡಿಕೊಂಡಷ್ಟು ಇನ್ನು ಯಾರೂ ಮಾಡಿಕೊಂಡಿರಲಿಲ್ಲ, ಸ್ವಾಮೀಜಿಯ ಉಚ್ಚ ಆದರ್ಶ, ಹೃದಯ ವೈಶಾಲ್ಯತೆ, ಪ್ರೀತಿ, ನಿಸ್ವಾರ್ಥತೆಗಳಿಂದ ಕೂಡಿದ ವ್ಯಕ್ತಿತ್ವಕ್ಕೆ ಅವಳು ಆಕರ್ಷಿತಳಾಗಿ, ಅವರ ಮೂಲಕ ಭಾರತವನ್ನೂ, ಸನಾತನ ಧರ್ಮವನ್ನೂ ಅರಿತು ಅವರ ಶಿಷ್ಯಳಾದಳು. ಸ್ವಾಮೀಜಿಯ ಬಗ್ಗೆ ಅವಳಿಗಿದ್ದ ಅರಿವು ನಿಜವಾಗಿಯೂ ಉಳಿದವರೆಲ್ಲರಿಗಿಂತಲೂ ವಿಶೇಷತರವಾಗಿತ್ತು. **'ನಾ ಕಂಡಂತೆ ನನ್ನ ಗುರುದೇವ'** ಎಂಬ ಪುಸ್ತಕವನ್ನು ಬರೆದು ಅದರಲ್ಲಿ ಸ್ವಾಮೀಜಿಯ ಸಾನ್ನಿಧ್ಯದಲ್ಲಿ ತನಗಾದ ಎಲ್ಲಾ ಅನುಭವಗಳನ್ನು ದಾಖಲಿಸಿದ್ದಾಳೆ. ಇದರಲ್ಲಿ ಸ್ವಾಮೀಜಿಯ ವಿಶೇಷ ವ್ಯಕ್ತಿತ್ವವು ಇನ್ನೂ ಸ್ಫುಟವಾಗಿ ಪ್ರಕಾಶಿಸಿದೆ.

ಮಿಸ್ ಮಾರ್ಗರೆಟ್ ನೋಬಲ್ ಐರ್ಲೆಂಡ್‌ನ ಒಂದು ಸಾಧಾರಣ ಕುಟುಂಬದಲ್ಲಿ ಜನಿಸಿದಳು. ತಂದೆಯಿಂದ ಧರ್ಮದ ಬಗ್ಗೆ, ಸಮಾಜ ಸುಧಾರಣೆಯ ಬಗ್ಗೆ, ಪರೋಪಕಾರದ ಬಗ್ಗೆ ಚಿಕ್ಕಂದಿನಿಂದಲೇ ತಿಳಿಯತೊಡಗಿದಳು. ಆದರೆ ಚಿಕ್ಕಂದಿನಿಂದಲೇ ತಂದೆಯನ್ನು ಕಳೆದುಕೊಂಡಳು. ಶಿಕ್ಷಕಿಯಾಗಬೇಕೆಂಬುದು ಅವಳ ಇಚ್ಛೆಯಾಗಿತ್ತು. ಅದಕ್ಕಾಗಿ ವಿಶೇಷ ತರಹದ ತರಬೇತಿಯನ್ನು ಪಡೆದು, ಲಂಡನ್ನಿನಲ್ಲಿ ತಾನೇ ಒಂದು ಶಾಲೆಯನ್ನು ತೆರೆದು ಅದನ್ನು ನಡೆಸುತ್ತಾ ತಾಯಿಗೆ ಆರ್ಥಿಕವಾಗಿ ಬೆಂಬಲವಾಗಿ ನಿಂತಳು. ಲಂಡನ್ನಿನ ಅಂದಿನ ಸಮಾಜದ ಉನ್ನತ ವ್ಯಕ್ತಿಗಳೊಂದಿಗೆ ಅವಳಿಗೆ ನಿಕಟ ಸಂಪರ್ಕವಿತ್ತು. ಅತಿ ಬುದ್ಧಿವಂತಳೂ ಮೇಧಾವಿಯೂ ಆಗಿದ್ದುದರಿಂದ ಸಮಾಜದಲ್ಲಿ ಅವಳಿಗೆ ಉನ್ನತ ಸ್ಥಾನವೂ ಇತ್ತು. ಕ್ರೈಸ್ತಧರ್ಮವನ್ನು ಅನುಸರಿಸುತ್ತಾ ಯೇಸುಕ್ರಿಸ್ತನನ್ನು ಆಕೆ ಪ್ರೀತಿಸುತ್ತಿದ್ದಳು. ದಯೆ, ಪರೋಪಕಾರ ಇವುಗಳು ಧರ್ಮ. ಇದು ಭಗವಂತನನ್ನು ತುಷ್ಟಿಗೊಳಿಸುವುದು ಎಂದು ಅರಿತರೂ, ಧರ್ಮವೆಂದರೆ ಇನ್ನೂ ಏನೋ ಉನ್ನತವಾದ ಆದರ್ಶವಿದೆ ಎಂದು ತೋರಿ ಅವಳ ಹೃದಯ ಅದೇನೋ ಅತೃಪ್ತಿಯಿಂದ ಕೂಡಿ, ಅದನ್ನು ಅರಿಯಲು ಕಾತರವಾಗಿತ್ತು. ಆ ಸಮಯದಲ್ಲೇ ಸ್ವಾಮಿ ವಿವೇಕಾನಂದರು ಲಂಡನ್ನಿಗೆ ಹೋದಾಗ ಅವಳಿಗೆ ಅವರ ಪ್ರಥಮ ದರ್ಶನವಾಯಿತು. ಪ್ರಥಮವಾಗಿ ಸನಾತನ ಧರ್ಮದ ಬಗ್ಗೆ, ಆಧ್ಯಾತ್ಮಿಕತೆಯ ಬಗ್ಗೆ ಹೇಳುತ್ತಿದ್ದ ಅವರ ಮಾತುಗಳನ್ನು ಕೇಳುವಾಗ ಅವಳಿಗೆ ವಿಚಿತ್ರವೆನಿಸಿತು. ಆಮೇಲೆ ಅದರ ನಿಜವಾದ ತತ್ತ್ವವು ಅರ್ಥವಾಗಿ, ಅನುಭವ

ವಾದಾಗ ಆಶ್ಚರ್ಯಚಕಿತಳಾದಳು ಮತ್ತು ಕಾತರವಾಗಿದ್ದ ಅವಳ ಹೃದಯ ತಣಿಯಿತು.

ಸ್ವಾಮಿ ವಿವೇಕಾನಂದರೊಂದಿಗೆ ತನ್ನ ಪ್ರಥಮ ದರ್ಶನದ ಬಗ್ಗೆ ಜ್ಞಾಪಿಸುತ್ತಾ ಬರೆದಿದ್ದಾಳೆ, ''ಬೈಠಕ್‌ಖಾನೆಯಲ್ಲಿ ಅರ್ಧವೃತ್ತಾಕಾರವಾಗಿ ೧೫-೧೬ ಜನರು ಸ್ವಾಮೀಜಿಯ ಕಡೆ ಮುಖ ಮಾಡಿ ಕುಳಿತಿದ್ದರು. ಅವರ ಹಿಂಭಾಗ ಅಗ್ನ್ಯಾಗಾರದಲ್ಲಿ ಹಿತಕರವಾದ ಅಗ್ನಿಯು ಪ್ರಜ್ವಲಿಸುತ್ತಿತ್ತು. ಅವರು ಕಾವಿಬಣ್ಣದ ನಿಲುವಂಗಿಯನ್ನು ತೊಟ್ಟಿದ್ದರು. ಕಟಿಯನ್ನು ಸೊಂಟಪಟ್ಟಿಯಿಂದ ಬಿಗಿದಿದ್ದರು. ಅವರ ಮುಖದ ಪ್ರಶಾಂತತೆ, ಸೌಮ್ಯವಾದ ಕಣ್ಣುಗಳು, ಗಂಭೀರ ಧ್ವನಿ ಎಲ್ಲರನ್ನೂ ಮಂತ್ರಮುಗ್ಧರನ್ನಾಗಿಸಿತ್ತು. ಆಗಾಗ 'ಶಿವ ಶಿವ' ಎಂದು ಉದ್ಗರಿಸುತ್ತಿದ್ದರು.''

ಆಮೇಲೆ ಸ್ವಾಮೀಜಿಯ ಪ್ರವಚನಗಳು ಎಲ್ಲಿ ನಡೆದರೂ ಮಾರ್ಗರೆಟ್ ತಪ್ಪದೆ ಕೇಳಲು ಹೋಗುತ್ತಿದ್ದಳು. ಅದನ್ನು ಜ್ಞಾಪಿಸುತ್ತಾ ನಿವೇದಿತಾ ಬರೆದಿದ್ದಾಳೆ, ''ಆ ದಿನಗಳು ಅಸ್ಪಷ್ಟವಾಗಿ ಮಾತ್ರ ನೆನಪಿದೆ. ಶ್ರೋತೃಗಳ ಪ್ರಶ್ನೆಗಳ ಮೇಲೆ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ ಮಧ್ಯದಲ್ಲಿ ಆಗಾಗ ಉದಾಹರಣೆಗಾಗಿ ಸಂಸ್ಕೃತ ಗ್ರಂಥಗಳ ವ್ಯಾಖ್ಯಾನ ಮಾಡುತ್ತಾ, ಶ್ಲೋಕಗಳನ್ನು ಪಠಿಸುತ್ತಿದ್ದ ರೀತಿ ಎಂದಿಗೂ ಮರೆಯಲು ಸಾಧ್ಯವಿಲ್ಲ... ಅನ್ನಿಸುತ್ತಿತ್ತು, ಅತಿದೂರದ ದೇಶದಿಂದ ಅಲ್ಲಿಯ ವಾರ್ತೆಗಳನ್ನು ನಮಗಾಗಿ ತೆಗೆದುಕೊಂಡು ಬಂದಿರುವರೆಂದು...ಅವರು ಮೊದಲು ಹೇಳಿರುವುದು, 'ಕ್ರೈಸ್ತ ಧರ್ಮದಂತೆ ಹಿಂದೂಧರ್ಮವೆಂದರೆ ಅದರ ಅತ್ಯುನ್ನತ ಭಾವವು ಪ್ರೇಮ... ಭಗವಂತನು ಸರ್ವವ್ಯಾಪಿ.. ಎಲ್ಲಾ ಜೀವಿಗಳಲ್ಲೂ ನೆಲೆಸಿರುವನು. ಈ ಸತ್ಯದ ಸಾಕ್ಷಾತ್ಕಾರ ಎಲ್ಲರಿಂದಲೂ ಸಾಧ್ಯ...' ಇದನ್ನು ಪರೀಕ್ಷೆ ಮಾಡಿ ನೋಡಲು ನಮ್ಮೆಲ್ಲರನ್ನೂ ಆಹ್ವಾನಿಸಿದರು. ಇದಲ್ಲದೆ ಇನ್ನು ಯಾವ ಬೇರೆ ತತ್ತ್ವವನ್ನೂ ಅಥವಾ ಮತವನ್ನೂ ಅವರು ನಮಗೆ ಹೇಳಿಲ್ಲ.''

ಮೊದಮೊದಲು ಸ್ವಾಮೀಜಿಯವರ ಆಧ್ಯಾತ್ಮಿಕ ಉಪನ್ಯಾಸಗಳನ್ನು ಕೇಳುತ್ತಾ ಉತ್ಸಾಹಿತಳಾದರೂ ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗದೆ ಅತ್ಯಂತ ಮೇಧಾವಿಯೂ, ಬುದ್ಧಿವಂತಳೂ ಆಗಿದ್ದ ಮಾರ್ಗರೆಟ್ ತನ್ನದೇ ಆದ ಭಾವಗಳನ್ನು ಮುಂದಿಟ್ಟು ಅವರೊಂದಿಗೆ ವಾದಿಸುತ್ತಿದ್ದಳು. ಸ್ವಾಮೀಜಿ ಅತ್ಯಂತ ತಾಳ್ಮೆಯಿಂದ ಅವಳ ವಾದಗಳನ್ನು ಖಂಡಿಸುತ್ತಿದ್ದರು. ಅವಳಿಗೆ ಆಧ್ಯಾತ್ಮಿಕ ಸತ್ಯವನ್ನು ಅರಿಯುವಂತೆ ಮಾಡುತ್ತಿದ್ದರು. 'ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ಚಕ್ಷುರುನ್ಮೀಲಿತಂ ಯೇನ.....' ಇಂತಹ ಗುರುವನ್ನು ಸಮೀಪಿಸಿದ್ದರಿಂದ ಅವಳು ಪರಮಸತ್ಯವನ್ನು ಅರಿಯತೊಡಗಿದಳು. ಅವಳೇ ಬರೆದಿದ್ದಾಳೆ: ''ಸ್ವಾಮೀಜಿ ಸನಾತನ ಧರ್ಮವನ್ನು ವಿವರಿಸುತ್ತಾ ಅದರ ಮೂಲ ತತ್ತ್ವವಾದ ಆತ್ಮದ ಬಗ್ಗೆ ವಿವರಿಸಿ, ಈ ಶರೀರ ಮತ್ತು ಮನಸ್ಸು ಇದರ ಹಿಂದೆ ಆತ್ಮ ಎಂಬುದು ಇದೆ. ಅದರಿಂದಲೇ ಇವುಗಳು ಚಲಿಸುತ್ತಿರುವುದು ಎಂದು ಹೇಳಿದಾಗ ಅತ್ಯಂತವಾಗಿ ಆಶ್ಚರ್ಯಚಕಿತಳಾದೆ. ಆದರೆ ಅದರ ಅರಿವಾದಾಗ ಅಂದಿನಿಂದ ಜಗತ್ತನ್ನು ಹೊಸ ದೃಷ್ಟಿಯಿಂದ ನೋಡತೊಡಗಿದೆನು...ಅವರು ಹೇಳಿದರು, ಈ ಸತ್ಯವನ್ನು ಅರಿಯಲು ಕೆಲವು ಮೂಲಭೂತ ತತ್ತ್ವಗಳಿವೆ. ಅವು ಯಾವುವೆಂದರೆ, ಒಂದು ಈ ಜಗತ್ತಿನ ಮಾಯೆಯಿಂದ ಮುಕ್ತರಾಗುವುದು. ಇನ್ನೊಂದು ಬೇಕಾಗಿರುವುದು - 'ವೈರಾಗ್ಯ'...ನಿಜವಾಗಿಯೂ ಇದು ಪಾಶ್ಚಾತ್ಯರಿಗೆ ಅರ್ಥಮಾಡಿಕೊಳ್ಳಲು ಅಸಾಧ್ಯವಾದುದು. ಸ್ವಾಮೀಜಿ ಹೇಳಿದರು, ಧರ್ಮವೆಂದರೆ ಪ್ರತಿಯೊಬ್ಬನ ವ್ಯಕ್ತಿತ್ವದ ವಿಕಾಸ..''

ಸ್ವಾಮಿ ವಿವೇಕಾನಂದರು ಭಾರತದ ಇತಿಹಾಸ, ಪುರಾಣ, ಉಪನಿಷತ್, ವೇದಗಳನ್ನು ಅವರಿಗೆ ವಿವರಿಸಿ ಹೇಳುತ್ತಿದ್ದರು. ಹಿಂದೂಗಳ ಜನಜೀವನದ ಬಗ್ಗೆ, ಅವರ ಸತ್ಯಸಂಧತೆ, ತ್ಯಾಗ, ಧರ್ಮನಿಷ್ಠೆ ಅವರು ವಿವರಿಸುತ್ತಿದ್ದಾಗ ಕೆಲವು ವಿಷಯಗಳು ಅವಳಿಗೆ ಚಿಂತ್ಯಾತೀತವಾಗಿ ಗ್ರಹಿಸಲೂ ಅಸಾಧ್ಯವಾಗಿತ್ತು. ಆಮೇಲೆ ಬರೆದಿದ್ದಾಳೆ: ''ಭಾರತದ ಜನರ ಕೆಲವು ವಿಚಿತ್ರವಾದರೂ ಅತಿ ಗಂಭೀರವಾದ ಕೆಲವು ಭಾವಗಳನ್ನು ಸ್ವಾಮೀಜಿಯಿಂದ ಪ್ರಥಮವಾಗಿ ಕೇಳಿದಾಗ ನನಗೆ ಅರ್ಥವಾಗಿರಲಿಲ್ಲ. ನಾನು ನಿಜವಾಗಿಯೂ ಸ್ತಂಭಿತಳಾದೆ. ಆಮೇಲೆ ಅರ್ಥವಾದಾಗ ಅದೇನೋ ಒಂದು ಹೊಸದಾದ ಭಾವನೆಯನ್ನೇ ಗಳಿಸಿದಂತಾಯಿತು.'' ಸ್ವಾಮೀಜಿ ಹೇಳಿದ ಒಂದು ಕಥೆಯನ್ನು ಜ್ಞಾಪಿಸುತ್ತಾ ಬರೆದಿದ್ದಾಳೆ, ''ಒಬ್ಬ ಸಂನ್ಯಾಸಿಯ ಬಳಿ ಇದ್ದ ಪಾತ್ರೆಗಳನ್ನು ಕದಿಯಲು ಕಳ್ಳನು ಬಂದು ಕದಿಯುವಾಗ ಅದನ್ನು ಸಂನ್ಯಾಸಿಯು ಕಂಡನು. ಕಳ್ಳ ಹೆದರಿ ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ಓಡುತ್ತಿದ್ದರೆ, ಸಂನ್ಯಾಸಿ ಉಳಿದ ಪಾತ್ರೆಗಳನ್ನು ತೆಗೆದುಕೊಂಡು ಹೋಗಿ ಅವನ ಹಿಂದೆ ಹಿಡಿದು, 'ದಯವಿಟ್ಟು ಇವುಗಳನ್ನೂ ತೆಗೆದುಕೊ... ಇದೂ ನಿನ್ನದೇ ಆಗಿದೆ... ಹೇ ಭಗವಂತ, ನನ್ನನ್ನು ಕ್ಷಮಿಸು' ಎಂದು ಪ್ರಾರ್ಥಿಸಿದನು.'' ಇದನ್ನು ಕೇಳಿದಾಗ ಅವಳಿಗೆ ನಿಜವಾಗಿಯೂ ಆಶ್ಚರ್ಯವಾಯಿತು.

ಹೀಗೆ ಸ್ವಾಮೀಜಿಯ ಉಪನ್ಯಾಸಗಳಿಂದ, ಅವರ ಸಾನ್ನಿಧ್ಯದಿಂದ ಮಾರ್ಗರೆಟ್ ತಾನು ಏನೋ ಒಂದು ಹೊಸ ಜಗತ್ತಿಗೆ ಪ್ರವೇಶಿಸುತ್ತಿರುವಂತೆ ಅನುಭವಿಸಿದಳು. ಅಜ್ಞಾನವೇ ಜಗತ್ತಿನ ದುಃಖಕ್ಕೆ ಕಾರಣ. ಜಗತ್ತಿನ ಸ್ವಾರ್ಥವನ್ನು ನಿರ್ಮೂಲನ ಮಾಡಬೇಕು ಎಂದು ಸ್ವಾಮೀಜಿ ಹೇಳಿದರು. ಪ್ರೀತಿ ಮತ್ತು ನಿಃಸ್ವಾರ್ಥದಿಂದ ಕೂಡಿದ ಜನರು ಅದಕ್ಕಾಗಿ ಬೇಕೆಂದು ಸ್ವಾಮೀಜಿ ಆಗ್ರಹಿಸುತ್ತಿದ್ದಾರೆಂದು ಮಾರ್ಗರೆಟ್‌ಗೆ ತಿಳಿಯಿತು. ಭಗವಂತನಲ್ಲಿಟ್ಟ ನಂಬಿಕೆಯೇ ಸ್ವಾಮೀಜಿಯ ಆಯುಧವಾಗಿತ್ತು. ಒಂದುದಿನ ಉಪನ್ಯಾಸ ಕೊಡುತ್ತಿರುವಾಗ ಸ್ವಾಮೀಜಿ ಹೇಳಿದ್ದ ಮಾತುಗಳನ್ನು ಜ್ಞಾಪಿಸುತ್ತಾ ಮಾರ್ಗರೆಟ್ ಬರೆದಿದ್ದಾಳೆ: ''ಅವರು ಮಾತನಾಡುತ್ತಾ ಥಟ್ಟನೆ ಹೇಳಿದರು, 'ಇಂದು ಜಗತ್ತಿಗೆ ಬೇಕಾಗಿರುವುದು ಇಪ್ಪತ್ತು ಜನ ಸ್ತ್ರೀ ಮತ್ತು ಪುರುಷರು. ಅವರು ನಡುರಸ್ತೆಯಲ್ಲಿ ನಿಂತು, ''ನಮಗೆ ಭಗವಂತನೊಬ್ಬನನ್ನು ಬಿಟ್ಟು ಬೇರೇನೂ ಇಲ್ಲ..'' ಎಂದು ಧೈರ್ಯವಾಗಿ ಹೇಳುವಂಥವರು.' ಹೀಗೆ ಹೇಳಿ ಸ್ವಾಮೀಜಿ ಕುಳಿತಲ್ಲಿಂದ ಎದ್ದು ನಿಂತು ಗುಡುಗಿದರು,''ಯಾರು ತಯಾರಿದ್ದೀರಿ?''..

ಮುಂದೆ ಕುಳಿತವರನ್ನು ಸುತ್ತಲೂ ನೋಡುತ್ತಾ ತಮ್ಮ ಜೊತೆ ಸೇರಲು ಯಾರನ್ನೋ ಆಹ್ವಾನಿಸುತ್ತಿರುವಂತೆ ದೃಢ ಸ್ವರದಿಂದ ಗಂಭೀರವಾಗಿ ಹೇಳಿದ ಮಾತು ನನ್ನ ಕಿವಿಯಲ್ಲಿ ಈಗಲೂ ಮೊಳಗುತ್ತಿದೆ – 'ಭಗವಂತನು ಇದ್ದಾನೆ ಎಂಬುದು ಸತ್ಯವಾದರೆ ಜಗತ್ತಿನಲ್ಲಿ ಉಳಿದವುಗಳಿಂದ ಏನು ಪ್ರಯೋಜನ? ಒಂದು ವೇಳೆ ಇದು ಅಸತ್ಯವಾದರೆ ನಮ್ಮ ಜೀವನದ ಫಲವೇನು? ಯಾರು ನಿಃಸ್ವಾರ್ಥಿಗಳೋ, ಯಾರು ಜಗತ್ತನ್ನು ಪ್ರೀತಿಸುವರೋ ಅಂತಹವರು ಜಗತ್ತಿಗೆ ಬೇಕಾಗಿದ್ದಾರೆ.' ''

ಸ್ವಾಮೀಜಿಯ ಮಾತುಗಳನ್ನು ಕೇಳಿ ಮಾರ್ಗರೆಟ್ ಅವರು ಹೇಳಿದ ಆದರ್ಶಕ್ಕೆ ತನ್ನ ಜೀವನವನ್ನು ಮುಡಿಪಾಗಿಡಲು ನಿರ್ಧರಿಸಿದಳು. ಸ್ವಾಮೀಜಿಯೂ ಮಾರ್ಗರೆಟ್‌ಳ ಬುದ್ಧಿಶಕ್ತಿ, ಧೈರ್ಯ, ಪ್ರೀತಿ ಇವುಗಳನ್ನು ಕಂಡು ಭಾರತಕ್ಕೆ ಅವಳಿಂದ ಸಹಾಯವಾಗಬಹುದೆಂದುಕೊಂಡರು. ಹೀಗೆ ಒಂದುದಿನ ಭಾರತದ ಸ್ತ್ರೀಯರ ಮಹಿಮೆಯ ಬಗ್ಗೆ ಮಾತನಾಡುತ್ತಾ, ಆ ಸಮಯದಲ್ಲಿನ ಅವರ ಅವನತಿಯನ್ನು ವಿವರಿಸುತ್ತಾ, ''ನಮ್ಮ ದೇಶದ ಸ್ತ್ರೀಯರಿಗೆ ವಿದ್ಯಾಭ್ಯಾಸವನ್ನು ಕೊಡಬೇಕು. ಅವರಲ್ಲಿ ನಾನು ಉನ್ನತ ಭವಿಷ್ಯದ ಕನಸು ಕಾಣುತ್ತಿದ್ದೇನೆ. ನೀನು ನನಗೆ ಸಹಾಯಕಳಾಗಬಲ್ಲೆ'' ಎಂದರು. ಸ್ವಾಮೀಜಿಯ ಮಾತನ್ನು ಕೇಳಿ, ಮಾರ್ಗರೆಟ್ ಇದು ಗುರುವಿನ ಆದೇಶವೆಂದು ತಿಳಿದು, ಅದನ್ನು ನೆರವೇರಿಸಲು ತಾನು ಭಾರತಕ್ಕೆ ಹೋಗಲು ತೀರ್ಮಾನಿಸಿದಳು. ಸ್ವಾಮೀಜಿ ಅವಳನ್ನು ಆಹ್ವಾನಿಸಿದ್ದರೂ ಪಾಶ್ಚಾತ್ಯ ದೇಶದ ಸುಖದಲ್ಲಿ ಬೆಳೆದ ಅವಳು ಭಾರತದಲ್ಲಿ ಹೇಗೆ ನೆಲೆಸಬಲ್ಲಳೆಂಬುದು ಅವರಿಗೆ ಚಿಂತೆಯಾಗಿತ್ತು. ಉಷ್ಣ ಹವಮಾನ, ಭಾರತೀಯರು ಮ್ಲೇಚ್ಛರನ್ನು ಕಾಣುತ್ತಿದ್ದ ಕೀಳು ದೃಷ್ಟಿ, ಸಮಾಜದ ರೀತಿನೀತಿಗಳು ಇತ್ಯಾದಿ. ಇದನ್ನೆಲ್ಲಾ ಮಾರ್ಗರೆಟ್ ಗೆ ತಿಳಿಸಿದರೂ, ತನ್ನ ಗುರುವಿನ ಪ್ರೀತಿಯ ಭಾರತಕ್ಕೆ ಸೇವೆ ಸಲ್ಲಿಸಲು ಆಕೆ ತಯಾರಾದಳು. ಅಂತೆಯೇ ೧೮೯೮ ಜನವರಿ ೨೮ ರಂದು ಮಾರ್ಗರೆಟ್ ಭಾರತಕ್ಕೆ ಬಂದು ತಲುಪಿದಳು. ಸ್ವಾಮೀಜಿ ಅವಳನ್ನು ಕೊಲ್ಕತ್ತದಲ್ಲಿ ಸ್ವಾಗತಿಸಲು ಹಡಗು ನಿಲ್ದಾಣಕ್ಕೆ ಹೋದರು. ಸ್ವಾಮೀಜಿಯೊಂದಿಗೆ ಎಲ್ಲೆಡೆ ಸುತ್ತಾಡಿ ನೋಡಿ, ಸ್ವಾಮೀಜಿಯಿಂದ ಕೇಳಿದ್ದ ಹಿಂದಿನ ಭವ್ಯಭಾರತದ ವಿವರಣೆ, ತಾನು ಕಾಣುತ್ತಿರುವ ಅಲ್ಲಿಯ ಪರಿಸ್ಥಿತಿಯನ್ನು ಕಂಡು, ಸ್ವಾಮೀಜಿಯ ಮನಸ್ಸಿನ ದುಃಖವನ್ನು ಇನ್ನೂ ಅರ್ಥಮಾಡಿಕೊಂಡಳು.

ಅದಾಗಲೇ ಸ್ವಾಮೀಜಿಯಿಂದ ರಾಮಕೃಷ್ಣ ಮಠವು ಸ್ಥಾಪಿತವಾಗಿತ್ತು. ಸ್ವಾಮೀಜಿ ಕೊಲ್ಕತ್ತದಲ್ಲಿ ಒಂದು ಸಾರ್ವಜನಿಕ ಸಭೆಯನ್ನು ಕರೆದು ಜನರಿಗೆ ಅವಳನ್ನು ಹೀಗೆಂದು ಪರಿಚಯ ಮಾಡಿಕೊಟ್ಟರು. ''ನಮ್ಮ ಧ್ಯೇಯೋದ್ದೇಶಗಳನ್ನು ಕಾರ್ಯಗತಗೊಳಿಸಲು ಇಂಗ್ಲೆಂಡ್ ನೀಡಿದ ಕೆಲವು ಶ್ರೇಷ್ಠ ಮೇಧಾವಿಗಳಲ್ಲಿ ಮಿಸ್ ಮಾರ್ಗರೆಟ್ ಎಲಿಜಬೆತ್ ನೋಬಲ್ ಒಬ್ಬಳು'' ಎಂದು. 'ಇಂಗ್ಲೆಂಡ್‌ನಲ್ಲಿ ಭಾರತದ ಆಧ್ಯಾತ್ಮಿಕ ಚಿಂತನೆಯ ಪ್ರಭಾವ' ಎಂಬ ವಿಷಯದ ಬಗ್ಗೆ ಮಾತನಾಡಿ ಮಾರ್ಗರೆಟ್ ತನ್ನ ವಾಕ್ಪಟುತ್ವದಿಂದ ಎಲ್ಲರ ಹೃದಯವನ್ನು ಸ್ಪರ್ಶಿಸಿದಳು.



ಸ್ವಾಮೀಜಿಯವರೊಂದಿಗೆ ತೀರ್ಥಯಾತ್ರೆ

ಶ್ರೀರಾಮಕೃಷ್ಣ ಸಂಘವು ಸ್ಥಾಪಿತವಾಗಿ ಶ್ರೀರಾಮಕೃಷ್ಣರ ಲೀಲಾಸಂಗಿನಿ ಶ್ರೀಶಾರದಾದೇವಿಯವರು ಸಂನ್ಯಾಸಿವೃಂದಕ್ಕೂ, ಭಕ್ತವೃಂದಕ್ಕೂ ಗುರುವೂ, ಮಾತೆಯೂ ಆಗಿ ರಾಮಕೃಷ್ಣರ ಅವತಾರ ಉದ್ದೇಶವನ್ನು ನೆರವೇರಿಸುತ್ತಿದ್ದರು. ಸ್ವಾಮೀಜಿ ಮಾರ್ಗರೆಟ್ ಮತ್ತು ಇನ್ನಿಬ್ಬರು ಪಾಶ್ಚಾತ್ಯ ಮಹಿಳೆಯರನ್ನು ಪ್ರಥಮವಾಗಿ ಶ್ರೀಮಾತೆಯ ದರ್ಶನ ಮಾಡಲು ಕಳುಹಿಸಿದರು. ಸಾಕ್ಷಾತ್ ಜಗಜ್ಜನನಿಯಾದ ಮಾತೆ ಯಾವುದೇ ಪಕ್ಷಪಾತವಿಲ್ಲದೆ ಅವರನ್ನು ತನ್ನ ಮಕ್ಕಳೇ ಎಂಬಂತೆ ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಅಂದಿನಿಂದ ಮಾರ್ಗರೆಟ್ ಅವರ ಸ್ನೇಹದ ಪುತ್ರಿಯಾದಳು. ಯಾವಾಗ ಮಾತೆ ಈ ಪಾಶ್ಚಾತ್ಯ ಮಹಿಳೆಯರನ್ನು ಸ್ವೀಕರಿಸಿದರೋ ಸಂಪೂರ್ಣ ಭಾರತವೇ ಅವರನ್ನು ಸ್ವೀಕರಿಸಿದಂತಾಯಿತು ಎಂದುಕೊಂಡು ಸ್ವಾಮೀಜಿ ನಿಶ್ಚಿಂತರಾದರು. ಭಾರತಕ್ಕಾಗಿ ಜೀವನವನ್ನು ಅರ್ಪಿಸಲು ಬಂದ ಮಾರ್ಗರೆಟ್‌ಗೆ ಒಂದುದಿನ ಬ್ರಹ್ಮಚರ್ಯ ದೀಕ್ಷೆಯನ್ನು ನೀಡಿ, 'ನಿವೇದಿತಾ' ಎಂಬ ಹೆಸರನ್ನು ಕೊಟ್ಟರು. ಭಾರತಕ್ಕೆ ಸಮರ್ಪಿತಳಾದ ನಿವೇದಿತಾ ಅಂದಿನಿಂದ ತನ್ನ ಉದ್ದೇಶದಲ್ಲಿ ತತ್ಪರಳಾದಳು.

ಸ್ವಾಮೀಜಿಯ ಜೊತೆಯಲ್ಲಿ ನಿವೇದಿತಾ ತೀರ್ಥಯಾತ್ರೆಯನ್ನು ಕೈಗೊಂಡು ಅನೇಕ ಸ್ಥಳಗಳನ್ನು ಸಂದರ್ಶಿಸಿದಳು. ಈ ತೀರ್ಥಯಾತ್ರೆಯ ಸಮಯದಲ್ಲಿ ಸ್ವಾಮೀಜಿಯ ಅನೇಕ ಆಧ್ಯಾತ್ಮಿಕ ದಿವ್ಯ ಭಾವಗಳನ್ನು ಕಾಣುವ ಭಾಗ್ಯ ಅವಳದಾಯತು. ಈ ತೀರ್ಥಯಾತ್ರೆಯಿಂದ ತನಗಾದ ಅನುಭವವನ್ನು ಹೀಗೆಂದು ಬರೆದಿದ್ದಾಳೆ: ''ಕೆಲವು ತಿಂಗಳಿಂದ ಪರಮಶ್ರೇಷ್ಠ ಧಾರ್ಮಿಕ ಆದರ್ಶದ ಸೂರ್ಯ ಪ್ರಕಾಶದಲ್ಲಿ ಉಸಿರಾಡುತ್ತಿದ್ದೇನೆ ಮತ್ತು ಮನುಷ್ಯರಿಗಿಂತ ಭಗವಂತನೇ ಸತ್ಯ ಎಂದೆನಿಸಿದೆ.''

ತೀರ್ಥಯಾತ್ರೆಯಿಂದ ಮರಳಿ ಬಂದು ಮೊದಲೇ ಸ್ವಾಮೀಜಿಯಿಂದ ತಿಳಿದ ಭಾರತದ ಇತಿಹಾಸ, ಭೂಗೋಳ, ಸಂಗೀತ, ಸಾಹಿತ್ಯ, ಕಲೆ ಇವುಗಳ ಬಗ್ಗೆ ಇನ್ನೂ ತಿಳಿಯತೊಡಗಿದಳು. ಆಧ್ಯಾತ್ಮಿಕ ಜೀವನದ ಶಿಸ್ತು ಮತ್ತು ಆದರ್ಶ ಇವುಗಳನ್ನು ತಿಳಿದು ತಾನೂ

ಅವುಗಳನ್ನು ಪಾಲಿಸತೊಡಗಿದಳು. ರಾಮಕೃಷ್ಣ ಸಂಘದ ಆದರ್ಶವಾದ ''ತನ್ನ ಸ್ವಂತದ ಮುಕ್ತಿ ಮತ್ತು ಜಗತ್ತಿನ ಹಿತ''ವನ್ನು ತನ್ನ ಜೀವನದಲ್ಲೂ ಕಾರ್ಯಗತಗೊಳಿಸತೊಡಗಿದಳು. ಶಿಷ್ಯೆಯರೊಂದಿಗೆ ವಾಸಿಸುತ್ತಿದ್ದ ಶ್ರೀಮಾತೆಯವರ ಗೃಹದಲ್ಲೇ ವಾಸಿಸಲು ನಿವೇದಿತಾಳಿಗೆ ಅವಕಾಶ ಸಿಕ್ಕಿತು. ಹಿಂದೂ ಗೃಹಸ್ಥರ ಮನೆಯಲ್ಲಿನ ಆಚರಣೆಗಳನ್ನು, ಅಲ್ಲಿಯ ಶಿಸ್ತು ನಿಯಮಗಳಿಗೆ ತನ್ನನ್ನು ಒಗ್ಗಿಸಿಕೊಂಡು ಎಲ್ಲವನ್ನೂ ಕಲಿಯತೊಡಗಿದಳು. ಹೀಗೆ ಭಾರತದಲ್ಲಿ ಕೆಲಸ ಮಾಡಲು, ತಾನು ಮೊದಲು ಭಾರತೀಯಳಾಗಲು ತನಗೆ ತರಬೇತಿ ಮಾಡಿಕೊಂಡಳು.

ಭಾರತದ ಸ್ತ್ರೀಯರ ವಿದ್ಯಾಭ್ಯಾಸ – ಇದುವೇ ಸ್ವಾಮೀಜಿಯವರ ಧ್ಯೇಯವಾಗಿತ್ತು. ತನ್ನದೇ ಆದ ರೀತಿಯಲ್ಲಿ ಶಾಲೆಯನ್ನು ತೆರೆಯಲು ಸ್ವಾಮೀಜಿ ಅವಳಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಿದರು. ಒಂದು ಚಿಕ್ಕಮನೆಯನ್ನು ಬಾಡಿಗೆಗೆ ತೆಗೆದುಕೊಂಡು ನಿವೇದಿತಾ ಬಾಲಕಿಯರಿಗಾಗಿ ಒಂದು ಶಾಲೆಯನ್ನು ತೆರೆದಳು. ಶ್ರೀಮಾತೆಯವರೇ ಶಾಲೆಯನ್ನು ಉದ್ಘಾಟಿಸಿ, ''ಜಗನ್ಮಾತೆಯ ಆಶೀರ್ವಾದ ಈ ಶಾಲೆಯ ಮೇಲಿರಲಿ ಮತ್ತು ಈ ಶಾಲೆಯಿಂದ ಶಿಕ್ಷಣವನ್ನು ಪಡೆದ ಎಲ್ಲಾ ಬಾಲಕಿಯರು ಆದರ್ಶ ಮಹಿಳೆಯರಾಗಲಿ'' ಎಂದು ಆಶೀರ್ವದಿಸಿದರು. ಶ್ರೀಮಾತೆಯವರ, ಸ್ವಾಮಿ ವಿವೇಕಾನಂದರ, ರಾಮಕೃಷ್ಣ ಸಂಘದ ಸಂನ್ಯಾಸಿಯರ ಪೂರ್ಣ ಬೆಂಬಲದೊಂದಿಗೆ ಅತ್ಯಂತ ಉತ್ಸಾಹಿತಳಾಗಿ ನಿವೇದಿತಾ ಶಾಲೆಯನ್ನು ನಡೆಸತೊಡಗಿದಳು. ಮನೆಯವರು ಹೆಣ್ಣುಮಕ್ಕಳನ್ನು ಮನೆಯಿಂದ ಹೊರಗೆ ಕಳುಹಿಸದಿರುವ ಸಮಯ ಅದಾಗಿತ್ತು. ಮನೆಮನೆಗೆ ಹೋಗಿ ಹೆತ್ತವರಲ್ಲಿ ಬಾಲಕಿಯರನ್ನು ಶಾಲೆಗೆ ಕಳುಹಿಸಲು ನಿವೇದಿತಾ ಪ್ರಾರ್ಥಿಸತೊಡಗಿದಳು. ತಾನೇ ಮನೆಮನೆಗೆ ಹೋಗಿ ಬಾಲಕಿಯರನ್ನು ಕರೆದುಕೊಂಡು ಬರತೊಡಗಿದಳು. ಬಾಲಕಿಯರಿಗೆ ಓದಲು, ಬರೆಯಲು ಮಾತ್ರವಲ್ಲ ಕಸೂತಿ, ಬಣ್ಣಹಚ್ಚುವುದು, ಬೊಂಬೆಗಳನ್ನು ತಯಾರಿಸುವುದು ಇತ್ಯಾದಿಗಳನ್ನು ಕಲಿಸಿ ಅವರನ್ನು ಆಕರ್ಷಿಸಿದಳು. ಆಗಿನ ಸಮಾಜವು ಅವಳಿಗೆ ಬೆಂಬಲ ಕೊಡದೆ ವಿರೋಧದಿಂದಿದ್ದರೂ, ಸ್ವಾಮೀಜಿಯ ಬೆಂಬಲದಿಂದ ತನ್ನ ಕಾರ್ಯವನ್ನು ಆಕೆ ಮುಂದುವರಿಸಿದಳು. ಬಾಲಕಿಯರಂತೂ ಅವಳತ್ತ ಆಕರ್ಷಿತರಾಗಿ, 'ಸೋದರಿಯ ಶಾಲೆ' ಎಂದು ಕರೆದು ಅವಳನ್ನು ಪ್ರೀತಿಸತೊಡಗಿದರು. ಕೋಲ್ಕತ್ತ ನಗರದಲ್ಲಿ ಪ್ಲೇಗ್ ಮಹಾಮಾರಿ ಉಂಟಾದಾಗ ರೋಗಿಗಳ ಸೇವೆಗಾಗಿ, ಎಲ್ಲಾ ಕಡೆಗಳಲ್ಲಿ ಸ್ವಚ್ಛ ಮಾಡುವುದಕ್ಕಾಗಿ ನಿವೇದಿತಾ ತಾನೇ ಹೊರಟಾಗ ಅಲ್ಲಿಯ ಯುವಕರು ತಾವೂ ಅವಳ ಜೊತೆ ಸೇರಿ ಸಹಾಯ ಮಾಡಿದರು. ಹೀಗೆ ಅವಳು ಸಮಾಜದ ಜನರೊಂದಿಗೆ ಬೆರೆತು ಒಂದಾಗಿ ಅವರ ಕಷ್ಟ, ಸುಖಗಳಲ್ಲಿ ಪಾಲ್ಗೊಳ್ಳುತ್ತಿದ್ದುದರಿಂದ ಯಾರಿಗೂ ಅವಳು ಪರದೇಶದವಳೆಂದು ಅನ್ನಿಸಲಿಲ್ಲ. ಅವಳಾದರೋ ಭಾರತವನ್ನು 'ನನ್ನ ದೇಶ' ಹಾಗೂ ಭಾರತೀಯರನ್ನು 'ನನ್ನ ಜನರು' ಎಂದೇ ಸಂಬೋಧಿಸುತ್ತಿದ್ದಳು. ನಿವೇದಿತೆಯ ದೇಶಪ್ರೇಮ ಅವಳಿಗೆ ಸ್ವಾಮೀಜಿಯಿಂದ ಲಭಿಸಿದ ಬಳುವಳಿ. ದೇಶ, ಕಾಲಗಳಿಗೆ ಅತೀತನಾದವನೇ ಸಂನ್ಯಾಸಿ.. ಆದರೆ ದೇಶಕ್ಕಾಗಿ ಕಾತರಿಸುತ್ತಿದ್ದ ಸ್ವಾಮೀಜಿಯನ್ನು ಕಂಡು ಅವಳು ಬರೆದಿದ್ದಾಳೆ, ''ನನ್ನ ಗುರುಗಳ ಸ್ವಭಾವದಲ್ಲಿ ಒಂದು ವಿಷಯ ಆಳವಾಗಿ ಬೇರೂರಿತ್ತು. ಅದೇನೆಂದರೆ ಅವರ ತಾಯ್ನಾಡ ಪ್ರೇಮ. ಅವಳ ಯಾತನೆಯಿಂದ ಅವರಿಗಾಗುತ್ತಿದ್ದ ಅಸಮಾಧಾನ ಇದರೊಂದಿಗೆ ತಾನು ಹೇಗೆ ಹೊಂದಿಸಿಕೊಂಡು ಹೋಗುವುದೆಂದು ಸ್ವತ: ಅವರಿಗೇ ತಿಳಿಯುತ್ತಿರಲಿಲ್ಲ... ಭಾರತಾಂಬೆಯೇ ಅವರ ಆರಾಧ್ಯ ದೇವತೆ..''

ಶಾಲೆಗೆ ಆರ್ಥಿಕವಾಗಿ ಸಹಾಯವನ್ನು ಪಡೆಯಲು ನಿವೇದಿತಾ ಮತ್ತೆ ಪಾಶ್ಚಾತ್ಯ ದೇಶಗಳಿಗೆ ಹೋದಳು. ಈ ಸಮುದ್ರ ಪ್ರಯಾಣ ಸ್ವಾಮೀಜಿಯವರೊಂದಿಗಿತ್ತು. ಇದರಿಂದ ಅವಳಿಗೆ ಇನ್ನೂ ಅವರಿಂದ ಜ್ಞಾನಾರ್ಜನೆ ಪಡೆಯುವ ಅವಕಾಶ ಸಿಕ್ಕಿತು. ಇದು ತೀರ್ಥಯಾತ್ರೆ ಅಲ್ಲದಿದ್ದರೂ ಅವಳು ಬರೆದಿದ್ದಾಳೆ ''ಗುರುವಿನೊಡನೆ ಸುಮ್ಮನೆ ಜಗತ್ತನ್ನು ಸುತ್ತಿದರೂ ಅದು ತೀರ್ಥಯಾತ್ರೆ ಆಗುವುದು'' ಎಂದು. ಅನೇಕ ಪಾಶ್ಚಾತ್ಯದೇಶಗಳಿಗೆ ಹೋಗಿ ಶಾಲೆಗಾಗಿ ಚಂದಾ ಎತ್ತಲು ಶುರುಮಾಡಿ, ಜೊತೆಯಲ್ಲಿ ಅಲ್ಲಿಯ ಜನರಿಗೆ ಭಾರತದ ಬಗ್ಗೆ, ಅಲ್ಲಿಯ ಜನರ ಪರಿಶುದ್ಧ ಜೀವನದ ಬಗ್ಗೆ ವಿವರಿಸಿ ಭಾಷಣಗಳನ್ನು ಮಾಡಿದಳು. ಭಾರತದ ಬಗ್ಗೆ ಇರುವ ಅವಳ ಜ್ಞಾನವನ್ನು ಅಲ್ಲಿಯ ಜನರು ಹೊಗಳಿದರೂ ಟೀಕೆ, ಪ್ರತಿಭಟನೆಗಳನ್ನೂ ಅವಳು ಎದುರಿಸಬೇಕಾಯಿತು. ಆಗ ಸ್ವಾಮೀಜಿಯೇ ಅವಳಿಗೆ ಧೈರ್ಯವನ್ನು ತುಂಬುತ್ತಾ ''ಸ್ವಲ್ಪವೂ ನಿರಾಶಳಾಗಬೇಡ. ನಮ್ಮ ಗುರಿ ಸದುದ್ದೇಶಕ್ಕಾಗಿ ಸಾಯುವುದು. ಸಫಲತೆಗಾಗಿ ಅಲ್ಲ'' ಎಂದು ಅವಳಿಗೆ ಪತ್ರವನ್ನು ಬರೆದರು. ಭಾರತಕ್ಕೆ ಹಿಂತಿರುಗಿ ಮತ್ತೆ ಶಾಲೆಯನ್ನು ನಡೆಸುವುದರಲ್ಲಿ ತತ್ಪರಳಾದಳು. ಅವಳ ಭಾರತದ ಸೇವಾ ಕಾರ್ಯವನ್ನು ಕಂಡು ತೃಪ್ತರಾದ ಸ್ವಾಮೀಜಿ, ''ಸರ್ವಶಕ್ತಿಗಳೂ ನಿನಗೆ ಬರಲಿ... ಸ್ವಯಂ ಜಗನ್ಮಾತೆಯೇ ಆ ಶಕ್ತಿಯನ್ನೂ, ಅನಂತ ಶಾಂತಿಯನ್ನೂ ಕರುಣಿಸಲೆಂದು ನಾನು ನಿನಗಾಗಿ ಪ್ರಾರ್ಥಿಸುವೆ'' ಎಂದು ಆಶೀರ್ವದಿಸಿದರು. ಸ್ವಾಮಿ ವಿವೇಕಾನಂದರು ನಿವೇದಿತಳಿಗೆ



ನಿವೇದಿತಾ ಬಾಲಕಿಯರ ಶಾಲೆ

ಎಲ್ಲಾ ತರಹದ ಉತ್ಸಾಹ, ಬೆಂಬಲ, ಆಶೀರ್ವಾದಗಳನ್ನು ನೀಡಿ ಇಹಲೋಕವನ್ನು ತ್ಯಜಿಸಿದರು. ಅವರ ಮಹಾಸಮಾಧಿಗೆ ಎರಡು ದಿನಗಳ ಹಿಂದೆ ನಿವೇದಿತಾ ಅವರ ದರ್ಶನಕ್ಕಾಗಿ ಹೋಗಿದ್ದಳು. ಅಂದು ಸ್ವಾಮೀಜಿ ನಿವೇದಿತೆಯನ್ನು ಪಕ್ಕದಲ್ಲೇ ಕುಳ್ಳಿರಿಸಿ ಊಟ ಬಡಿಸಿದರು. ಊಟದ ಬಳಿಕ ಅವಳಿಗೆ ಕೈ ತೊಳೆಯಲು ತಾವೇ ನೀರೆರೆದು ಆಮೇಲೆ ವಸ್ತ್ರದಿಂದ ಕೈ ಒರೆಸಿದರು. ಅವಳು ಸಂಕೋಚ ಗೊಂಡು ತಡೆದು, ''ಸ್ವಾಮೀಜಿ, ಇದು ನಾನೇ ನಿಮಗೆ ಮಾಡ ಬೇಕಾಗಿರುವುದು.. ನೀವು ನನಗೆ ಮಾಡುವುದಲ್ಲ'' ಎಂದು ಹೇಳಿದಾಗ ಸ್ವಾಮೀಜಿ ಗಂಭೀರವಾಗಿ ''ಏಸುಕ್ರಿಸ್ತನು ತನ್ನ ಶಿಷ್ಯರ ಪಾದವನ್ನು ತೊಳೆದಿದ್ದನು'' ಎಂದರು. ಆಗ ಆಕೆ ಮನಸ್ಸಿನಲ್ಲೇ ಅಂದುಕೊಂಡಳು, ಅದು ಏಸುವಿನ ಕೊನೆಗಾಲದಲ್ಲಿ ಆಗಿತ್ತೆಂದು. ಅಂದು ಸ್ವಾಮೀಜಿ ಅವಳ ಮೇಲೆ ಆಶೀರ್ವಾದದ ಸುರಿಮಳೆಯನ್ನೇ ವರ್ಷಿಸಿದರು. ಅತ್ಯಾನಂದದಿಂದಲೇ ಆಕೆ ಮನೆಗೆ ಹಿಂದಿರುಗಿದಳು. ಆದರೆ ಅವಳಿಗೆ ಅಂದು ಅರಿವಾಗಲಿಲ್ಲ , ತನ್ನ ಗುರು ತನ್ನನ್ನು ಕೊನೆಯದಾಗಿ ಬೀಳ್ಕೊಂಡಿದ್ದರೆಂದು. ಗುರುವಿನ ಅಗಲಿಕೆ ಅವಳಿಗೆ ದೊಡ್ಡ ಆಘಾತವನ್ನುಂಟುಮಾಡಿದರೂ ಅವರಿಂದಲೇ ಭಾರತಕ್ಕಾಗಿ ಸಮರ್ಪಿತಳಾಗಿದ್ದ ನಿವೇದಿತಾ ಅವರ ಪ್ರೀತಿಯ ಭಾರತದ ಸೇವೆಯನ್ನು ಮುಂದುವರಿಸಿದಳು. ಅದಕ್ಕಾಗಿ ಸ್ವಾಮೀಜಿ ಸದಾ ಜೊತೆಯಲ್ಲೇ ಇರುವರೆಂದು ಆಕೆ ಅನುಭವಿಸಿದಳು. ಶಾಲೆಯ ಕೆಲಸಕ್ಕೆ ಸಹಾಯ ಮಾಡಲು ಸ್ವಾಮೀಜಿಯ ಇನ್ನೊಬ್ಬ ಪಾಶ್ಚಾತ್ಯ ಶಿಷ್ಯೆ ಕ್ರಿಸ್ಟೀನ್ ಅವಳೊಡನೆ ಸೇರಿದಳು.

ಭಾರತಕ್ಕೆ ತಾನು ಏನು ಮಾಡಿದರೆ ಒಳಿತಾಗುವುದೆಂಬುದೇ ನಿವೇದಿತಾಳ ಚಿಂತೆಯಾಗಿತ್ತು. ಅದಕ್ಕಾಗಿ ಬ್ರಿಟಿಷ್ ಆಳ್ವಿಕೆಯಲ್ಲಿದ್ದ ಭಾರತದ ಸ್ವಾತಂತ್ರ್ಯಕ್ಕಾಗಿಯೂ ಅವಳು ಅನೇಕ ರೀತಿಯಲ್ಲಿ ದುಡಿದಳು. ಎಲ್ಲಾ ರಾಷ್ಟ್ರೀಯ ವ್ಯಕ್ತಿಗಳನ್ನು ಸಂದರ್ಶಿಸಿದಳು. ಬ್ರಿಟಿಷ್ ಸರಕಾರ ಅವಳ ಮೇಲೆ ಕೋಪಿಸಿದರೂ ಆಕೆ ದಿಟ್ಟತನದಿಂದ ಅದನ್ನು ಎದುರಿಸಿ , ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಸಿದಳು.

ಭಾರತಮಾತೆ ಅವಳ ಆರಾಧ್ಯ ದೇವತೆ. ಭಾರತದ ಪುನರುತ್ಥಾನವೇ ಅವಳ ಮಹೋನ್ನತ ಕನಸು ಆಗಿತ್ತು. ''ನಿಮ್ಮ ಸ್ವಂತ ಆದರ್ಶ ಮತ್ತು ಅಭ್ಯಾಸಗಳನ್ನು ಬಿಟ್ಟುಕೊಡದಿರಿ. ಪಾಶ್ಚಾತ್ಯರಿಂದ ಪ್ರಭಾವಿತರಾಗಿ ನಿಮ್ಮ ಗೌರವವನ್ನು ಕಳೆದುಕೊಳ್ಳಬೇಡಿ'' ಎಂಬುದು ಭಾರತೀಯರಿಗೆ ಅವಳ ಸಂದೇಶವಾಗಿತ್ತು. ಹೀಗೆ ಭಾರತಕ್ಕಾಗಿ ತನ್ನ ಜೀವನದ ಹದಿನಾಲ್ಕು ವರ್ಷಗಳನ್ನು ಆಕೆ ಮುಡಿಪಾಗಿಟ್ಟು, ತನ್ನ ಕೊನೆಯ ದಿನಗಳನ್ನು ಡಾರ್ಜಿಲಿಂಗ್‌ನಲ್ಲಿ ಕಳೆದಳು, ಅಲ್ಲೇ ಇಹ ಲೋಕ ತ್ಯಜಿಸಿದಳು. ಸ್ವಾಮಿ ವಿವೇಕಾನಂದರ ಪ್ರಿಯ ಶಿಷ್ಯೆಯಾದ ಸೋದರಿ ನಿವೇದಿತಾಳ ೧೫೦ನೇ ಈ ಜನ್ಮವಾರ್ಷಿಕದಲ್ಲಿ ಸಂಪೂರ್ಣ ಭಾರತವೇ ಅವಳನ್ನು ಸ್ಮರಿಸಿ ಅವಳಿಗೆ ಶ್ರದ್ಧಾಂಜಲಿ ನೀಡುತ್ತಿದೆ. ❖

# ರಾಮಕೃಷ್ಣ ಮಹಾಸಂಘ ಹಾಗೂ ಸೋದರಿ ನಿವೇದಿತಾ

ಸ್ವಾಮಿ ಕರುಣಾಕರಾನಂದ






ಶ್ರೀಮಾತೆ, ಸ್ವಾಮೀಜಿ ಹಾಗೂ ಇತರ ನೇರ ಶಿಷ್ಯರೊಡನೆ ನಿಕಟ ಸಂಪರ್ಕ ಹೊಂದಿದ್ದ ನಿವೇದಿತಾ, ರಾಮಕೃಷ್ಣ ಮಹಾಸಂಘದ ಸ್ಥಾಪನೆ, ಬೆಳವಣಿಗೆಯ ಹಂತಗಳಲ್ಲಿ ಮಹತ್ವದ ಪಾತ್ರ ವಹಿಸಿದ್ದಳು. ಅವಳ ಜೀವನದ ವಿವಿಧ ಮಜಲುಗಳಲ್ಲಿ ರಾಮಕೃಷ್ಣ–ವಿವೇಕಾನಂದರ ವಿಚಾರಧಾರೆ ಅತಿಪ್ರಮುಖವಾದ ಒಂದು ಅಂಗವಾಗಿತ್ತು ಎಂಬುದನ್ನು ಇಲ್ಲಿ ವಿಶ್ಲೇಷಿಸಿರುವ ಲೇಖಕರು ದೇವಘರ್ ರಾಮಕೃಷ್ಣ ಮಿಷನ್ ವಿದ್ಯಾಪೀಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಉತ್ತಮ ಬರಹಗಾರರೂ, ವಾಗ್ಮಿಗಳೂ ಆಗಿರುವ ಅವರು **'ವಿವೇಕಪ್ರಭ'** ದಲ್ಲಿ ಅನೇಕ ಲೇಖನಗಳನ್ನು ಬರೆದಿದ್ದಾರೆ.

**'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಎಂಬ ಧ್ಯೇಯವಾಕ್ಯವನ್ನು ಹೊತ್ತ ರಾಮಕೃಷ್ಣ ಮಹಾಸಂಘವು ಸ್ಥಾಪನೆಗೊಂಡದ್ದು ೧ನೇ ಮೇ, ೧೮೯೭ರಂದು. ನಿವೇದಿತಾ ಕೊಲ್ಕತ್ತಕ್ಕೆ ಬಂದದ್ದು ೧೮೯೮ ಜನವರಿ ೨೮ರಂದು. ಅದಕ್ಕೂ ಮೊದಲೇ, ಅಂದರೆ ಆಕೆ ಲಂಡನ್‌ನಲ್ಲಿರುವಾಗಲೇ ಮಹಾಸಂಘದ ಪ್ರಥಮ ಪರಮಾಧ್ಯಕ್ಷರಾದ ಸ್ವಾಮಿ ಬ್ರಹ್ಮಾನಂದರು ಭಾರತದಲ್ಲಿನ ಕಾರ್ಯಗಳ ವಿವರಗಳನ್ನು ವಿದೇಶಗಳಲ್ಲಿದ್ದ ಕೇಂದ್ರಗಳಿಗೆ ಕಳಿಸಿಕೊಡುತ್ತಿದ್ದರು. ಅವರ ವರದಿಗಳು ಲಂಡನ್ ಕೇಂದ್ರಕ್ಕೂ ತಲುಪಿದಾಗ ಮಾರ್ಗರೆಟ್ (ನಿವೇದಿತೆಯ ಮೊದಲ ಹೆಸರು) ಮಿಷನ್‌ನ ಚಟುವಟಿಕೆಗಳ ಬಗ್ಗೆ ಅವರಿಗೆ ಅನೇಕ ಪ್ರಶ್ನೆಗಳನ್ನು ಹಾಕಿ ಪತ್ರ ಬರೆಯುತ್ತಿದ್ದಳು. ಸ್ವಾಮಿಗಳಿಂದ ಸೂಕ್ತ ಉತ್ತರ ಸಿಕ್ಕ ಮೇಲೆ ಲಂಡನ್ ವೇದಾಂತ ಕೇಂದ್ರದ ಸದಸ್ಯರಿಗೆ ಈ ವರದಿಗಳನ್ನು ಒಪ್ಪಿಸುತ್ತಿದ್ದಳು. ಲಂಡನ್‌ನಲ್ಲಿ ಸ್ವಾಮಿ ಅಭೇದಾನಂದರಿಗೆ ವೇದಾಂತ ಪ್ರಚಾರಕಾರ್ಯದಲ್ಲಿ ಸಹಕರಿಸುತ್ತಿದ್ದಳು. ವಿಂಬಲ್ಡನ್‌ನಲ್ಲಿ ತಾನೇ ಒಂದು ವೇದಾಂತ ಕೇಂದ್ರವನ್ನು ತೆರೆದಳು. ಮಾರ್ಗರೆಟ್ ಕಾಲಕಾಲಕ್ಕೆ **ಬ್ರಹ್ಮವಾದಿನ್** ಪತ್ರಿಕೆಗೆ ಲಂಡನ್ನಿನ ಚಟುವಟಿಕೆಗಳ ವರದಿಯನ್ನು ನೀಡುತ್ತಿದ್ದಳು. ೧೮೯೭ರ ಬೇಸಿಗೆಯಲ್ಲಿ ಲಂಡನ್ನಿನ ವೇದಾಂತ ತರಗತಿಗಳು ಮುಚ್ಚಲ್ಪಟ್ಟವು. ಬೇಸಿಗೆಯು ಮುಗಿದೊಡನೆ ತರಗತಿಗಳು ಪುನಃ ಪ್ರಾರಂಭವಾಗಬೇಕಾಗಿದ್ದಿತು. ಆದರೆ ಅಷ್ಟರಲ್ಲೇ ಸ್ವಾಮಿ ಅಭೇದಾನಂದರು ಅಮೆರಿಕಾಕ್ಕೆ ಹೊರಟುಬಿಟ್ಟರು. ಇತ್ತ ಲಂಡನ್ ಹಾಗೂ ವಿಂಬಲ್ಡನ್ ಕೇಂದ್ರಗಳೇ ಮುಚ್ಚಿಹೋದವು. ಆದರೆ ಮಾರ್ಗರೆಟಳ, ಎರಿಕ್ ಹಾಮಂಡ್‌ರ ಮತ್ತು ಶ್ರೀಮತಿ ಆಶ್‌ಟನ್‌ರ ಉತ್ಸಾಹದಿಂದ ಕೆಲವು ಮಿತ್ರರ ಮನೆಯಲ್ಲಿ ಅನಧಿಕೃತವಾಗಿಯೇ ಸಭೆ ಸೇರುತ್ತಿದ್ದರು. ಆ ಸಭೆಗಳಲ್ಲಿ ಸ್ವಾಮಿ ಬ್ರಹ್ಮಾನಂದರು ಕಳಿಸಿಕೊಡುತ್ತಿದ್ದ ವರದಿಗಳನ್ನು ಓದಲಾಗುತ್ತಿತ್ತು. ಅಂತಹ ಒಂದು ಸಭೆಯಲ್ಲಿ ಮಾರ್ಗರೆಟಳು ಹೇಳಿದಳು: ''ನಮ್ಮ ಮೊದಲ ಸಭೆಯ ಒಂದು ಬಹುಮುಖ್ಯ ವಿಶೇಷತೆಯೇನೆಂದರೆ ನಮ್ಮೆಲ್ಲರ ಮಹದಾಸಕ್ತಿಯ ವಿಷಯವಾದ ಸ್ವಾಮಿ ಬ್ರಹ್ಮಾನಂದರು ಬಾರಾನಗರದಿಂದ ಕಳಿಸಿದ ಮಠದ ಚಟುವಟಿಕೆಗಳ ವರದಿ. ಇದನ್ನು ಮುದ್ರಿಸಿ ಈ ದೇಶದಲ್ಲಿರುವ ಹಾಗೂ ಅಮೇರಿಕಾದಲ್ಲಿರುವ ನಮ್ಮೆಲ್ಲರ ಸ್ನೇಹಿತರಿಗೆ ಕಳಿಸೋಣ. ಇದನ್ನು ಓದಿದವರೆಲ್ಲರೂ ನಮ್ಮ ಭಾರತೀಯ ಸೋದರರ ಕಾರ್ಯದಲ್ಲಿ ಸಹಾನುಭೂತಿ ತೋರಿಸುವಲ್ಲಿ ಮಹತ್ತರ ಹೆಜ್ಜೆಯನ್ನಿಡಬೇಕೆಂದು ಭಾವಿಸುತ್ತಾರೆ. ಸಂಘವು ಯಾವ ಸಂತರ ಹೆಸರಿನಲ್ಲಿ ಸ್ಥಾಪನೆಗೊಂಡಿದೆಯೊ ಕೇವಲ ಅವರ ಮೇಲಿನ ಪ್ರೀತ್ಯಾದರಗಳಿಗೋಸ್ಕರ ರಾಮಕೃಷ್ಣ ಮಿಷನ್ ನಮ್ಮನ್ನು ಆಕರ್ಷಿಸುತ್ತಿಲ್ಲ. ರಾಮಕೃಷ್ಣ ಮಿಷನ್ನಿನ ಧ್ಯೇಯೋದ್ದೇಶಗಳು ನಮ್ಮವುಗಳಿಗೆ ಹೊಂದಾಣಿಕೆಯಾಗುವು

ದರಿಂದ ಅದರ ಭಾವಧಾರೆ ವಿಶೇಷವಾಗಿ ನಮ್ಮನ್ನು ಆಕರ್ಷಿಸುತ್ತದೆ. ಈ ವರದಿಯಲ್ಲಿರುವ ಹಾಗೂ ಆಲಂಬಜ಼ಾರ್ ಕ್ಷಾಮ ಪರಿಹಾರಗಳು, ಪ್ರಾಪಂಚಿಕ ಕ್ರಿಯಾಶೀಲರಾದ ಪಾಶ್ಚಾತ್ಯರು ಬಯಸುವ ನಿಷ್ಕ್ರಿಯತೆಯಿಂದ ದೂರವಾದ ಅನುಷ್ಠಾನಾತ್ಮಕ ಆಧ್ಯಾತ್ಮಿಕ ಜೀವನಕ್ಕೆ ಪುಷ್ಟಿಯಾಗಿವೆ.'' ಇನ್ನೊಂದು ವರದಿಯಲ್ಲಿ ಆಕೆ, ''ರಾಮಕೃಷ್ಣ ಮಿಷನ್ ಹಾಗೂ ಕ್ಷಾಮ ಪರಿಹಾರ ಚಟುವಟಿಕೆಗಳಲ್ಲಿ ಇಲ್ಲಿನ ಜನರು ಬಹಳ ಆಸಕ್ತಿಯನ್ನು ತೋರಿಸುತ್ತಿದ್ದಾರೆ. ಪಾಶ್ಚಾತ್ಯರಲ್ಲಿ ಈ ಬೆಳವಣಿಗೆಗಳು ವಿಚಿತ್ರ ರೀತಿಯಲ್ಲಿ ಬಹಳ ಆಸಕ್ತಿಯನ್ನು ಮೂಡಿಸುತ್ತವೆ. ಭಾರತದ ಎಚ್ಚೆತ್ತ ಮಿಷನರಿ ಉತ್ಸಾಹದಿಂದ ತಮಗೆ ಆಗುತ್ತಿರುವ ಮಹೋಪಕಾರಕ್ಕೆ ಸ್ವಲ್ಪವಾದರೂ ಕೃತಜ್ಞತೆಯನ್ನು ಸಲ್ಲಿಸುವ ಅಂಗವಾಗಿ ನಿಧಾನವಾಗಿ ಹಿಂದೂ ಶೈಲಿಯಲ್ಲಿಯೇ ಹಿಂದೂಗಳ ಕೆಲಸಗಳನ್ನು ಕಾರ್ಯಗತಗೊಳಿಸಲು ಲೌಕಿಕ ಹಾಗೂ ಅಧ್ಯಾತ್ಮವಿದ್ಯೆಯ ಶಿಕ್ಷಕರನ್ನು ಕಳಿಸಿಕೊಡುವುದರ ಮೂಲಕ ಇಂಗ್ಲಿಷ್ ಕೇಂದ್ರಗಳು ತಮ್ಮ ಭಾಗದ ಕರ್ತವ್ಯವನ್ನು ನಿರ್ವಹಿಸಬಹುದೆಂದು ಆಶಿಸಬಹುದಾಗಿದೆ'' ಎಂದಳು.

ಮಾರ್ಗರೆಟ್ ಭಾರತಕ್ಕೆ ಬಂದು ತಾನೇ ಸ್ವತಃ ಜನಸಾಮಾನ್ಯರೊಂದಿಗಿದ್ದು ಸ್ವಾಮೀಜಿಯ ಒತ್ತಾಸೆಯಂತೆ ಸ್ತ್ರೀಯರ ಅಭ್ಯುದಯ  ಹಾಗೂ ಶಿಕ್ಷಣಕ್ಕೆ ಸಂಬಂಧಿಸಿದಂತೆ ದುಡಿಯಬೇಕೆಂದು ಬಯಸುತ್ತಿದ್ದಳು. ತನ್ನ ಬಯಕೆಗನುಸಾರವಾಗಿ ತಾನು ಭಾರತಕ್ಕೆ ಬಂದು ಅಲ್ಲಿರಲು ಅನುಮತಿ ನೀಡುವಂತೆ ಆಗ್ರಹಿಸಿ ಸ್ವಾಮೀಜಿಗೆ ಪತ್ರ ಬರೆದಳು. ಆದರೆ ಇದಕ್ಕೆ ಸಂಬಂಧಿಸಿದಂತೆ ಸ್ವಾಮೀಜಿಯಿಂದ ಬಹಳ ಕಾಲ ಯಾವ ಪ್ರತ್ಯುತ್ತರವೂ ಬರಲಿಲ್ಲ. ಕೊನೆಗೂ ಜುಲೈ ೨೯, ೧೮೯೭ ರ ಸ್ವಾಮೀಜಿಯ ಪತ್ರದಲ್ಲಿ ಅವಳ ಇಷ್ಟ ಕೈಗೂಡಿತು. ಕೊಲ್ಕತ್ತಕ್ಕೆ ಬಂದ ಮಾರ್ಗರೆಟ್‌ಗೆ ಭಾರತದ ಸರ್ವಸ್ವದ ಕುರಿತಾಗಿ ಸ್ವಾಮೀಜಿ ಪರಿಚಯ ಮಾಡಿಸಿದರು. ಮಾರ್ಚ್ ೧೧ ೧೮೯೮ ರಂದು ಸ್ಟಾರ್ ಥಿಯೇಟರ್‌ನಲ್ಲಿ ರಾಮಕೃಷ್ಣ ಮಿಷನ್ನಿನ ಉದ್ಘಾಟನಾ ಸಭೆಯಲ್ಲಿ ಸ್ವಾಮೀಜಿಯವರು ಮಾರ್ಗರೆಟ್‌ಳನ್ನು ಜನತೆಗೆ ಪರಿಚಯಿಸುತ್ತ ನುಡಿದರು: ''ನಮ್ಮ ಧ್ಯೇಯದಲ್ಲಿ ಸಹಾಯ ಮಾಡಲು ಇಂಗ್ಲೆಂಡ್ ಇದಾಗಲೇ ತನ್ನ ಮಹಾನ್ ಬುದ್ಧಿಜೀವಿಗಳಲ್ಲಿ ಕೆಲವರನ್ನು ನೀಡಿದೆ... ಈಗ ಮಿಸ್ ಮಾರ್ಗರೆಟ್ ನೋಬಲ್ಲಳ ರೂಪದಿಂದ ಇಂಗ್ಲೆಂಡ್ ಇನ್ನೊಂದು ಕೊಡುಗೆಯನ್ನು ನೀಡಿದೆ...'' ನಂತರ ಮಾರ್ಗರೆಟ್ ರಾಮಕೃಷ್ಣ ಮಿಷನ್ನಿನ ಯಶಸ್ಸನ್ನು ಕೋರುತ್ತ ಸಭೆಯನ್ನುದ್ದೇಶಿಸಿ ನುಡಿದಳು: ''ನಿಮ್ಮ ಆಧ್ಯಾತ್ಮಿಕ ವಿಚಾರಗಳನ್ನು ಇಂಗ್ಲೆಂಡಿನಲ್ಲಿ ಸುಮಾರು ಒಂದೂವರೆ ವರ್ಷಗಳ ಹಿಂದೆ ಪ್ರಚಾರ ಮಾಡಿರುವ ಕಾರ್ಯದ ಬಗ್ಗೆ ನಿರ್ದಿಷ್ಟವಾಗಿ ಹೇಳಲು ನಾನಿಲ್ಲಿ ನಿಂತಿದ್ದೇನೆಯೆ ಹೊರತು ವೇದಿಕೆಯಲ್ಲಿ ನಮ್ಮ ಜೊತೆಗಿರುವವರನ್ನು ಹೊಗಳುವುದಕ್ಕಾಗಿ ಅಲ್ಲ. ಆದರೆ ನೀವು ಅವರ ಮೂಲಕ ಕಳಿಸಿದ ಸಂದೇಶವು ಇಂಗ್ಲೆಂಡಿಗೆ ಎಷ್ಟು ಮುಖ್ಯವೆಂಬುದರ ಬಗ್ಗೆ ಕೆಲವು ಮಾತಿನಲ್ಲಿ ತಿಳಿಸಿಕೊಡುವ ಪ್ರಯತ್ನ ಮಾಡಲು ಇಲ್ಲಿ ನಿಂತಿದ್ದೇನೆ.'' ಅವಳ ಉಪನ್ಯಾಸ ಅರ್ಥಗರ್ಭಿತವಾಗಿಯೂ, ಪೂರ್ವತಯಾರಿಯಿಂದ ಕೂಡಿದುದೂ ಆಗಿತ್ತು. ಆ ಉಪನ್ಯಾಸದಲ್ಲಿ ಡಾ. ಸಾಲ್ಜ಼ರ್ ಎಂಬ ಹೋಮಿಯೋಪತಿ ವೈದ್ಯರೊಬ್ಬರು ಆಕೆಯ ಕ್ರಿಸ್ತನ ಕುರಿತಾದ ಹೇಳಿಕೆಯನ್ನು ಖಂಡಿಸುತ್ತ ತಮ್ಮ ಅಸಂತೋಷವನ್ನು ವ್ಯಕ್ತಪಡಿಸಿದರು. ಅದನ್ನು ಸಮರ್ಥಿಸುತ್ತ ಮಾರ್ಗರೆಟ್ ಅವರಿಗೆ ತಕ್ಕ ಉತ್ತರವನ್ನು ನೀಡಿದಳು. ಅವಳ ಉಪನ್ಯಾಸದಿಂದ ಸ್ವಾಮೀಜಿ ಬಹಳ ಸಂತುಷ್ಟರಾದರು. ನಂತರ ಅವಳ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ ನುಡಿದರು: ''ಅವಳು ನಿಜವಾಗಿಯೂ ಭಾರತದ ಸೇವೆ ಮಾಡಲೆಂದೇ ಬಂದಿದ್ದಾಳೆ. ಸೇವೆಗೆ ಕೇವಲ ಉತ್ಸಾಹ ತುಂಬಲು ಬಂದಿಲ್ಲ.'' ಸ್ವಾಮಿ ರಾಮಕೃಷ್ಣಾನಂದರಿಗೆ ಬರೆದ ಪತ್ರದಲ್ಲಿ ಹೇಳುತ್ತಾರೆ, ''ಮಿಸ್ ನೋಬೆಲ್ ನಿಜವಾಗಿಯೂ ಒಂದು ಆಸ್ತಿ.''

ಮಾರ್ಚ್ ೧೭ ೧೮೯೮ ಗುರುವಾರದಂದು ಆಕೆ ಶ್ರೀಮಾತೆ ಶಾರದಾದೇವಿಯವರನ್ನು ಭೇಟಿ ಮಾಡಿದಳು. ಭಾರತದ ಸೇವೆಗೆ ಮುನ್ನ ಮಾರ್ಗರೆಟ್ ಭಾರತದ ನಾರಿಯರ ಕುರಿತಾದ ಚಿತ್ರಣ ಪಡೆಯಬೇಕಿತ್ತು. ಸಚ್ಚಾರಿತ್ರ್ಯ ಹಾಗೂ ಆಧ್ಯಾತ್ಮಿಕತೆಯ ಗಟ್ಟಿಯಾದ ಬುನಾದಿಯ ಮೇಲೆ ನಿಂತ ಆದರ್ಶ ಭಾರತೀಯ ಮಹಿಳೆಯ ಪರಿಚಯ ಅವಳಿಗೆ ಆಗಬೇಕಿತ್ತು. ಅದೀಗ ಅವಳಿಗೆ ಪರಿಪೂರ್ಣ ರೀತಿಯಲ್ಲಿ ಆಯಿತು. ಹಿಂದೂ ಬ್ರಾಹ್ಮಣ ಮಹಿಳೆಯ ಮೇಲಿದ್ದ ಆಗಿನ ಕಾಲದ ನಿರ್ಬಂಧವೂ ಶ್ರೀಮಾತೆಯವರ ನಿಷ್ಕಲ್ಮಷ ಮಾತೃವಾತ್ಸಲ್ಯವೆಂಬ ಬೆಳ್ನೊರೆಯ ಕಡಲನ್ನು ತಡೆಹಿಡಿಯದಾಯಿತು. ಭಾಷೆ, ಜಾತಿ, ಚರ್ಮದ ಬಣ್ಣ, ವಯೋಮಿತಿ ಮುಂತಾದ ಎಲ್ಲ ಬಗೆಯ ವೈಶಿಷ್ಟ್ಯವೆಂಬ ಗೋಡೆಗಳನ್ನು ಕೊಚ್ಚಿ, ತನ್ನಲ್ಲಿ ಸೇರಿಸಿಕೊಳ್ಳುವ ಪ್ರೇಮವೆಂಬ ಮಹಾತೆರೆಯನ್ನು ಸೆರಗಿನ ತೆರೆಮರೆಯಲ್ಲಿಯೇ ಅಡಗಿಸಿಟ್ಟುಕೊಂಡಿದ್ದ, ಮುಗ್ಧ ನಗೆಯಿಂದ ಒಮ್ಮೆಲೇ ಎಲ್ಲರನ್ನೂ ಆಕರ್ಷಿಸುವ ಸ್ತ್ರೀಯರ ಆದರ್ಶವಾದ ಶ್ರೀಮಾತೆಯವರನ್ನು ಕಂಡು ಮಾರ್ಗರೆಟ್, ಮಿಸ್ ಮ್ಯಾಕ್ಲಿಯಾಡ್ ಮತ್ತು ಮಿಸ್ ಓಲಿ ಬುಲ್ ಮೂವರೂ ಮುಗ್ಧರಾದರು. ನಂತರ ಮಾರ್ಗರೆಟ್ ತನ್ನ ಸ್ನೇಹಿತೆ ಶ್ರೀಮತಿ ನೆಲ್ ಹ್ಯಾಮಂಡ್‌ಳಿಗೆ ಬರೆದ ಪತ್ರದಲ್ಲಿ ಶ್ರೀಮಾತೆಯವರು ತಾನಿತ್ತ ಹಣ್ಣನ್ನು ಸ್ವೀಕರಿಸಿ ತನ್ನನ್ನು ಸನ್ಮಾನಿಸಿದಂತಾಯಿತು, ಮತ್ತು ತನ್ನ ಭವಿಷ್ಯದ ಕಾರ್ಯಕ್ಕೆ ಇನ್ನಿಲ್ಲದ ರೀತಿಯಲ್ಲಿ ಪ್ರೋತ್ಸಾಹಿಸಿದಂತಾಯಿತೆಂದು ಬರೆಯುತ್ತಾಳೆ.

ಮಾರ್ಚ್ ೨೫ರಂದು ನೀಲಾಂಬರ್ ಮುಖರ್ಜಿಯ ತೋಟದ ಮನೆಯಲ್ಲಿ ಸ್ವಾಮೀಜಿ ಮಾರ್ಗರೆಟಳಿಗೆ ಬ್ರಹ್ಮಚರ್ಯ ದೀಕ್ಷೆಯನ್ನಿತ್ತು 'ನಿವೇದಿತಾ' ಎಂದು ನಾಮಕರಣ ಮಾಡಿದರು. ಭಾರತಕ್ಕಾಗಿ ತನ್ನ ದೇಶ, ಸಂಸ್ಕೃತಿ, ಅನುಕೂಲ ಪರಿಸ್ಥಿತಿಗಳೆಲ್ಲವನ್ನೂ ತ್ಯಜಿಸಿ ತನ್ನನ್ನು 'ನಿವೇದಿಸಿ'ಕೊಂಡಿದ್ದ ನಿವೇದಿತೆಗೆ ಭಾರತದ ಮಹಾನ್ ಆದರ್ಶವನ್ನೂ, ಅದನ್ನು ಬಿಂಬಿಸುವ ಪೌರಾಣಿಕ, ಐತಿಹಾಸಿಕ ಚರಿತ್ರೆಗಳನ್ನೂ ಕಣ್ಣಿಗೆ ಕಟ್ಟುವಂತೆ ವಿವರಿಸಿದರು. ಭಾರತ, ಅದರ ಜನ, ಸಂಸ್ಕೃತಿಗಳನ್ನು ಆಕೆ ಅರ್ಥಮಾಡಿಕೊಂಡು ತನ್ನದನ್ನಾಗಿಸಿಕೊಳ್ಳುವುದಕ್ಕೆ ಕಾಲಾವಕಾಶ ನೀಡಿದರು. ಆಕೆ ಯಾರ ಸೇವೆ ಮಾಡಲು ಹೊರಟಿರುವಳೊ ಅವರ ದೃಷ್ಟಿಯಿಂದಲೇ ಜಗತ್ತನ್ನು ಕಾಣಬೇಕೇ ವಿನಾ, ಆಕೆ ತನ್ನ ದೃಷ್ಟಿಯನ್ನು ಅವರ ಮೇಲೆ ಹೇರಬಾರದೆಂಬುದು ಸ್ವಾಮೀಜಿಯ ಅಭಿಪ್ರಾಯವಾಗಿತ್ತು. ಸಂಪೂರ್ಣ

ವಿಭಿನ್ನ ಸಂಸ್ಕೃತಿಗೆ ತನ್ನ ಅಹಮಿಕೆಯನ್ನು ಪರಿವರ್ತಿಸಿಕೊಳ್ಳಲು ಮಹಾನ್ ಹೋರಾಟವನ್ನು ನಡೆಸುತ್ತಿದ್ದ ನಿವೇದಿತೆಗೆ ಸ್ವಾಮೀಜಿ ಹುರುಪು ನೀಡುತ್ತ, ತಾನೂ ಶ್ರೀರಾಮಕೃಷ್ಣರನ್ನು ಅರ್ಥ ಮಾಡಿಕೊಂಡು ಅವರನ್ನು ಗುರುವಾಗಿ ಸ್ವೀಕರಿಸಲು ಬಹಳ ಹೋರಾಡಬೇಕಾಯಿತೆಂದು ನುಡಿದರು. ಆಕೆಯ ಎಲ್ಲ ರೀತಿಯ 'ಕ್ಷುದ್ರ'ವೆಂದು ಕಾಣುವ ಪ್ರಶ್ನೆಗಳನ್ನು ಬಹಳ ಮುಖ್ಯವಾದುವೆಂದೇ ಬಗೆಯುತ್ತ ಸಮಾಧಾನದಿಂದ ಸಮರ್ಪಕವಾಗಿ ಉತ್ತರಿಸುತ್ತಿದ್ದರು. ಸ್ವಾಮೀಜಿ ಡಾರ್ಜಿಲಿಂಗಿಗೆ ಹೋಗಿದ್ದಾಗ ನಿವೇದಿತಾ ಮಠದಲ್ಲೇ ಇದ್ದಳು. ಮಹಾಕಾಲೀ ಪಾಠಶಾಲೆಯ ಬಹುಮಾನ ವಿತರಣಾ ಸಮಾರಂಭದಲ್ಲಿ ಆಕೆ ಸ್ವಾಮಿ ಶಿವಾನಂದ ಹಾಗೂ ಸ್ವಾಮಿ ಅಖಂಡಾನಂದರ ಸಮಕ್ಷದಲ್ಲಿ ಸಭೆಯನ್ನುದ್ದೇಶಿಸಿ ಮಾತನಾಡಿದಳು.

ಜನವರಿ ೨, ೧೯೦೦ರಂದು ರಾಮಕೃಷ್ಣ ಮಠವನ್ನು ನೀಲಾಂಬರ ಮುಖರ್ಜಿಯ ಉದ್ಯಾನದ ಮನೆಯಿಂದ ಬೇಲೂರಿಗೆ ವರ್ಗಾಯಿಸಲಾಯಿತು. ಸುವ್ಯವಸ್ಥಿತ ರೀತಿಯಲ್ಲಿ ತರಗತಿಗಳು ನಡೆದವು. ಮಠದ ಸಂನ್ಯಾಸಿಗಳ ಒತ್ತಾಯದ ಮೇರೆಗೆ ನಿವೇದಿತಾ ಬ್ರಹ್ಮಚಾರಿಗಳಿಗೆ ಬುಧವಾರಗಳಂದು ಸಸ್ಯಶಾಸ್ತ್ರ ಮತ್ತು ಚಿತ್ರ ಬಿಡಿಸುವಿಕೆ, ಶುಕ್ರವಾರಗಳಂದು ಶರೀರಶಾಸ್ತ್ರ ಮತ್ತು ಬಟ್ಟೆ ಹೊಲಿಯುವ ತರಗತಿಗಳನ್ನು ನಡೆಸಿದಳು. ಬಲರಾಮ ಬೋಸ್‌ನ ಮನೆಯಲ್ಲಿ ಜರಗುತ್ತಿದ್ದ ರಾಮಕೃಷ್ಣ ಮಿಷನ್ನಿನ ವಾರದ ಸಭೆಗಳಲ್ಲಿ ನಿವೇದಿತಾ ಆಗಾಗ್ಗೆ ಮಾತನಾಡುತ್ತಿದ್ದಳು. ಬ್ರಾಹ್ಮ ಸಮಾಜದಲ್ಲಿ ಆಗಾಗ ವಿದ್ಯಾಭ್ಯಾಸ ಹಾಗೂ ಇನ್ನಿತರ ವಿಷಯಗಳ ಬಗ್ಗೆ ಉಪನ್ಯಾಸ ನೀಡುತ್ತಿದ್ದಳು. ತನ್ನ ಬ್ರಾಹ್ಮ ಮಿತ್ರರಿಗೆ ಶನಿವಾರಗಳಂದು ಬೆಳಿಗ್ಗೆ ಶಿಕ್ಷಕರ ತರಬೇತಿ ತರಗತಿಗಳನ್ನೂ ನಡೆಸುತ್ತಿದ್ದಳು. ಕೆಲವು ಕಾಲ ಧರ್ಮತಲ ರಸ್ತೆಯಲ್ಲಿರುವ ಅಮೇರಿಕನ್ ಮಿಷನರಿ ಶಾಲೆಯಲ್ಲಿ ಇತಿಹಾಸ ತರಗತಿಗಳನ್ನೂ ತೆಗೆದುಕೊಂಡಳು. ಫೆಬ್ರವರಿ ೧೩, ಆಲ್ಬರ್ಟ್ ಹಾಲ್‌ನಲ್ಲಿ 'ಕಾಳಿ'ಯ ಕುರಿತು ಉಪನ್ಯಾಸ ನೀಡಿದಳು. ಫೆಬ್ರವರಿ ೨೬ರಂದು ಮಿನರ್ವ ಥಿಯೇಟರ್‌ನಲ್ಲಿ 'ಯುವ ಭಾರತ ಚಳುವಳಿ' ಎಂಬ ವಿಷಯದ ಮೇಲೆ ಸ್ಫೂರ್ತಿಯುತವಾಗಿ ಮಾತನಾಡಿದಳು. ಸ್ವಾಮೀಜಿ ಮತ್ತಿತರ ಮಠದ ಸಂನ್ಯಾಸಿಗಳು ಈ ಉಪನ್ಯಾಸಕ್ಕೆ ಹಾಜರಾಗಿದ್ದರು. ಮಾರ್ಚ್ ೧೯ರಂದು ಬೇಲೂರು ಮಠದಲ್ಲಿ ಶ್ರೀರಾಮಕೃಷ್ಣರ ಜನ್ಮದಿನೋತ್ಸವದಂದು ಮಾತನಾಡಿದಳು. ಮಾರ್ಚ್ ೨೮ರಂದು ಕಾಳಿಘಾಟ್‌ನ ಪ್ರಸಿದ್ಧ ಮಂದಿರದಲ್ಲಿ 'ಕಾಳಿ ಪೂಜೆ' ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಿದಳು. ಸಂಘದ ಸಂನ್ಯಾಸಿಗಳ ಬಗ್ಗೆ ಇದ್ದ ಆಕೆಯ ಗೌರವ-ಭಕ್ತಿಗಳು ಸ್ವಾಮಿ ವಿವೇಕಾನಂದರ ಮೇಲಿದ್ದುದಕ್ಕಿಂತ ಕಡಿಮೆಯಿರಲಿಲ್ಲ. ಅವಳೇ The Master As I saw Him ಎಂಬ ಗ್ರಂಥದಲ್ಲಿ (ಪು. ೭೧, ೧೪ನೆ ಸಂಸ್ಕರಣ ೧೯೭೭) ಬರೆಯುತ್ತಾಳೆ, ''ವಿವೇಕಾನಂದರಿಲ್ಲದೆ ರಾಮಕೃಷ್ಣ ಮಹಾಸಂಘವೆನ್ನುವುದು ಅರ್ಥಹೀನ. ಹಾಗೆಯೆ, ರಾಮಕೃಷ್ಣ ಮಹಾಸಂಘದ ಅವರ ಗುರುಭಾಯಿಗಳ ಬೆಂಬಲವಿಲ್ಲದೆ ವಿವೇಕಾನಂದರ ಜೀವನ ಹಾಗೂ ಪರಿಶ್ರಮ ಎರಡೂ ವ್ಯರ್ಥವಾಗಬೇಕಾಗಿತ್ತು'' ಎಂದು.

೧೯೦೦ರಲ್ಲಿ ಕೊಲ್ಕತ್ತದಲ್ಲಿ ಪ್ಲೇಗ್ ಮಾರಿ ಹಬ್ಬಿತು. ಜನರಿಗೆ ಅಭಯವನ್ನು ನೀಡುವುದಕ್ಕಾಗಿ ನಿವೇದಿತಾ ಇಂಗ್ಲೀಷ್‌ನಲ್ಲಿ ಕರಪತ್ರವನ್ನು ಬರೆದಳು. ನಂತರ ಅದನ್ನು ಬಂಗಾಲಿ ಮತ್ತು ಹಿಂದೀ ಭಾಷೆಗಳಿಗೆ ಅನುವಾದಿಸಲಾಯಿತು. ರೋಗಿಗಳ ಶುಶ್ರೂಷೆಗೆ ವ್ಯವಸ್ಥೆ ಮಾಡಲಾಯಿತು. ಮಾರ್ಚ್ ೩೧ರಂದು ಪ್ಲೇಗ್ ಪರಿಹಾರಕಾರ್ಯ ಆರಂಭವಾಯಿತು. ಸ್ವಚ್ಛತೆಯ ಕಾರ್ಯ ಆದ್ಯತೆಯನ್ನು ಪಡೆಯಿತು. ಪ್ಲೇಗ್ ಸಮಿತಿ ರಚನೆಗೊಂಡಿತು. ನಿವೇದಿತಾ ಅದರ ಕಾರ್ಯದರ್ಶಿಯಾದಳು. ಸ್ವಾಮಿ ಸದಾನಂದರು ಮೇಲ್ವಿಚಾರಕರಾದರು. ಸ್ವಾಮಿ ಶಿವಾನಂದರು, ನಿತ್ಯಾನಂದರು, ಮತ್ತು ಆತ್ಮಾನಂದರು ಅದರ ಸದಸ್ಯರಾದರು. ಝಾಡಮಾಲಿ ಹುಡುಗರನ್ನು ಕರೆದುಕೊಂಡು ಸ್ವಾಮಿ ಸದಾನಂದರು ಶಾಮ್‌ಬಜ಼ಾರ್, ಬಾಗ್ ಬಜ಼ಾರ್ ಮತ್ತು ನೆರೆಯ ಸ್ಥಳಗಳನ್ನು ಸ್ವಚ್ಛಗೊಳಿಸುವ ಕಾರ್ಯ ಆರಂಭಿಸಿದರು. ಆರ್ಥಿಕ ಸಹಾಯ ಕೋರುತ್ತ ಏಪ್ರಿಲ್ ೬ರಂದು ನಿವೇದಿತಾ ಸ್ಟೇಟ್ಸ್‌ಮೆನ್ ಹಾಗೂ ಇಂಗ್ಲಿಷ್‌ಮೆನ್ ಪತ್ರಿಕೆಯ ಮೂಲಕ ಮನವಿ ಪತ್ರವನ್ನು ಮುಂದಿಟ್ಟಳು. ಕೊಲ್ಕತ್ತದ ಸ್ವಾಸ್ಥ್ಯಾಧಿಕಾರಿ ಡಾ. ನೀಲ್ ಕುಕ್ ನಿವೇದಿತೆಯನ್ನು ಭೇಟಿ ಮಾಡಿದರು. ಚಾರ್ಟರ್ಡ್ ಬ್ಯಾಂಕ್ ಆಕೆಯ ಕೆಲಸವನ್ನು ಶ್ಲಾಘಿಸುತ್ತ ಪತ್ರವೊಂದನ್ನು ಬರೆದು ಅದರೊಂದಿಗೆ ಐವತ್ತು ರೂಪಾಯಿಗಳನ್ನು ಕಳಿಸಿಕೊಟ್ಟರು. ಸರ್ಕಾರದ ಆದೇಶದ ಮೇರೆಗೆ ಶ್ರೀ ಬ್ರೈಟ್, ಪ್ಲೇಗ್ ಸಮಿತಿಯ ಚೇರ್‌ಮೆನ್, ಅವಳ ಕೆಲಸವನ್ನು ಪರಿಶೀಲಿಸಲು ಹೊರಟರು. ಏಪ್ರಿಲ್ ೨೧ರಂದು ಕ್ಲಾಸಿಕ್ ಥಿಯೇಟರ್‌ನಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ''ಪ್ಲೇಗ್ ಹಾಗೂ ವಿದ್ಯಾರ್ಥಿಗಳ ಕರ್ತವ್ಯ''ವೆಂಬ ವಿಷಯದ ಮೇಲೆ ನಿವೇದಿತಾ ಮಾತನಾಡಿದಳು. ಸ್ವಾಮೀಜಿಯೂ ಮಾತನಾಡಿದರು. ಇದರಿಂದ ಉತ್ತೇಜಿತರಾಗಿ ಸುಮಾರು ೧೫ ವಿದ್ಯಾರ್ಥಿಗಳು ಸ್ವಯಂಸೇವಕರಾಗಿ ತಮ್ಮನ್ನು ಅರ್ಪಿಸಿಕೊಂಡರು. ಬಲರಾಮ ಬೋಸ್‌ನ ಮನೆಯಲ್ಲಿ ಪ್ರತಿ ಭಾನುವಾರದಂದು ಸಮಿತಿ ಸಭೆ ಸೇರುತ್ತಿತ್ತು. ಚಟುವಟಿಕೆಗಳ ವಾರದ ವರದಿಯನ್ನು ದಾಖಲಿಸಿ ಮುಂದಿನ ಯೋಜನೆಯನ್ನು ರೂಪಿಸಲಾಗುತ್ತಿತ್ತು. ನಿವೇದಿತೆಯ ಪ್ಲೇಗ್ ಸಮಿತಿಯಲ್ಲಿ ಇದ್ದ ಸ್ವಯಂಸೇವಕರಾದ ಡಾ. ರಾಧಾಗೋವಿಂದ್ ಕರ್ ಎಂಬ ಪ್ರತ್ಯಕ್ಷದರ್ಶಿಯೊಬ್ಬರು ಬರೆಯುತ್ತಾರೆ, ''ಈ ವಿಪತ್ತಿನ ಸಂದರ್ಭದಲ್ಲಿ ಬಾಗ್‌ಬಜ಼ಾರಿನ ವಠಾರಗಳಲ್ಲಿ ಸಾಕ್ಷಾತ್ ದಯೆಯ ಮೂರ್ತರೂಪವೇ ಎಂಬಂತಿದ್ದ ನಿವೇದಿತೆಯನ್ನು ಕಾಣಬಹುದಾಗಿತ್ತು. ತನ್ನ ಪರಿಸ್ಥಿತಿಯ ಬಗ್ಗೆ ಸ್ವಲ್ಪವೂ ಆಲೋಚಿಸದೆಯೆ ಧನಸಹಾಯ ನೀಡಿದಳು. ಒಂದು ಸಮಯದಲ್ಲಿ ಅವಳ ಆಹಾರ ಕೇವಲ ಹಾಲು ಹಣ್ಣುಗಳಿಗೆ ಸೀಮಿತವಾಗಿತ್ತು. ಒಬ್ಬ ರೋಗಿಯ ವೈದ್ಯಕೀಯ ಖರ್ಚನ್ನು ಭರಿಸಲು ಅವಳು ತಾನು ಹಾಲು ತೆಗೆದುಕೊಳ್ಳುವುದನ್ನೂ ಬಿಟ್ಟಳು.'' ಪ್ಲೇಗ್ ನಿರ್ಮೂಲನೆಗೆ ಸ್ವಚ್ಛತೆಯನ್ನು ಕಾಪಾಡಿಕೊಳ್ಳುವುದು ಹಾಗೂ ರೋಗದ ಕುರಿತಾದ ಅಜ್ಞಾನವನ್ನು ಹೋಗಲಾಡಿಸುವುದು – ಇವೇ ಅವಳ ಸದ್ಯದ ಉದ್ದೇಶವಾಗಿದ್ದಿತು. ಸ್ವಯಂಸೇವಕರು ಇಲ್ಲದಿದ್ದಾಗ ಅವಳೇ ಒಂದು ದಿನ ರಸ್ತೆಯನ್ನು ಸ್ವಚ್ಛಗೊಳಿಸತೊಡಗಿದಳು. ಅವಳ ಈ ಕಾರ್ಯದಿಂದ ನಾಚಿ ನೆರೆಯ ಹುಡುಗರು ಅವಳಿಗೆ ಸಹಾಯ

ಮಾಡಲು ಓಡಿ ಬಂದರು. ಅಂದಿನಿಂದ ತಾವೇ ಆ ರಸ್ತೆಯನ್ನು ಸ್ವಚ್ಛಗೊಳಿಸುವುದಾಗಿ ವಾಗ್ದಾನ ಮಾಡಿದರು. ಬಾಗ್‌ಬಜ಼ಾರಿನ ಕೊಳೆಗೇರಿಯಲ್ಲಿ ಪ್ಲೇಗ್ ರೋಗಿಯೊಬ್ಬನ ಸುದ್ದಿಯನ್ನು ಕೇಳಿದ ನಿವೇದಿತಾ ರೋಗಿಯ ಶುಶ್ರೂಷೆಗಾಗಿ ಏನೆಲ್ಲ ವ್ಯವಸ್ಥೆಗಳನ್ನು ಮಾಡಿರುವುದಾಗಿ ವಿಚಾರಿಸಿ, ತಾನೇ ಆ ಹುಡುಗನ ಶುಶ್ರೂಷೆ ಮಾಡಲು ನಿಂತಳು. ರೋಗಿಯ ಅವಸ್ಥೆ ಚಿಂತಾಜನಕವಾಗಿತ್ತು. ಬಡವರ ಗುಡಿಸಲಿನ ಆ ವಾತಾವರಣದಲ್ಲಿ ಆರೋಗ್ಯಕರ ಶುಶ್ರೂಷೆ ಮಾಡುವ ಸಾಧ್ಯತೆಗಳನ್ನು ಕುರಿತು ವಿಚಾರಿಸಿದಳು. ತಾನಿದ್ದ ಮನೆಯನ್ನೂ ತೊರೆದು, ಆ ಗುಡಿಸಲಿಗೆ ತಾನೂ ಬಂದು ಉಳಿದುಕೊಂಡು ಹಗಲೂ ರಾತ್ರಿ ಆ ಹುಡುಗನ ಆರೈಕೆಯಲ್ಲಿ ಮಗ್ನಳಾದಳು. ಮನೆಯನ್ನು ರೋಗಾಣುಗಳಿಂದ ಮುಕ್ತಗೊಳಿಸಲು ತಾನೇ ಏಣಿಯೊಂದನ್ನು ತಂದು ಗೋಡೆಗಳಿಗೆ ಸುಣ್ಣ ಬಳಿದಳು. ಆ ಹುಡುಗ ಬದುಕುಳಿಯುವುದು ಸಾಧ್ಯವಿಲ್ಲದಿದ್ದರೂ ತಾನು ಮಾತ್ರ ತನ್ನ ಸೇವೆಯನ್ನು ಒಂದಿನಿತೂ ಕುಂದಿಲ್ಲದಂತೆ ಮಾಡಿದಳು. ನಂತರ ಆ ಹುಡುಗ ನಿವೇದಿತೆಯ ತೊಡೆಯ ಮೇಲೆಯೇ ಪ್ರಾಣಬಿಟ್ಟ. ಅವಿರತ ಶ್ರಮ ಹಾಗೂ ಎದೆಗುಂದಿಸುವ ಉಷ್ಣದ ವಾತಾವರಣ ವಿದ್ದರೂ ಧ್ಯೇಯದಿಂದ ಅವು ಅವಳನ್ನು ಕದಲಿಸಲಾಗಲಿಲ್ಲ.

ಸ್ವಾಮೀಜಿಯ ಮನದಲ್ಲಿ ಸ್ತ್ರೀಸಮಾಜದ ಏಳ್ಗೆ ಪ್ರಾಮುಖ್ಯವನ್ನು ಪಡೆದಿತ್ತು. ''ಎಂದಿಗೂ ಮರೆಯದಿರು! ಸ್ತ್ರೀ ಮತ್ತು ಸಾಮಾನ್ಯ ಜನರು ಎಂಬ ಪದವನ್ನು'' ಎನ್ನುತ್ತಿದ್ದರು ಸ್ವಾಮೀಜಿ. ''ಮೊದಲು ನಿಮ್ಮ ಸ್ತ್ರೀಯರನ್ನು ಶಿಕ್ಷಿತಗೊಳಿಸಿ, ಉಳಿದುದನ್ನು ಅವರಿಗೇ ಬಿಟ್ಟುಬಿಡಿ. ನಂತರ ಅವರೇ ನಿಮಗೆ ತಮಗೆ ಬೇಕಾದ ಸುಧಾರಣೆಗಳನ್ನು ತಿಳಿಸುವರು, ಈ ಮಾತನ್ನು ಖಚಿತವಾಗಿ ತಿಳಿದುಕೊಳ್ಳಿ – ಈಗಿನ ಪರಿಸ್ಥಿತಿಯನ್ನು ಸುಧಾರಿಸಬೇಕಾದರೆ ಮೊದಲು ಸ್ತ್ರೀಯರಲ್ಲಿ ಹಾಗೂ ಸಾಮಾನ್ಯ ಜನರಲ್ಲಿ ಶಿಕ್ಷಣವನ್ನು ಹರಡದೆ ಏನೂ ಮಾಡಲು ಸಾಧ್ಯವಾಗದು'', ''ಖಂಡಿತವಾಗಿಯೂ ಅವರಲ್ಲಿ ಅನೇಕ ಗಂಭೀರವಾದ ಸಮಸ್ಯೆಗಳಿವೆ. ಆದರೆ ಶಿಕ್ಷಣವೆಂಬ ಆ ಐಂದ್ರಜಾಲಿಕ ಪದದಿಂದ ಪರಿಹರಿಸಲಾಗದ್ದು ಯಾವುದೂ ಇಲ್ಲ'' – ಸ್ವಾಮೀಜಿಯವರ ಈ ಮಾತುಗಳು ನಿವೇದಿತಾಳ ಅಂತರ್ಯವನ್ನು ಹೊಕ್ಕು ಕಲಕಿದವು.

ಸ್ವಾಮೀಜಿಯ ಆದೇಶದ ಮೇರೆಗೆ ಸ್ವಾಮಿ ಸ್ವರೂಪಾನಂದರು ನಿವೇದಿತೆಗೆ ಬಂಗಾಳಿ, ಗೀತೆ ಹಾಗೂ ಇನ್ನಿತರ ಶಾಸ್ತ್ರದ ಪಾಠವನ್ನು ಮಾಡಿದರು. ೧೮೯೮ ನವೆಂಬರ್ ೧೨ರಂದು ಬಲರಾಮ್ ಬಸುವಿನ ಮನೆಯಲ್ಲಿ ಶಾಲೆಯನ್ನು ಪ್ರಾರಂಭಿಸುವ ವಿಚಾರವಾಗಿ ಸಾಮಾನ್ಯ ಸಭೆ ಸೇರಿತು. ಮಾಸ್ಟರ್ ಮಹಾಶಯ, ಸುರೇಶ ದತ್ತ, ಹರಮೋಹನ ಮಿತ್ರ ಮೊದಲಾದ ಗೃಹೀ ಭಕ್ತರು ಉಪಸ್ಥಿತರಿದ್ದರು. ಸ್ವಾಮೀಜಿ ಮರೆಯಲ್ಲಿ ಕುಳಿತಿದ್ದರು. ನಿವೇದಿತಾ ಇಂಗ್ಲೀಷಿನಲ್ಲಿ ಶಾಲೆಯ ಉದ್ದೇಶ, ಅದಕ್ಕೆ ನೆರೆದವರಿಂದ ಸಹಕಾರವನ್ನು ಕೋರಿ ಮಾತನಾಡಿದಳು. ಮರೆಯಿಂದಲೇ ಅಲ್ಲಿದ್ದ ವ್ಯಕ್ತಿಯೊಬ್ಬನನ್ನು ಉದ್ದೇಶಿಸಿ, ''ಏಳು, ಏಳು! ಕೇವಲ ಹೆಣ್ಣು ಮಕ್ಕಳ ತಂದೆಯೆನಿಸಿಕೊಂಡರೆ ಸಾಕಾಗುವುದಿಲ್ಲ, ಅವರಿಗೆ ಶಿಕ್ಷಣದ ವ್ಯವಸ್ಥೆ ಮಾಡುವಲ್ಲಿ ನೀವೆಲ್ಲರೂ ಒಟ್ಟಾಗಿ ಸಹಾಯ ಮಾಡಬೇಕಾಗಿದೆ. ಎದ್ದು ಮಾತನಾಡಿ, ಕೋರಿಕೆಗೆ ಸ್ಪಂದಿಸಿ. ಹೇಳಿ, ನಾವೆಲ್ಲರೂ ನಿಮ್ಮ ಯೋಜನೆಯನ್ನು ಒಪ್ಪಿದ್ದೇವೆ, ನಮ್ಮ ಹೆಣ್ಣು ಮಕ್ಕಳನ್ನು ನಿಮಗೆ ಒಪ್ಪಿಸುತ್ತೇವೆ ಎಂದು'' – ಸ್ವಾಮೀಜಿ ಜೋರಾಗಿ ಇಷ್ಟು ಹೇಳಿದರೂ ಅಲ್ಲಿದ್ದವರೆಲ್ಲರೂ ಸುಮ್ಮನೆಯೆ ಕುಳಿತಿದ್ದರು. ಸ್ವಾಮೀಜಿಯೂ ಸುಮ್ಮನೆ ಬಿಡುವವರಲ್ಲ, ಕೊನೆಗೆ ಹಟ ಮಾಡಿ ಹರಮೋಹನನಿಗೆ ಆಜ್ಞೆ ಮಾಡುವ ಧಾಟಿಯಲ್ಲಿ ಹೇಳಿದರು, ''ನೀನು ಕೊಡಲೇಬೇಕು.'' ನಂತರ ಅವರು ಹರಮೋಹನನನ್ನು ನೋಡುತ್ತ ನಿವೇದಿತಾಗೆ ಹೇಳಿದರು, '' Well Miss Nobel, this gentleman offers his girl to you'' ('ಒಳ್ಳೆಯದು, ಮಿಸ್ ನೋಬೆಲ್, ಈ ಸಭ್ಯನು ನಿನಗೆ ತನ್ನ ಮಗಳನ್ನು ಒಪ್ಪಿಸುತ್ತಾನೆ'). ಸ್ವಾಮೀಜಿ ಮರೆಯಲ್ಲಿ ಕುಳಿತಿದ್ದದ್ದು ನಿವೇದಿತಾ ಮೊದಲು ಕಂಡಿರಲಿಲ್ಲ. ಅವರನ್ನು ನೋಡಿ, ಅವರ ಪ್ರೋತ್ಸಾಹದ ಮಾತುಗಳನ್ನು ಕೇಳಿದ ನಂತರ ನಿವೇದಿತಾ ಬಹಳ ಸಂತೋಷಗೊಂಡಳು. ಕರತಾಡನ ಮಾಡುತ್ತ, ಪುಟ್ಟ ಹುಡುಗಿಯ ರೀತಿಯಲ್ಲಿ ಕುಣಿದಾಡಿದಳು. ಶ್ರೀಮಾತೆಯವರು ೧೮೯೮ ನವೆಂಬರ್ ೧೩, ಕಾಳಿಪೂಜೆಯಂದು ಬೋಸ್ ಪಾರಾ ರಸ್ತೆಯಲ್ಲಿರುವ ನಿವೇದಿತಾಳ ನೂತನ ಹೆಣ್ಣು ಮಕ್ಕಳ ಶಾಲೆಯನ್ನು ಉದ್ಘಾಟಿಸಿದರು. ''ಈ ವಿದ್ಯಾಲಯದ ಮೇಲೆ ಜಗನ್ಮಾತೆಯ ಆಶೀರ್ವಾದ ಮಳೆಗರೆಯಲೆಂದು ಪ್ರಾರ್ಥಿಸುತ್ತೇನೆ. ಇಲ್ಲಿಂದ ಶಿಕ್ಷಣವನ್ನು ಪಡೆದ ಹೆಣ್ಣು ಮಕ್ಕಳು ಆದರ್ಶ ಮಹಿಳೆಯರಾಗಲಿ'' ಎಂದು ಹರಸಿದರು. ಸ್ವಾಮಿ ಬ್ರಹ್ಮಾನಂದ, ಸ್ವಾಮಿ ಶಾರದಾನಂದ ಹಾಗೂ ಕೆಲವು ಮಹಿಳಾ ಭಕ್ತರು ಉಪಸ್ಥಿತರಿದ್ದರು. ನವೆಂಬರ್ ೧೪, ಕೆಲವು ನೆರೆಹೊರೆಯ ಹೆಣ್ಣು ಮಕ್ಕಳ ಹಾಜರಾತಿಯಿಂದ ಶಾಲೆ ಪ್ರಾರಂಭವಾಯಿತು. ಸ್ವಾಮೀಜಿ, ಸ್ವಾಮಿ ಬ್ರಹ್ಮಾನಂದರು, ಸ್ವಾಮಿ ವಿರಜಾನಂದರು, ಸ್ವಾಮಿ ಸುರೇಶ್ವರಾನಂದರು ಮೊದಲ ದಿನದಂದು ಶಾಲೆಗೆ ಭೇಟಿ ನೀಡಿದರು.

ವಿಜ್ಞಾನಿ ಜಗದೀಶಚಂದ್ರ ಬೋಸ್‌ನೊಂದಿಗೆ ನಿವೇದಿತಾ ನಿಕಟ ಸಂಪರ್ಕ ಹೊಂದಿದ್ದಳು. ಅವರು ಪ್ಯಾರಿಸ್‌ನಲ್ಲಿ ತಮ್ಮ ಸಂಶೋಧನೆಗೆ ಬಹಳ ದೊಡ್ಡ ಪುರಸ್ಕಾರವನ್ನೇ ಪಡೆದಿದ್ದರು. ಆದರೆ, ಇಂಗ್ಲೆಂಡಿನಲ್ಲಿ ಪರಿಸ್ಥಿತಿ ಇದಕ್ಕೆ ವಿಪರೀತವಾಗಿದ್ದಿತು! ಇಂಗ್ಲೆಂಡಿನ ಪ್ರಸಿದ್ಧ ವಿಜ್ಞಾನಿಗಳೆಲ್ಲರೂ ದಾಸ್ಯ ರಾಷ್ಟ್ರವೊಂದರ ವ್ಯಕ್ತಿಯೊಬ್ಬ ಇಷ್ಟು ದೊಡ್ಡ ಸಾಧನೆ ಮಾಡಿದ್ದನ್ನು ನೋಡಿ ಸಹಿಸದಾದರು. ಬೋಸ್ ಮೇಲೆ ಬರದಂತೆ ಅವರನ್ನು ತುಳಿಯಲು ಆ ವಿಜ್ಞಾನಿಗಳೆಲ್ಲ ಒಟ್ಟಾದರು. ಬೋಸ್‌ರಿಗೆ ಆದ ಅವಮರ್ಯಾದೆಯಿಂದ ನಿವೇದಿತಾ ಕಿಡಿಕಿಡಿಯಾದಳು. ಭಾರತೀಯರಿಗೆ ಇಂಗ್ಲೆಂಡಿನಲ್ಲಿ ಯಾವ ಸಹಾನುಭೂತಿಯೂ ಇರಲಿಲ್ಲವೆಂಬುದನ್ನೂ ಮನಗಂಡಳು. ಭಾರತವು ರಾಜಕೀಯ ಸ್ವಾತಂತ್ರ್ಯ ಗಳಿಸದಿದ್ದರೆ, ಯಾರೂ ಅವಳ ಸಾಧನೆಗಳನ್ನು ಗಮನಿಸಲಾರರೆಂಬ ವಿಷಯ ದೃಢವಾಗಿ ಬೇರೂರಿತು ನಿವೇದಿತಾಳ ಮನದಲ್ಲಿ. ಸ್ವಾಮೀಜಿಗೂ ತನ್ನ ಈ ಅಭಿಪ್ರಾಯವನ್ನು ತಿಳಿಸಿದಳು. ಸ್ವಾಮೀಜಿಗೂ ಗೊತ್ತಿತ್ತು, ಯಾವುದಾದರೂ ಚಿಂತನೆ ಒಮ್ಮೆ ನಿವೇದಿತಾಳ ಮನಸ್ಸಿನಲ್ಲಿ ಹೊಕ್ಕಿತು ಎಂದರೆ ಅದನ್ನು ಅವಳು ಕಾರ್ಯಗತ ಮಾಡದೆ ಬಿಡಲಾರಳು ಎಂದು.

ಅವರು ಅದಕ್ಕೆ ತಮ್ಮ ಸಮ್ಮತಿಯನ್ನೂ ಸೂಚಿಸಲಿಲ್ಲ, ಅಸಮ್ಮತಿಯನ್ನೂ ಸೂಚಿಸಲಿಲ್ಲ. ಆದರೆ ರಾಮಕೃಷ್ಣ ಮಹಾಸಂಘದ ಕಟ್ಟುಕಟ್ಟಳೆಗಳಲ್ಲಿ ಸಂಘದ ಯಾವುದೇ ಸದಸ್ಯ ರಾಜಕೀಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದನ್ನು, ತನ್ನನ್ನು ಯಾವುದೇ ಪಕ್ಷಕ್ಕೆ ಗುರುತಿಸಿಕೊಳ್ಳುವುದನ್ನು ನಿಷೇಧಿಸಲಾಗಿತ್ತು. ನಿವೇದಿತಾ ಅನೇಕ ರಾಜಕೀಯ ನಾಯಕರನ್ನು ಭೇಟಿ ಮಾಡುತ್ತಿದ್ದುದು, ಪ್ರಸ್ತುತ ರಾಷ್ಟ್ರದ ರಾಜಕೀಯ ಚಟುವಟಿಕೆಗಳಲ್ಲಿ ಅವಳ ಆಸಕ್ತಿ, ಅವಳಿಗೂ ಮತ್ತು ಮಠದ ಮೇಲ್ವಿಚಾರಕರಿಗೂ ಹೊಸ ಸಮಸ್ಯೆಯನ್ನೇ ಉಂಟು ಮಾಡಿತು. ಮಠದ ಮೇಲ್ವಿಚಾರಕರು ನಿವೇದಿತೆಗೆ ಅವಳ ರಾಜಕೀಯ ಸಂಬಂಧಗಳ ಬಗ್ಗೆ ಗಂಭೀರವಾಗಿ ಆಲೋಚಿಸುವಂತೆ ಸಲಹೆಯಿತ್ತರು. ಅದಾಗಲೇ ಸ್ವಾಮೀಜಿ ತಮ್ಮ ಇಹಲೋಕದ ಲೀಲೆಯನ್ನು ಮುಗಿಸಿ ಕಣ್ಮರೆಯಾಗಿದ್ದರು. ಜುಲೈ ೧೧ರಂದು ಮಠಕ್ಕೆ ಬಂದ ನಿವೇದಿತಾ ಸ್ವಾಮಿ ಬ್ರಹ್ಮಾನಂದ ಹಾಗೂ ಸ್ವಾಮಿ ಶಾರದಾನಂದರ ಜೊತೆಗೆ ದೀರ್ಘಕಾಲ ಚರ್ಚೆ ನಡೆಸಿದಳು. ಆಗ ಆಕೆ ಯಾವ ನಿರ್ಧಾರಕ್ಕೂ ಬರಲಿಲ್ಲ. ಒಂದೆಡೆ ಶ್ರೀರಾಮಕೃಷ್ಣರ ಹೆಸರಿನಲ್ಲಿ ತನ್ನ ಗುರುವಿನಿಂದಲೇ ಸ್ಥಾಪನೆಗೊಂಡ ಸಂಘ, ತಮ್ಮ ಗುರುವಿನಷ್ಟೇ ಪ್ರೀತಿಗೆ ಪಾತ್ರರಾಗಿದ್ದ ಸ್ವಾಮಿ ಬ್ರಹ್ಮಾನಂದರೇ ಮೊದಲಾದ ಸ್ವಾಮಿಗಳು, ಇನ್ನೊಂದೆಡೆ ತನ್ನ ಹೃದಯದ ತುಡಿತ. ಆಕೆ ಸಂಘದ ನಿಯಮಗಳಿಂದ ಕಟ್ಟಲ್ಪಟ್ಟು ಕುಳಿತುಕೊಳ್ಳಲೂ ಬಯಸಲಿಲ್ಲ. ಭಾರತವು ಮತ್ತೊಮ್ಮೆ ಹಿಂದಿನ ಶ್ರೇಷ್ಠತೆಗೇರುವುದು, ಸಶಕ್ತವಾಗಿ ಜಗತ್ತಿನಲ್ಲಿ ಬೆಳಗುವುದು ಸ್ವಾಮೀಜಿಯವರ ಕನಸಾಗಿತ್ತು. ಆ ಕನಸನ್ನು ನನಸು ಮಾಡಬೇಕಾದರೆ ಮೊದಲು ಅವಳ ಮಕ್ಕಳಲ್ಲಿ ರಾಷ್ಟ್ರಜಾಗೃತಿಯನ್ನು ತರಬೇಕಲ್ಲವೆ? ವರ್ಷಗಳ ಹಿಂದೆ ಸ್ವಾಮೀಜಿ ಆಕೆಯ ಎದುರು ಹೇಳಿದ್ದರು, ''ನನ್ನ ಧ್ಯೇಯ ನನ್ನ ಜನರಲ್ಲಿ ರಾಮಕೃಷ್ಣರನ್ನು ಅಥವಾ ವೇದಾಂತವನ್ನು ಹರಡುವುದಲ್ಲ, ಬದಲಾಗಿ ಮನುಷ್ಯತ್ವವನ್ನು ಅವರಲ್ಲಿ ತುಂಬುವುದು''. ನಿವೇದಿತೆ ತಕ್ಷಣ ''ನಿಮಗೆ ನಾನು ಸಹಾಯ ಮಾಡುತ್ತೇನೆ'' ಎಂದು ಪ್ರತಿಜ್ಞೆ ಮಾಡಿದ್ದಳು. ಸ್ವಾಮೀಜಿ ಗಂಭೀರವಾಗಿ ''ನನಗದು ಗೊತ್ತು'' ಎಂದಿದ್ದರು. ಬ್ರಹ್ಮಾನಂದರು ಆಕೆಗೆ ಪುನಃ ಆಕೆಯ ನಿಲುವನ್ನು ಕುರಿತು ಪತ್ರ ಬರೆದರು. ನಿವೇದಿತಾ ಜುಲೈ ೧೮ರಂದು ಸ್ವಾಮಿ ಬ್ರಹ್ಮಾನಂದರಿಗೆ ಪತ್ರ ಬರೆದು, ತಾನು ಮಠದಿಂದ ಸ್ವತಂತ್ರಳಾಗುವ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು. ಜುಲೈ ೧೯ರ 'ಅಮೃತ ಬಜ಼ಾರ್ ಪತ್ರಿಕಾ' ಭವಿಷ್ಯದಲ್ಲಿ ನಿವೇದಿತಾಳು ಸ್ವತಂತ್ರವಾಗಿ ಕೆಲಸ ಮಾಡುತ್ತಾಳೆಂದು ಪ್ರಕಟಿಸಿತು. ಆದರೆ, ಪತ್ರಿಕೆಯು ಸುದ್ದಿಯನ್ನು ಪ್ರಕಟಿಸುವಲ್ಲಿ ತನ್ನ ಅಧಿಕ ಪ್ರಸಂಗತನವನ್ನೂ ತೋರಿಸಿತ್ತು! ಸೋದರಿ ನಿವೇದಿತಾಳು ಸಂಘದ ಮುಖ್ಯಸ್ಥೆಯಾಗಲು ಅರ್ಹಳೆಂದೂ, ಸ್ವಾಮಿ ವಿವೇಕಾನಂದರೂ ಹಾಗೆಯೇ ಬಯಸಿದ್ದರೆಂದೂ ಪ್ರಕಟಿಸಿಬಿಟ್ಟಿತ್ತು! ನಿವೇದಿತಾ ಇದರಿಂದ ಕ್ಷುಬ್ಧಳಾದಳು. ಜುಲೈ ೨೮ರಂದು ಆಕೆ The Statesman ಪತ್ರಿಕೆಯ ಸಂಪಾದಕರಿಗೆ ತನಗೂ ಸಂಘಕ್ಕೂ ಇರುವ ಸಂಬಂಧವನ್ನು ವ್ಯಕ್ತಪಡಿಸುವ ಹೇಳಿಕೆಯನ್ನು ಕೊಟ್ಟಳು. ''ಹಿಂದೂಗಳ ಧಾರ್ಮಿಕ ಜೀವನಕ್ಕೆ ಮಾರ್ಗದರ್ಶನ ನೀಡಲು ಯೂರೋಪಿನ ನಾಯಕರು ಬೇಕೆಂದು ತಿಳಿದುಕೊಳ್ಳುವುದಕ್ಕಿಂತಲೂ ಖಂಡನಾರ್ಹ ತಪ್ಪು ಇನ್ನೊಂದಿಲ್ಲವೆಂಬುದೇ ನನ್ನ ಅಭಿಪ್ರಾಯ'' ಎಂಬ ಮಾರ್ಮಿಕ ನುಡಿಯಿಂದ ಐರೋಪ್ಯ ಮನಸ್ಸಿನವರಿಗೆ ಚಾಟಿ ಬೀಸಿದ್ದಳು ನಿವೇದಿತಾ.

ಸಂಘದ ಸದಸ್ಯಳಾಗಿರುವವರೆಗೂ 'ರಾಮಕೃಷ್ಣ ಮಹಾಸಂಘದ ನಿವೇದಿತಾ' ಎಂದು ಸಹಿ ಹಾಕುತ್ತಿದ್ದ ಆಕೆ, ನಂತರ 'ರಾಮಕೃಷ್ಣರ ನಿವೇದಿತಾ' ಎಂದೂ, ಕಡೆಯಲ್ಲಿ 'ರಾಮಕೃಷ್ಣ-ವಿವೇಕಾನಂದರ ನಿವೇದಿತಾ' ಎಂದೂ ತನ್ನ ಸಹಿಯನ್ನು ಬದಲಿಸಿದಳು. ಸಂಘದ ಸದಸ್ಯತ್ವದಿಂದ ತಾನು ಹೊರಗುಳಿದರೂ ಅವಳ ಹಾಗೂ ಸಂಘದ ಸಂನ್ಯಾಸಿಗಳ ಬಾಂಧವ್ಯ ಸ್ವಲ್ಪವೂ ಕಡಿಮೆಯಾಗಲಿಲ್ಲ. ೧೯೦೨, ಆಗಸ್ಟ್‌ನಲ್ಲಿ ನಿವೇದಿತಾ ಖಾಯಿಲೆ ಬಿದ್ದಾಗ, ಈ ಸುದ್ದಿ ಬೇಲೂರು ಮಠವನ್ನು ಮುಟ್ಟಿತು. ಕೂಡಲೇ ಅವಳನ್ನು ಕಾಣಲು ಸ್ವಾಮಿ ಬ್ರಹ್ಮಾನಂದರು ಮತ್ತು ಸ್ವಾಮಿ ಶಾರದಾನಂದರು ಬಂದರು. ಅವಳ ಆರೈಕೆ ಮಾಡಿದರು. ಜನಜಾಗೃತಿ ಮಾಡುವ ಉದ್ದೇಶದಿಂದ ನಿವೇದಿತಾ ಭಾರತದ ಉದ್ದಗಲಕ್ಕೂ ಸಂಚರಿಸಲು ನಿಶ್ಚಯಿಸಿ, ನಾಗಪುರದ ಮೂಲಕ ಬೊಂಬಾಯಿಗೆ ಹೊರಟಾಗ ಸ್ವಾಮಿ ಶಾರದಾನಂದರೂ ಆಕೆಯ ಜೊತೆಗೂಡಿದರು. ಇದರಿಂದ ಅವರು ನಿವೇದಿತಾಗೆ ಬಲದ ಹಾಗೂ ಉತ್ಸಾಹದ ಸೆಲೆಯೇ ಆದರು. ನಿವೇದಿತಾ ಮದ್ರಾಸಿಗೆ ಹೊರಟಾಗ ಸ್ವಾಮಿ ಸದಾನಂದರು ಹಾಗೂ ಬ್ರಹ್ಮಚಾರಿ ಅಮೂಲ್ಯ (ಮುಂದೆ ಸ್ವಾಮಿ ಶಂಕರಾನಂದರು, ಮಹಾಸಂಘದ ಏಳನೆಯ ಪರಮಾಧ್ಯಕ್ಷರು) ಇದ್ದರು. ಮದ್ರಾಸಿನಲ್ಲಿ ನಿವೇದಿತಾ ಕ್ಯಾಸಲ್ ಕರ್ನನ್ (ಮದ್ರಾಸಿನ ಹಿಂದಿನ ರಾಮಕೃಷ್ಣ ಮಠ) ನಲ್ಲಿಯೇ ಉಳಿದುಕೊಂಡಳು. ಸ್ವಾಮಿ ರಾಮಕೃಷ್ಣಾನಂದರು ತಮ್ಮ ವಿದ್ಯಾರ್ಥಿಗಳೊಂದಿಗೆ ನಿವೇದಿತಾಳ ಪ್ರತಿಯೊಂದು ಕಾರ್ಯಕ್ರಮಕ್ಕೂ ಹಾಜರಾಗಿ ಅವಳಿಗೆ ಉತ್ತೇಜನ ನೀಡಿದರು.

೧೯೦೪ರಲ್ಲಿ, ಸ್ವಾಮಿ ವಿವೇಕಾನಂದರ ಜೀವನಚರಿತ್ರೆಯನ್ನು ಇಂಗ್ಲೀಷಿನಲ್ಲಿ ಬರೆಯಬೇಕೆಂದು ಸ್ವಾಮಿ ಬ್ರಹ್ಮಾನಂದರು ನಿವೇದಿತಾಳನ್ನು ಕೇಳಿಕೊಂಡರು. ಅದರಂತೆ ಆಕೆ '**ನಾ ಕಂಡಂತೆ ನನ್ನ ಗುರುದೇವ**' (The Master as I saw Him) ಎಂಬ ಅದ್ಭುತ ಗ್ರಂಥವನ್ನು ರಚಿಸಲು ಆರಂಭಿಸಿದಳು. ಆ ಮಹಾನ್ ಚೇತನದ ಬಹುಮುಖಿ, ಉಜ್ಜ್ವಲ ವ್ಯಕ್ತಿತ್ವಕ್ಕೆ ಧಕ್ಕೆಯಾಗದಂತೆ ಅದನ್ನು ಯಥಾವತ್ತಾಗಿ ಚಿತ್ರಿಸುವುದು ಅಸಾಧ್ಯವೆಂದೇ ಆಕೆಗೆ ಮೊದಮೊದಲಿಗೆ ತೋರಿತು.



ಸ್ವಾಮೀಜಿಯವರ ಸಮಗ್ರ ವ್ಯಕ್ತಿತ್ವವನ್ನು ಬಿಂಬಿಸುವಲ್ಲಿ ತಾನು ಅಸಮರ್ಥಳು ಎಂಬುದನ್ನು ಅರಿತ ನಿವೇದಿತಾ, ಕೊನೆಗೆ ತನ್ನ ಆಯಾಮದಿಂದ ಸ್ವಾಮೀಜಿಯವರನ್ನು ಚಿತ್ರಿಸಿದಳು. ಕೊನೆಗೂ ೫ ವರ್ಷಗಳ ನಂತರ ಗ್ರಂಥರಚನೆ ಮುಗಿಯಿತು. ಫೆಬ್ರುವರಿ ೧, ೧೯೧೦ರಂದು ಸ್ವಾಮಿ ವಿವೇಕಾನಂದರ ಜನ್ಮದಿನೋತ್ಸವದಂದು ಆ ಗ್ರಂಥ ಬಿಡುಗಡೆಯಾಯಿತು. ಆ ದಿನದಂದು ಆಕೆ ಗ್ರಂಥವನ್ನು ಬೇಲೂರು ಮಠಕ್ಕೆ ತೆಗೆದುಕೊಂಡು ಹೋಗಿ ಸ್ವಾಮಿ ವಿವೇಕಾನಂದರು ವಾಸಿಸುತ್ತಿದ್ದ ಕೋಣೆಯಲ್ಲಿಟ್ಟಳು. ಸಾರಸ್ವತ ಲೋಕದಲ್ಲಿ ಅದೊಂದು ಮೇರುಕೃತಿಯೆನಿಸಿಕೊಂಡಿತು. ಸ್ವಾಮಿ ಶಾರದಾನಂದರು ಆ ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ಹೇಳುತ್ತಾರೆ, ''ಈ ಗ್ರಂಥವನ್ನು ಜಗತ್ತಿಗೆ ಸಮರ್ಪಿಸುವುದರ ಮೂಲಕ ತನ್ನ ಗುರುದೇವರಿಗೆ ತನ್ನ ಪ್ರೀತಿ ಹಾಗೂ ಕೃತಜ್ಞತೆಗಳ ಕಾಣಿಕೆಯನ್ನು ಸಲ್ಲಿಸಿರುವ ನಿವೇದಿತಾಳ ಮೇಲೆ ಸ್ವಾಮೀಜಿಯವರ ಎಲ್ಲ ಸೋದರರ ಆಶೀರ್ವಾದ ಹಾಗೂ ಶುಭ ಹಾರೈಕೆಗಳಿರುತ್ತವೆ'' ಎಂದು. ನಿವೇದಿತಾ, ಸ್ವಾಮಿ ವಿವೇಕಾನಂದರು ಇಂಗ್ಲೆಂಡಿನಲ್ಲಿ ಮಾಡಿದ 'ರಾಜಯೋಗ' ಉಪನ್ಯಾಸಗಳ ಸರಣಿ, 'ಕರ್ಮಯೋಗ', 'ಜ್ಞಾನಯೋಗ' ಉಪನ್ಯಾಸಗಳನ್ನು ಗ್ರಂಥರೂಪದಲ್ಲಿ ತರಲು ಬೇಲೂರು ಮಠಕ್ಕೆ ಸಹಾಯ ಮಾಡಿದಳು. ಹಾಗೆ The Life of Swami Vivekananda by His Eastern and Western Disciples ಎಂಬ ಗ್ರಂಥಕ್ಕೂ ವಿಷಯ ಸಂಗ್ರಹಣೆ ಮಾಡಿಕೊಟ್ಟಳು. ಜುಲೈ೪, ೧೯೦೭ರಂದು ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ (The Complete Works of Swami Vivekananda) ಗೆ Our Master and His Message ಎಂಬ ಶೀರ್ಷಿಕೆಯಡಿಯಲ್ಲಿ ಸುವಿಸ್ತಾರವಾದ ಪರಿಚಯವನ್ನು ಬರೆದಳು. ೧೯೦೬ರಲ್ಲಿ ಸ್ವಾಮಿ ಸ್ವರೂಪಾನಂದರು ದೇಹತ್ಯಾಗ ಮಾಡಿದ ಮೇಲೆ ನಿವೇದಿತಾ ಬಹುತೇಕ ತನ್ನ ಮರಣದವರೆಗೂ, ಅಂದರೆ ೧೯೧೧ರ ತನಕ '**ಪ್ರಬುದ್ಧ ಭಾರತ**' ಮಾಸಪತ್ರಿಕೆಗೆ ಪ್ರತಿ ತಿಂಗಳೂ occasional notes ಕಿರುಶೀರ್ಷಿಕೆಯಡಿ ಬರೆಯುತ್ತಿದ್ದಳು. ಈ ಸಮಯದಲ್ಲಿ ಆಕೆ ಮಾಯಾವತಿಯ ಅದ್ವೈತ ಆಶ್ರಮದಲ್ಲಿ ಮಿಸೆಸ್ ಸೇವಿಯರ್‌ಳ ಅತಿಥಿಯಾಗಿ ಕಳೆದಳು. ೧೯೧೧ ಜೂನ್ ೧೮ರಂದು ಮಾಯಾವತಿಯ ಅದ್ವೈತ ಆಶ್ರಮದ ಸಾಧು-ಬ್ರಹ್ಮಚಾರಿಗಳನ್ನುದ್ದೇಶಿಸಿ 'ಬೌದ್ಧಿಕ ಸಂಸ್ಕೃತಿ' ಎಂಬ ವಿಷಯದ ಮೇಲೆ ಮಾತನಾಡುತ್ತ ಲೌಕಿಕ ಹಾಗೂ ಧಾರ್ಮಿಕ ಜ್ಞಾನಸಂಸ್ಕೃತಿಗಳಲ್ಲಿ ಭೇದವನ್ನು ನೋಡಬಾರದೆಂಬ ಅಂಶವನ್ನು ಒತ್ತಿ ಹೇಳಿದಳು.

೧೯೧೦ರಲ್ಲಿ ನಿವೇದಿತಾ ಸಪತ್ನೀಕ ಜಗದೀಶಚಂದ್ರ ಬಸು ಮತ್ತಿತರರ ಜೊತೆಗೆ ಕೇದಾರನಾಥಕ್ಕೆ ತೀರ್ಥಯಾತ್ರೆಗೆ ಹೋಗುವ ಸಮಯದಲ್ಲಿ ಕನ್‌ಖಲ್ ರಾಮಕಷ್ಣ ಮಿಷನ್ನಿಗೂ ಹೋಗಿ ಸ್ವಾಮಿ ಕಲ್ಯಾಣಾನಂದರನ್ನು ಭೇಟಿ ಮಾಡಿದಳು. ಸ್ವಾಮಿ ವಿವೇಕಾನಂದರ ನಿರ್ಯಾಣದ ನಂತರ ಸ್ವಾಮಿ ಸದಾನಂದರು ನಿವೇದಿತಾಗೆ ತಮ್ಮ ಕೊನೆಯುಸಿರಿರುವವರೆಗೂ ಒಬ್ಬ ಮಾರ್ಗದರ್ಶಿಯಾಗಿ, ಸ್ನೇಹಿತರಾಗಿ, ಉತ್ತಮ ಸಲಹೆಗಾರರಾಗಿದ್ದರು. ಅವರು ದೇಹತ್ಯಾಗ ಮಾಡಿದಾಗ ನಿವೇದಿತಾ ಹತಾಶಳಾದಳು. ಪ್ಲೇಗ್ ಪರಿಹಾರ ಕಾರ್ಯದಿಂದ ಹಿಡಿದು ಆಕೆಯ ಉಪನ್ಯಾಸ ಪ್ರವಾಸಕ್ಕಾಗಿ ಬೊಂಬಾಯಿ, ಪಟ್ನಾ, ಮದ್ರಾಸ್ ಮತ್ತು ವಾರಾಣಸಿಗಳಿಗೆ ಹೋದಾಗ ಸದಾನಂದರೂ ಆಕೆಯ ಜೊತೆಗೇ ಇದ್ದರು. ಅವರು ಕಾಯಿಲೆ ಬಿದ್ದಾಗ ತನ್ನ ಮನೆಯ ಹತ್ತಿರದಲ್ಲೇ ಇನ್ನೊಂದು ಮನೆಯನ್ನು ಬಾಡಿಗೆಗೆ ಪಡೆದು ಅದರಲ್ಲಿ ಸ್ವಾಮಿಗಳ ಆರೈಕೆಗೆ ಎಲ್ಲ ವ್ಯವಸ್ಥೆಯನ್ನು ಮಾಡಿದ್ದಳು. ಪ್ರತಿದಿನವೂ ಅವರ ಆರೋಗ್ಯವನ್ನು ವಿಚಾರಿಸುತ್ತಿದ್ದಳು.

ಏಪ್ರಿಲ್ ೧೯೧೧ರಲ್ಲಿ ಒಂದು ದಿನ ನಿವೇದಿತಾ ಬೇಲೂರು ಮಠಕ್ಕೆ ಹೋಗಿ ಸ್ವಾಮಿ ಬ್ರಹ್ಮಾನಂದ, ಸ್ವಾಮಿ ತುರೀಯಾನಂದರನ್ನು ಭೇಟಿ ಮಾಡಿದಳು. ಸ್ವಾಮೀಜಿಯ ಕೋಣೆಯೊಳಗೆ ಮೌನವಾಗಿ ಧ್ಯಾನ ಮಾಡಿದಳು. ಆಗ ಅವಳಿಗೆ ತನ್ನ ಕೊನೆ ಸಮೀಪಿಸುತ್ತಿರುವುದರ ಮುನ್ಸೂಚನೆ ಸಿಕ್ಕಿತು. ನಿವೇದಿತಾ ೧೯೧೧, ಅಕ್ಟೋಬರ್ ೧೩ರಂದು ಡಾರ್ಜಿಲಿಂಗಿನಲ್ಲಿ ದೇಹತ್ಯಾಗ ಮಾಡಿದಳು. ರಾಮಕೃಷ್ಣ ಮಹಾಸಂಘದ ಗಣೇನ್ ಮಹಾರಾಜರು ಆಕೆಯ ಪುಣ್ಯಶರೀರದ ಅಂತ್ಯ ಸಂಸ್ಕಾರ ನಡೆಸಿದರು ಎಂದು ತಿಳಿದು ಬರುತ್ತದೆ.

ನಿವೇದಿತಾಳ ದೇಹತ್ಯಾಗದ ಸುದ್ದಿಯನ್ನು ರಾಮಕೃಷ್ಣ ಮಹಾಸಂಘದ ಇಂಗ್ಲೀಷ್ ಹಾಗೂ ಬಂಗಾಲಿ ಎರಡೂ ಮಾಸಪತ್ರಿಕೆಗಳು– **ಪ್ರಬುದ್ಧಭಾರತ** ಮತ್ತು **ಉದ್ಬೋಧನ್** ಶೋಕಸಂತಾಪ ವ್ಯಕ್ತಪಡಿಸಿ ಬರೆದಿದ್ದವು. ಆಕೆ ದೇಹತ್ಯಾಗ ಮಾಡುವ ಮುನ್ನ ತನ್ನ ವಿಲ್‌ನಲ್ಲಿ ಬೆಂಗಾಲ್ ಬ್ಯಾಂಕಿನಲ್ಲಿದ್ದ ೩೦೦ಪೌಂಡುಗಳು ಮತ್ತು ತನ್ನ ಪುಸ್ತಕಗಳ ಮಾರಾಟದಿಂದ ಬಂದ ಹಣವನ್ನು ಬೇಲೂರು ಮಠಕ್ಕೆ ಬರೆದಿದ್ದಳು. ಅದನ್ನವರು ದೀರ್ಘಕಾಲಿಕ ನಿಧಿಯನ್ನಾಗಿ ಇಟ್ಟು ಅದರಿಂದ ಬರುವ ಆದಾಯದಿಂದ ಭಾರತದ ಮಹಿಳೆಯರ ಶಿಕ್ಷಣಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಬರೆದಿದ್ದಳು. ಆಕೆ ಬಿಟ್ಟು ಹೋದ ಹಣವು ಆಕೆಯ ಶಾಲೆಯನ್ನು ನಡೆಸುವಲ್ಲಿ ಯಾವ ರೀತಿಯಿಂದಲೂ ಸಾಕಾಗುತ್ತಿರಲಿಲ್ಲ. ಅವಳು ನಡೆಸುತ್ತಿದ್ದ ಶಾಲೆಗೆ ಸರಿಯಾಗಿ ಯಾವ ಹೆಸರೂ ಇರಲಿಲ್ಲ. ಆಕೆಯ ಕಾಲವಾದ ನಂತರ ೧೯೧೮ರಂದು ಅದನ್ನು ರಾಮಕೃಷ್ಣ ಮಿಷನ್ ಸ್ವಾಧೀನಕ್ಕೆ ತೆಗೆದುಕೊಂಡು 'The Ramakrishna Mission Sister Nivedita Girls School' ಎಂದು ನಾಮಕರಣ ಮಾಡಿತು. ಆಕೆ ತನ್ನ ಗ್ರಂಥಗಳ ಪ್ರಕಾಶನದ ಹಕ್ಕನ್ನು ಮೆಸ್ಸರ್ಸ್ ಲಾಂಗ್‌ಮೆನ್ ಗ್ರೀನ್ ಅಂಡ್ ಕಂಪನಿಗೆ ಕೊಟ್ಟಿದ್ದಳು. ಅವರು ಈ ಗ್ರಂಥಗಳ ಪ್ರಕಾಶನದಲ್ಲಿ ಅಷ್ಟೇನೂ ಲಾಭವಿಲ್ಲದುದನ್ನು ಕಂಡು ಪುಸ್ತಕಗಳ ಪ್ರಕಾಶನವನ್ನು ನಿಲ್ಲಿಸಿಬಿಟ್ಟಿದ್ದರು. ಕೊನೆಗೆ ಮಾಯಾವತಿಯ ಅದ್ವೈತ ಆಶ್ರಮವು ತಾನೇ ಆಕೆಯ ಗ್ರಂಥಗಳನ್ನು ನಿವೇದಿತಾಳ ವಿದ್ಯಾಲಯದಿಂದ ಪ್ರಕಟಿಸುವ ಹೊಣೆ ಹೊತ್ತು ಪ್ರಕಟಿಸಿತು. ೧೯೫೨ರಲ್ಲಿ ನಿವೇದಿತಾಳ ಶಾಲೆಯ ಸ್ವರ್ಣ ಮಹೋತ್ಸವದ ಅಂಗವಾಗಿ ನಿವೇದಿತಾಳ ಸ್ಮೃತಿಸಭೆಯನ್ನು ಭಾರತ ಹಾಗೂ ಲಂಡನ್‌ಗಳಲ್ಲಿ ಆಯೋಜಿಸಲಾಯಿತು. ಹಾಗೆಯೇ ಸಂಘವು ನಿವೇದಿತಾಳ ಸ್ಮೃತಿಯನ್ನು ಸಂರಕ್ಷಿಸುವುದಕ್ಕೋಸ್ಕರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲೆಂದೇ ಕೊಲ್ಕತ್ತ ವಿಶ್ವವಿದ್ಯಾಲಯಕ್ಕೆ ೫,೦೦೦ ರೂಪಾಯಿಗಳನ್ನು ಸಮರ್ಪಿಸಿತು. 

# ಹಿಂದೂ ಧರ್ಮ ಮತ್ತು ಸಂಸ್ಕೃತಿ ಕುರಿತು ನಿವೇದಿತಾ

**ಡಾ. ಕೆ.ಎಲ್.ಪ್ರಸನ್ನಾಕ್ಷೀ**



**ಸೋದರಿ ನಿವೇದಿತಾ ಪಾಶ್ಚಾತ್ಯ ಮಹಿಳೆಯಾಗಿದ್ದರೂ, ಸ್ವಾಮೀಜಿಯವರ ಸಂಪರ್ಕ ಹಾಗೂ ಮಾರ್ಗದರ್ಶನದಿಂದ ಭಾರತೀಯ ಪರಂಪರೆ, ಹಿಂದೂಧರ್ಮ, ಸಂಸ್ಕೃತಿ ಹಾಗೂ ಆಧ್ಯಾತ್ಮಿಕತೆಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಳು. ಆತ್ಮಸಮರ್ಪಣೆಯಿಂದ ಅಪ್ಪಟ ಭಾರತೀಯಳೇ ಆದರೂ, ಪಾಶ್ಚಾತ್ಯ ದೃಷ್ಟಿಕೋನದಿಂದ ಇಲ್ಲಿನ ಧರ್ಮ, ಸಂಸ್ಕೃತಿಗಳನ್ನು ಆಕೆ ಕಂಡ ಬಗೆಯಲ್ಲಿ ಒಂದು ವಿಶೇಷತೆಯಿದೆ. ಈ ವಿಷಯವನ್ನು ಕುರಿತು ಚರ್ಚಿಸಿರುವ ಲೇಖಕಿ ಮೈಸೂರು ಮಹಾರಾಣಿ ಕಾಲೇಜಿನ ನಿವೃತ್ತ ಪ್ರಾಂಶುಪಾಲರು. ಸಂಸ್ಕೃತ ವ್ಯಾಸಂಗ, ಶಾಸ್ತ್ರ ಹಾಗೂ ಆಧ್ಯಾತ್ಮಿಕ ಕೃತಿಗಳಲ್ಲಿ ವಿಶೇಷ ಅಧ್ಯಯನ ಮಾಡಿರುವ ಅವರು ಮೈಸೂರು ಆಶ್ರಮದ ಭಕ್ತರು. ದೀರ್ಘಕಾಲದಿಂದ ಅವರು 'ವಿವೇಕಪ್ರಭ' ಪತ್ರಿಕೆಯಲ್ಲಿ ಹಲವು ಲೇಖನಗಳನ್ನು ಬರೆದಿದ್ದಾರೆ.**

**ಛಾಯಾಮನ್ಯಸ್ಯ ಕುರ್ವಂತಿ ತಿಷ್ಠಂತಿ ಸ್ವಯಮಾತಪೇ ।**
**ಫಲಾನ್ಯಪಿ ಪರಾರ್ಥಾಯ ವೃಕ್ಷಾಃ ಸತ್ಪುರುಷಾ ಇವ ॥**

'ಸ್ವತಃ ತಾವು ಬಿಸಿಲಿನಲ್ಲಿ ನಿಂತುಕೊಂಡರೂ ಇತರರಿಗೆ ನೆರಳನ್ನು ಕೊಡುತ್ತವೆ; ತಮ್ಮ ಹಣ್ಣುಗಳನ್ನೂ ಇತರರಿಗಾಗಿಯೇ ನೀಡುತ್ತವೆ. ಇಂತಹ ಮರಗಳು ಸತ್ಪುರುಷರಂತೆ' ಎನ್ನುತ್ತದೆ ಒಂದು ಸುಭಾಷಿತ.

ತನಗೆ ಸಂಬಂಧಿಸಿದ ಎಲ್ಲಾ ಐಶ್ವರ್ಯವನ್ನೂ, ಶರೀರ ಬುದ್ಧಿ ಮನಸ್ಸುಗಳನ್ನೂ, ತನ್ನದಲ್ಲದ ತನ್ನವರಲ್ಲದವರ ಸರ್ವತೋಮುಖ ಅಭಿವೃದ್ಧಿಗಾಗಿ ಅರ್ಪಿಸಿಕೊಂಡು ಕರ್ಪೂರದಂತೆ ಬೆಳಗಿದ ನಿಸ್ವಾರ್ಥ ಪ್ರಭೆ, ಪ್ರತಿಭೆ ಸೋದರಿ ನಿವೇದಿತಾ. ಇಂತಹ ಅಪೂರ್ವ ತ್ಯಾಗದ ಮತ್ತೊಂದು ನಿದರ್ಶನವಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಪ್ರಾಕೃತಿಕ ಪರಿಸರ-ವಾತಾವರಣ, ಆಹಾರ-ವಿಹಾರ-ವ್ಯವಹಾರ, ವೇಷ-ಭೂಷಣ-ಸಂಪ್ರದಾಯ ಮೊದಲಾದ ಸಮಸ್ತವೂ ಸಂಪೂರ್ಣ ಭಿನ್ನವೇ ಆದಂತಹ ಪರಿಸರಕ್ಕೆ ಬಂದು ಎಲ್ಲಕ್ಕೂ ತನ್ನನ್ನು ಒಗ್ಗಿಸಿಕೊಂಡು, ಹೆಸರು, ಕೀರ್ತಿ, ಅಧಿಕಾರ, ಐಶ್ವರ್ಯ ಸನ್ಮಾನ ಮೊದಲಾದ ಯಾವ ಐಹಿಕ ಕಾಮನೆಗಳೂ ಇಲ್ಲದೆ ಭಾರತದ ಪ್ರಗತಿಗೆ ದುಡಿದು ತನ್ನ ಸಮಸ್ತವನ್ನೂ ತ್ಯಾಗ ಮಾಡಿದ ಅನಂತ ಕೀರ್ತಿಗೆ ಭಾಜನಳಾದ ಮಹಾಮಹಿಮಳು ಸೋದರಿ ನಿವೇದಿತಾ.

ಇಂತಹ ಅಪೂರ್ವ ವೈಶಿಷ್ಟ್ಯದೊಡಗೂಡಿದ ಅನರ್ಘ್ಯರತ್ನವನ್ನು ಭರತಖಂಡಕ್ಕೆ ತಂದ ಕೀರ್ತಿ ಸ್ವಾಮಿ ವಿವೇಕಾನಂದರದು. ಭಾರತೀಯ ಧರ್ಮ ಮತ್ತು ಸಂಸ್ಕೃತಿಯ ಹಿರಿಮೆ-ಗರಿಮೆಗಳನ್ನು ಆಕೆಗೆ ಆಮೂಲಾಗ್ರವಾಗಿ ಮನವರಿಕೆ ಮಾಡಿಕೊಟ್ಟು, ಆಕೆಯನ್ನು ಸಾಧನೆಯ ಗರಡಿಯಲ್ಲಿ ತರಪೇತು ಮಾಡಿ, ಪರಿಶುದ್ಧಳನ್ನಾಗಿಸಿ, ಭರತಖಂಡದ ಉದ್ಧಾರಕ್ಕೆ ಸ್ವಾಮೀಜಿ ಆಕೆಯನ್ನು ಅರ್ಪಿಸಿದರು. ಆಕೆಗೆ ಬ್ರಹ್ಮಚರ್ಯ ದೀಕ್ಷೆಯಿತ್ತು, ಆಕೆಯ ಜೀವನಕ್ಕೆ ಉದಾತ್ತ ಧ್ಯೇಯವಿತ್ತು, ಅದನ್ನು ಸಾಧಿಸುವ ಕೆಚ್ಚು,ತಾಳ್ಮೆ ಶಕ್ತಿಗಳನ್ನಿತ್ತು **'ನಿವೇದಿತಾ'** ಎಂದು ನಾಮಕರಣ ಮಾಡಿದರು. ಆಕೆ ತನ್ನ ಹೆಸರಿಗೆ ಅಕ್ಷರಶಃ ಅನ್ವರ್ಥವಾಗುವಂತೆ ಲೋಕಾದರ್ಶಳಾಗಿ ನಡೆದುಕೊಂಡಳು.

'ಧರ್ಮದಲ್ಲಿ ಬೆಳಕು ಕಾಣಬೇಕು, ಅದರಿಂದ ಶಾಂತಿ ಬರಬೇಕು, ಸಿದ್ಧಾಂತಗಳನ್ನು ನಂಬಿದರೆ ಸಾಲದು. ಅದು ಸ್ವಾನುಭವವಾಗಬೇಕು, ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು, ಅದಕ್ಕಾಗಿ ಜಪ ಧ್ಯಾನ ಮಾಡಬೇಕು, ಎಲ್ಲರ ಎಲ್ಲದರ ಒಳ್ಳೆಯದಕ್ಕೆ ಬಾಳನ್ನು ಸಮರ್ಪಣೆ ಮಾಡಬೇಕು' ಇದು ಆಕೆಯ ಜೀವನದ ಗುರಿಯಾಗಿತ್ತು. ಸ್ವತಃ ಸ್ವಾರ್ಥರಹಿತ ತ್ಯಾಗಶೀಲೆ ತಪಸ್ವಿನಿಯಾಗಿ ಆಕೆ ಭಾರತವನ್ನು ಪ್ರೀತಿಸಿದಳು, ಭಾರತೀಯ ಜೀವನಶೈಲಿಯಲ್ಲಿ ಜೀವನ ನಡೆಸಿ, 'ಭಾರತ'ವೇ ತಾನಾಗಿ ಹೋದಳು.

ಮತ ಮತ್ತು ಧರ್ಮ, ಮಾನವೀಯತೆ, ಚಾರಿತ್ರ್ಯಬಲ, ರಾಷ್ಟ್ರೀಯ ಧಾರ್ಮಿಕತೆ, ತ್ಯಾಗ-ಸೇವೆ, ಗುರು-ಶಿಷ್ಯ ಸಂಬಂಧ, ವಿದ್ಯಾಭ್ಯಾಸ, ಜಾತೀಯತೆ, ಪೂಜಾಪದ್ಧತಿ ಮೊದಲಾದ ಹಿಂದೂ ಧರ್ಮ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದ ಅನೇಕ ಶೀರ್ಷಿಕೆಗಳಲ್ಲಿ ಆಕೆ ಪ್ರವಚನಗಳನ್ನು ಮಾಡಿದಳು, ನಾನಾ ವಿಧ ಪರಿಹಾರ ಚಟುವಟಿಕೆಗಳಲ್ಲೂ ತನ್ನನ್ನು ತೊಡಗಿಸಿಕೊಂಡು ಭಾರತೀಯರಲ್ಲಿ ನವ ಚೈತನ್ಯ ತುಂಬಿದಳು, ಅವರಿಗೆ ತಮ್ಮತನವನ್ನು ಅರಿವು ಮಾಡಿಕೊಟ್ಟು ಅವರಲ್ಲಿ ತಮ್ಮ ಧರ್ಮ ಮತ್ತು ಸಂಸ್ಕೃತಿಯ ಕುರಿತು ಹೆಮ್ಮೆ ಅಭಿಮಾನಗಳನ್ನು ಮೂಡಿಸಿದಳು. ಆಕೆ ತನ್ನ ವಿಚಾರಧಾರೆಗಳನ್ನು The Web of Indian Life, Religion and Dharma, Footfalls of Indian History ಮೊದಲಾದ ಗ್ರಂಥರೂಪದಲ್ಲಿ ಪ್ರಕಟಪಡಿಸಿದಳು. ಅವುಗಳಲ್ಲಿ ಆಕೆ **ಹಿಂದೂಧರ್ಮ** ಮತ್ತು **ಸಂಸ್ಕೃತಿ**ಯನ್ನು ಕುರಿತು ಹೊಂದಿದ್ದ ಭಾವನೆಗಳನ್ನು ಹೀಗೆ ಸಂಗ್ರಹಿಸಬಹುದು:

### ಹಿಂದೂಧರ್ಮ

ದೇವರನ್ನು ಪಡೆದುಕೊಳ್ಳುವುದೇ ಮಾನವನ ಜೀವಿತದ ಪರಮಗುರಿ. ಮಾನವನ ಶರೀರ ಇಂದ್ರಿಯಗಳು ಬುದ್ಧಿ ಮನಸ್ಸುಗಳು ಪ್ರತಿಕ್ಷಣದ ತುಡಿತಕ್ಕೆ ವಿಷಯವಾಗಿರುವ ಲೌಕಿಕ ಸುಖ-ಭೋಗಗಳನ್ನು ಮೀರಿ, ತನ್ನನ್ನು ಎಲ್ಲ ದಿಕ್ಕುಗಳಿಂದ ಮುತ್ತಿ ಆಕ್ರಮಿಸಿರುವ ಎಲ್ಲ ಬಂಧನಗಳಿಂದ ಸಂಪೂರ್ಣ ಬಿಡುಗಡೆಯನ್ನು ಹೊಂದುವುದೇ ಅವನ ಜೀವನದ ಧ್ಯೇಯ. ಹಾಗೆ ಬಿಡುಗಡೆಯನ್ನು ಹೊಂದಿದ **'ಮುಕ್ತ ಮಾನವ'ನೇ ನಿಜವಾದ ಮಾನವ,** ಪರಿಪೂರ್ಣ ಮಾನವ ಎಂದು ಗುರುತಿಸುವುದು **ಹಿಂದೂಧರ್ಮ ಒಂದೇ.**

ಜಾತಿ ಗುಣ ಧರ್ಮ ಆಚಾರ ವಿಚಾರ ಸಂಪ್ರದಾಯ ಮೊದಲಾದ ಎಲ್ಲವೂ ಮರೆಯಾಗಿ ವಿಶ್ವವ್ಯಾಪಕವೂ ನಿತ್ಯವೂ ಅನಂತವೂ ಆದ ಯಾವುದು ಸೃಷ್ಟಿಯ ಎಲ್ಲಾ ಚರಾಚರಾದಿಗಳನ್ನು ತುಂಬಿಕೊಂಡಿದೆಯೋ, ಅದೇ ದೇವರು. **ಅದನ್ನು ಪಡೆಯುವುದೇ** ಧರ್ಮ, ಮಾನವೀಯತೆಯೊಡಗೂಡಿದ ನಡೆ ಇದರ ಸಾಧನ. ಆದುದರಿಂದ ಅದೂ ಧರ್ಮವೇ.

### 'ಧರ್ಮ'ದ ವಿಶಿಷ್ಟ ರೂಪ

ನಿಗದಿತ ಕಾಲದಲ್ಲಿ ನಿಶ್ಚಿತವಾದ ಸದಭ್ಯಾಸಗಳನ್ನು ಹೊಂದಿರುವುದು, ಸನ್ನಡತೆ ದಯೆ ಅನುಕಂಪೆ ಇವು ಮಾನವೀಯ ಧರ್ಮದ ಅನರ್ಘ್ಯ ರತ್ನಗಳು. ಇದು ಸಕಲ ಮಾನವರಿಗೂ ಸಮಾನವಾಗಿ ಅನ್ವಯವಾಗುತ್ತದೆ. ಇತರರ ಒಳಿತಿಗಾಗಿ ಸ್ವ-ನಿಯಂತ್ರಣ, ಸಹನೆ, ದಾನ, ಕ್ಷಮೆ ಇವು ಯಾವ ನಿಮಿತ್ತವನ್ನೂ ಅಪೇಕ್ಷಿಸುವುದಿಲ್ಲ. ವ್ಯಕ್ತಿಯ ಸಾಮಾಜಿಕ ಜೀವನದ ಎಲ್ಲಾ ಚಟುವಟಿಕೆಗಳ ಉದ್ದೇಶ ಕಾಮನೆಗಳನ್ನು ಪೂರೈಸಿಕೊಳ್ಳುವುದಲ್ಲ, ಸ್ವಾರ್ಥಸಾಧನೆ ಅಲ್ಲ, ಕೀರ್ತಿ ಅಧಿಕಾರಾದಿಗಳನ್ನು ಪಡೆಯುವುದೂ ಅಲ್ಲ. ಆತನ ಎಲ್ಲಾ ಚಟುವಟಿಕೆಗಳ ಹಿಂದೆ ವಿಶ್ವಾಸ ಶ್ರದ್ಧೆ ನಂಬಿಕೆ ಕರ್ತವ್ಯಗಳಿವೆ. **'ಅವರು ನನ್ನನ್ನು ನಂಬಿದ್ದಾರೆ, ಅದಕ್ಕೆ ಉಚಿತವಾಗಿ ನಾನು ನಡೆದುಕೊಳ್ಳಬೇಕು. ನನ್ನ ವ್ಯವಹಾರ ವಿಶ್ವಾಸಾರ್ಹವಾಗಿರಬೇಕು, ಇತರರು ಆಶ್ರಯಿಸಲು ಯೋಗ್ಯವಾಗಿರಬೇಕು. ಇದು ನನ್ನ ಕರ್ತವ್ಯ' ಎಂಬ ಭಾವನೆಯೊಡಗೂಡಿದ ಚಟುವಟಿಕೆಗಳೆಲ್ಲಾ 'ಧರ್ಮ'ವೇ.**

ಪ್ರಾಯೋಗಿಕ ಸಾಮಾಜಿಕ ಜೀವನದಲ್ಲಿ ತ್ಯಾಗ ಮತ್ತು ಪಾವಿತ್ರ್ಯದ ಅಗತ್ಯತೆಯನ್ನು ಹಿಂದೂಧರ್ಮ ಗುರುತಿಸುತ್ತದೆ. ಸಾಮಾಜಿಕ ಜೀವನದ ಪರಮ ಔನ್ನತ್ಯ, ವ್ಯಕ್ತಿ ಸಮಾಜದೊಡನೆ ಹೊಂದಿರುವ ನೈಜ ಸಂಬಂಧವನ್ನು ಅವಲಂಬಿಸಿರುತ್ತದೆ. ಕಾಡಿನೊಳಗೆ ತಪಸ್ಯೆಯ ಜೀವನದಲ್ಲಿ ನಿರತನಾದ ಸಾಧು ಮಾತ್ರವಲ್ಲದೆ, ಶುದ್ಧ ಪ್ರಾಮಾಣಿಕ ಬುದ್ಧಿಯಿಂದ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿರುವ ಕಟುಕನೂ, ಮನೆಯ ಸದಸ್ಯರ ಸೇವೆಯನ್ನೇ ತನ್ನ ಕರ್ತವ್ಯವೆಂದು ಶ್ರದ್ಧಾ ಭಕ್ತಿಗಳಿಂದ ನಿರ್ವಹಿಸುತ್ತಿರುವ, ಮನೆಗೇ ತನ್ನ ಜೀವಿತವನ್ನು ಸಂಪೂರ್ಣ ಅರ್ಪಿಸಿಕೊಂಡಿರುವ ಒಬ್ಬ ಗೃಹಿಣಿಯೂ ಜೀವನದ ಉತ್ಕೃಷ್ಟ ಗುರಿಯನ್ನು ಮುಟ್ಟಬಲ್ಲರು – ಎಂದು ಈ ಧರ್ಮ ಉದ್ಘೋಷಿಸಿ ಎಲ್ಲರಿಗೂ ಮುಕ್ತಿಗೆ ಅವಕಾಶ ಮಾಡಿಕೊಟ್ಟಿದೆ.

### ಸಾಕ್ಷಾತ್ಕಾರದ ಕೀಲಿಕೈ ಅಥವಾ ಧರ್ಮಕೇಂದ್ರದ ವಿವಿಧ ಮುಖಗಳು

ಶರೀರ ಮಾತು ಮನಗಳಲ್ಲಿ ಸಮತೆ, ನೇರ ಒಂದೇ ಭಾವವನ್ನು ಮತ್ತು ಪ್ರಾಮಾಣಿಕತೆಯನ್ನು ಹೊಂದಿರುವುದೇ ಎಲ್ಲ ವಿಧ ಸಾಕ್ಷಾತ್ಕಾರಕ್ಕೆ ಕೀಲಿಕೈ. ಅತ್ಯುತ್ಕೃಷ್ಟವಾದ ಎಲ್ಲಾ ಗುಣಗಳಲ್ಲಿ ಇದು ಅತ್ಯಂತ ಸರಳವಾದುದು ಮತ್ತು ಪರಮೋನ್ನತ ನೆಲೆಗೆ ಕೊಂಡೊಯ್ಯ ಬಲ್ಲ ವಿಶಿಷ್ಟ ಸಾಧನ. ತನ್ನ ಅಂತರಂಗದಲ್ಲಿ ತಾನು ಕಂಡ ಆದರ್ಶ ಸೂತ್ರವನ್ನು ಹಿಡಿದು ದೃಢತೆ, ಸಹನೆಗಳಿಂದ ಅದನ್ನು ಅನುಸರಿಸುವುದೇ **'ಪ್ರಾಮಾಣಿಕತೆ'**. ಸತ್ಯ, ಸರಳತೆ, ಪರಿಶುದ್ದತೆ, ಋಜುತೆ (ಮುಚ್ಚುಮರೆ ಇಲ್ಲದಿರುವಿಕೆ) ಧೈರ್ಯ, ಪ್ರಾಮಾಣಿಕತೆ ಇವು 'ಧರ್ಮಕೇಂದ್ರ'ದ ಅನೇಕ ಮುಖಗಳು. ಇದೇ ಎಲ್ಲಾ ಜೀವಿಗಳ ಅಂತಃಸತ್ವ. ಸನಾತನ ಧರ್ಮದ ಮಹತ್ತತ್ತ್ವವನ್ನು ಪುನರುಜ್ಜೀವಿಸಿಕೊಳ್ಳಲು ನಮ್ಮಲ್ಲಿ ಉನ್ನತ ಬೌದ್ಧಿಕ ಆಕಾಂಕ್ಷೆಗಳನ್ನು ಜ್ವಲಂತಗೊಳಿಸಿಕೊಳ್ಳಬೇಕು. ಸತ್ಯವನ್ನು ಸತ್ಯಕ್ಕಾಗಿಯೇ ಪಡೆದುಕೊಳ್ಳುವ ಆದರ್ಶವನ್ನು ನಮ್ಮ ಮುಂದಿಟ್ಟುಕೊಳ್ಳಬೇಕು. ಇಂತಹ ಗುರಿ ಇದ್ದಾಗ ಜೀವಿ ಎಂದೂ ಸೋಲನ್ನು ಅನುಭವಿಸುವುದಿಲ್ಲ ಮತ್ತು ಎಲ್ಲವನ್ನೂ ಧೈರ್ಯದಿಂದ ಎದುರಿಸುತ್ತಾ ಗುರಿಯೆಡೆಗೆ ಸಾಗುವನು. ಅಂಜುವವನು ಎಂದೂ ಸತ್ಯಾನ್ವೇಷಕನಾಗಲಾರ. ಅಂತೆಯೇ ಜ್ಞಾನವನ್ನು ಹೊಂದುವ ಉತ್ಕಟವಾದ ಆಂತರಂಗಿಕ ಹಂಬಲವುಳ್ಳವನು ಗುರಿ ಮುಟ್ಟುವವರೆಗೆ ಎಂದೂ ನಿಲ್ಲುವುದಿಲ್ಲ.

### ಮುಕ್ತನ ಸ್ವರೂಪ

ನಮ್ಮ ಎಲ್ಲಾ ಚಟುವಟಿಕೆಗಳ ಮತ್ತು ಬೆಳವಣಿಗೆಯ ಸಾಮರ್ಥ್ಯಗಳ ತುಂಬಾ ಆಶೆ, ಕಾಮಗಳು ತುಂಬಿ ಹೋಗಿವೆ. ಇದರಿಂದ ನಾವು ಮುಕ್ತರಾಗಬೇಕಿದೆ. ಯಾರು ಈ ಕಾಮದಿಂದ ಮುಕ್ತರಾಗಿದ್ದಾರೋ ಅವರು ಮಾತ್ರ ಸ್ವಾತಂತ್ರ್ಯದ ಮಾರ್ಗವನ್ನು ತೋರಬಲ್ಲರು. ಆಶೆಯ ವೇಗ ನಮ್ಮಲ್ಲಿ ಅತಿಯಾದ ಚಂಚಲತೆಯನ್ನು ಉಂಟುಮಾಡುತ್ತದೆ. ಅದು ಅತಿ ಬಲಿಷ್ಠವಾದ ಬಂಧನ. ನಮ್ಮ 'ಚಿತ್ತ'

ಎಂತಹುದು? ಎಂದು ಅರಿಯುವುದು ಸ್ವಾತಂತ್ರ್ಯ ಜೀವನದ, ಮುಕ್ತಿಯ ಹಾದಿಯ ನಡೆಗೆ ಅತ್ಯವಶ್ಯಕವಾದ ಹಂತ. ಚಿತ್ತದಿಂದ ಬಿಡುಗಡೆ ಹೊಂದುವಲ್ಲಿಯವರೆಗೆ ನಮ್ಮ ಮನಸ್ಸು ಶರೀರಗಳು ಬಯಸುವ ಲಕ್ಷಾಂತರ ಆಸೆಗಳು – 'ಮುಕ್ತಿಯ ನಿಜವಾದ ಸ್ವರೂಪ ಏನು?' ಎಂದು ಅರಿಯದಂತೆ ತಡೆ ಹಾಕುವುವು. ಶರೀರ ಜ್ಞಾನೇಂದ್ರಿಯ ಕರ್ಮೇಂದ್ರಿಯ ಮನಸ್ಸು ಬುದ್ಧಿ ಚಿತ್ತಗಳನ್ನೂ ಅವುಗಳನ್ನು ಸೆರೆಗಟ್ಟಿರುವ ಕಾಮನೆಗಳನ್ನೂ ಮೀರಿ ತನ್ನ 'ನಿಜಸ್ವಾತಂತ್ರ್ಯ'ವನ್ನು ಗಳಿಸಿದ ಜೀವಾತ್ಮನ ('ಜೀವ'ನ) ಪರಮಾನಂದಕರ ಸ್ಥಿತಿ ಎಂದಿಗೂ ಮಸುಕಾಗುವುದಿಲ್ಲ, ಕುಗ್ಗುವುದಿಲ್ಲ. ಅಂತಹ ಮಾನವ ಉತ್ಕೃಷ್ಟ ಮಹದಾನಂದದ ಪೂರದಲ್ಲಿ ತೇಲಿಹೋಗುತ್ತಿರುತ್ತಾನೆ. ಪರಿಪೂರ್ಣನೂ, ಪ್ರಶಾಂತನೂ ಆಗಿರುತ್ತಾನೆ. ಅಂತಹವನ ಸಾಮೀಪ್ಯ ಅತ್ಯಂತ ಸುಖಾವಹ ಹಾಗೂ ಹಿತಕರ.

### ಹಿಂದೂ ಸಂಸ್ಕೃತಿ

**ವಿದ್ಯಾಭ್ಯಾಸ :** ಇಂತಹ ಸ್ಥಿತಿಯನ್ನು ಪಡೆಯಲು ಹಂತ ಹಂತವಾದ ಅನೇಕ ಸಾಧನಾ ಮಾರ್ಗಗಳಿವೆ. ವಿದ್ಯಾಭ್ಯಾಸ ಆತ್ಯಂತಿಕ ಸತ್ಯದ ಅರಿವಿಗೆ ಅಗತ್ಯವಾದ ಮೊದಲ ಹಂತ. ಇದು ಎಲ್ಲ ಮಾನವರ ಆದ್ಯ ಹಕ್ಕು. ಅವನು ಭೋಗ ಹಣ ಸಂಪಾದನೆಗಳ ಅಪೇಕ್ಷೆಯಲ್ಲಿ ಮುಳುಗಿದ್ದರೆ ಜ್ಞಾನವನ್ನು ಪಡೆಯುವುದಾದರೂ ಹೇಗೆ? ಹೆಸರು ಕೀರ್ತಿಗಳ ದಾಸನಾಗಿದ್ದರೆ ಅವನು ಯಾವ ನೆಲೆಯಲ್ಲಿದ್ದಾನೋ ಅಲ್ಲಿಂದ ಒಂದು ಅಣುವಿನಷ್ಟೂ ಅಭಿವೃದ್ಧಿ ಮಾರ್ಗದಲ್ಲಿ ಆತ ಚಲಿಸಲಾರ. ಹಾಗಿರುವಾಗ ಸತ್ಯಾನ್ವೇಷಕನಾಗಿ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವುದಾದರೂ ಹೇಗೆ? ಆದುದರಿಂದ ವಿದ್ಯಾಭ್ಯಾಸದ ದೀಕ್ಷೆ ಮೊದಲು ಶಿಷ್ಯನಿಂದಲೇ ಆರಂಭವಾಗಬೇಕು. ಕಲಿಯುವ ಬಯಕೆಯುಳ್ಳವನು ಅಂತಹ ಶಾರೀರಿಕ ಮಾನಸಿಕ ಚಟುವಟಿಕೆಗಳನ್ನು ಹೊಂದಿರಬೇಕು. ತನಗೆ ಹಿತವೂ ಸೂಕ್ತವೂ ಆದ ಹಾದಿಯನ್ನು ಪಡೆದುಕೊಳ್ಳುವ ಗುರಿಯೆಡೆಗೆ ಮುನ್ನುಗ್ಗುವ ಕಾತರತೆ, ಆರ್ತತೆ, ಆಂತರಿಕ ಹಂಬಲ, ಪ್ರಬಲ ಇಚ್ಛಾಶಕ್ತಿಗಳನ್ನುಳ್ಳವನಾಗಿರಬೇಕು.

ಯೋಗ್ಯ ಗುರುವಿಗೆ ಶಿಷ್ಯನ ಈ ನಡವಳಿಕೆ ಸೂಚನೆಗಳನ್ನು ನೀಡುತ್ತವೆ. ಆತ ಇದರ ಉಪಯೋಗ ಪಡೆದು ಶಿಷ್ಯನ ಮನಸ್ಸಿನ ಗತಿಯ ನಿಯಮಗಳನ್ನನುಸರಿಸಿ ಅವನ ಅಭಿವೃದ್ಧಿಗೆ ಅಗತ್ಯವಾದ ಪ್ರೇರಣೆಗಳನ್ನು ನೀಡುತ್ತಾನೆ. ಹೀಗೆ ಶಿಷ್ಯನಲ್ಲಿ ಶಿಕ್ಷಣದ ಅಭಿವೃದ್ಧಿ ತತ್ಕಾಲೀನ ಸ್ಫೂರ್ತಿಯಿಂದ ಪ್ರೇರಿತವಾಗುತ್ತದೆ. ಶಿಷ್ಯನಾಗುವವನು – 'ನಾವು ಮಾನವರು ಪ್ರಾಣಿಗಳಲ್ಲ, ನಾವು ಕೇವಲ ಶರೀರವಲ್ಲ, ಮನಸ್ಸು ಬುದ್ಧಿಯುಳ್ಳವರು. ನಮ್ಮ ಜೀವನವೇ **ಉದಾತ್ತ ಚಿಂತನೆಗಳ ಸಾಕಾರ ಮತ್ತು ಸತ್ಯಸಾಕ್ಷಾತ್ಕಾರಾಧಾರಿತ**, ಆಹಾರ ನಿದ್ರೆಯಲ್ಲ. ಆತ್ಯಂತಿಕ ಸತ್ಯದಲ್ಲಿ ನಮ್ಮ ನೆಲೆಯಿದೆ. ವೇದ ವೇದಾಂತಗಳನ್ನನುಭವಿಸಿದ ಋಷಿ, ಜ್ಞಾನಿ, ಸಂತರೂ ನಮ್ಮಂತಹ ಹುಲುಮಾನವರೇ, ನಾನು ಅಂತಹ ಜ್ಞಾನವನ್ನು ಅಪೇಕ್ಷಿಸುತ್ತೇನೆ ಅದನ್ನು ಪಡೆದುಕೊಳ್ಳುತ್ತೇನೆ' – ಎಂಬ ತೀವ್ರ ಅಭಿಲಾಷೆ ಹೊಂದಿರಬೇಕು.



ಗುರುವಾದವನು ಶಿಷ್ಯನು ತನ್ನನ್ನು ತಾನು ಜ್ಞಾನ ಗಳಿಸುವ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಪ್ರೇರಣೆ ನೀಡಬಲ್ಲ, ಶಿಷ್ಯನು ಸಾಗುವ ದಾರಿಯಲ್ಲಿ ಬಂದೆರಗುವ ಅಡಚಣೆಗಳನ್ನು ನಿವಾರಿಸಬಲ್ಲ. ಗುರುವು ಆಯ್ಕೆಯ ಒಂದು ವಿಷಯದಲ್ಲಿ ಮಾತ್ರ ಪರಿಣತನಾಗಿರುವುದಿಲ್ಲ. ಆಯ್ಕೆಯ ಒಂದು ಉದ್ಯೋಗ, ಒಂದು ಯೋಜನೆ, ಒಂದು ಚಿಂತನೆಯನ್ನು ಮಾತ್ರ ಪರಮೋತ್ಕೃಷ್ಟವನ್ನಾಗಿ ಮಾಡುವುದಲ್ಲ, ಅವನು ಎಲ್ಲವನ್ನೂ ಪರಮೋತ್ಕೃಷ್ಟವಾಗಿ ಮಾಡಬಲ್ಲ. ಯಂತ್ರ ವಿಜ್ಞಾನ, ಕಲೆ ಸಾಹಿತ್ಯ, ವೇದಾಂತ, ದರ್ಶನ,ಧ್ಯಾನ ಮುಂತಾದ ಶಿಕ್ಷಣದ ಎಲ್ಲಾ ಪ್ರಭೇದಗಳಲ್ಲೂ ನಿಪುಣನಾಗಿ ಕೈ ಹಿಡಿದು ಶಿಷ್ಯನನ್ನು ಮುನ್ನಡೆಸಬಲ್ಲ.

ತನ್ನ ಧ್ಯೇಯವನ್ನು ಸಾಧಿಸಿಕೊಳ್ಳಲು ಶಿಷ್ಯನು ಗುರುವಿನಲ್ಲಿ ಪ್ರತಿಭಟಿಸದ ಮನಸ್ಸನ್ನು ಹೊಂದಿರಬೇಕು. ಗುರಿಯೆಡೆಗೆ ಸಾಗಲು ಅಗತ್ಯವಾದ ಇಚ್ಛಾಶಕ್ತಿಯನ್ನು ಪ್ರಬಲಗೊಳಿಸುವ, ಚಂಚಲತೆಯನ್ನು ದೂರಮಾಡಿ ದೃಢತೆಯನ್ನುಂಟುಮಾಡುವ ಸಲುವಾಗಿ ಆತನು ವಿಧಿಸುವ ಎಲ್ಲಾ ಪರೀಕ್ಷೆಗಳನ್ನೂ ಸಕಾರಾತ್ಮಕವಾಗಿ ಸ್ವೀಕರಿಸಬೇಕು. ಕಠಿಣ ಪರೀಕ್ಷೆಗಳು ಗುರುವಿನ ಕಠೋರತೆಯನ್ನು ತೋರುವುದಿಲ್ಲ, ಶಿಷ್ಯನ ಆಂತರಂಗಿಕ ಹಂಬಲವನ್ನು ಪ್ರಜ್ವಲಗೊಳಿಸುವುದಾಗಿರುತ್ತದೆ. ಆ ಜ್ವಾಲೆ ತೀಕ್ಷ್ಣವಾದಷ್ಟೂ ಜ್ಞಾನಲಾಭ ಅತ್ಯಲ್ಪ ಕಾಲಮಿತಿಯಲ್ಲಿ ಅತಿ ಸುಲಭವಾಗಿ ಆಗುತ್ತದೆ. ಇದು ಗುರುವು ಶಿಷ್ಯನಲ್ಲಿ ಹೊಂದಿರುವ ವಾತ್ಸಲ್ಯ, ಅನುಕಂಪೆ ಅನುಗ್ರಹವನ್ನೇ ಸೂಚಿಸುತ್ತದೆ.

ಶಿಷ್ಯನು ಯಾರಿಂದ ಅತ್ಯಲ್ಪದ ಏನನ್ನೇ ಪಡೆದಿದ್ದರೂ ಅವರನ್ನು ಆದರಿಸಬೇಕು. ಗುರುವಿನ ಉದಾತ್ತ ಮಹೋನ್ನತ ವ್ಯಕ್ತಿತ್ವ ಮತ್ತು ನಡೆಯೇ ಶಿಷ್ಯನಿಗೆ ತನ್ನ ಗುರಿಯೆಡೆಗೆ ಸಾಗುವ ಪಾಠವೂ ಆಗಿರುತ್ತದೆ. ಸಾಧಾರಣ ಲೌಕಿಕ ವಿದ್ಯೆಯೇ ಆದರೂ ಯಾರಿಂದ ನಾವು ಅದನ್ನು ಪಡೆದೆವೋ ಅವರನ್ನು ಸದಾ ಸ್ಮರಿಸುತ್ತಿರಬೇಕು.

**ಋಣ ಮತ್ತು ಜಾತಿ ಪರಿಕಲ್ಪನೆ :** ಪ್ರತಿಯೊಬ್ಬ ಮಾನವನೂ ಐದು ಋಣಗಳೊಡನೆ ಜನ್ಮ ತಾಳುತ್ತಾನೆ. ಅವು ದೇವ ಋಷಿ ಪಿತೃ ಸಹಮಾನವ ಸಹಜೀವಿಗಳ ಋಣವಾಗಿರುತ್ತದೆ. ಇವರೆಲ್ಲರ ಸಹಕಾರದಿಂದಲೇ ಅವನ ಬದುಕು ಸಾರ್ಥಕವೂ ಪೂರ್ಣವೂ ಆಗುತ್ತದೆ. ಆದುದರಿಂದ ಅವರೆಲ್ಲರಿಗೆ, ತನ್ನ ಕುಟುಂಬ, ಸಂಪ್ರದಾಯ, ಪದ್ಧತಿಗಳಲ್ಲಿ, ಅನೂಚಾನವಾಗಿ ನಡೆದು ಬಂದಿರುವ ಚಟುವಟಿಕೆಗಳ ಮೂಲಕ ಕೃತಜ್ಞತೆ ಸಲ್ಲಿಸಬೇಕಾದುದು ಮಾನವನ ಕರ್ತವ್ಯವಾಗಿದೆ. ಈ ಋಣ ಪರಿಹಾರಕ ಚಟುವಟಿಕೆಗಳನ್ನು ವ್ಯಕ್ತಿ ಸಕಾಲದಲ್ಲಿ ಪರಂಪರಾಗತ ಕ್ರಮವನ್ನನುಸರಿಸಿ ಮಾಡದಿದ್ದರೆ ಅದು ವ್ಯಕ್ತಿಯ ಆಂತರಂಗಿಕ ಬದುಕಿಗೆ ಕಳಂಕ ತರುತ್ತದೆ. ಮತ್ತು ಇವುಗಳ ಆಚರಣೆ ಶ್ರದ್ಧಾಭಕ್ತಿಯುತ ಜೀವನ ನಡೆಸುವ ಅಪೇಕ್ಷೆಯುಳ್ಳ ವ್ಯಕ್ತಿಯ ಪ್ರಾಮಾಣಿಕತೆಯನ್ನೂ ನಿಷ್ಕಾಪಟ್ಯವನ್ನೂ ತೋರಿಸುತ್ತದೆ. ಈ ರೀತಿಯ ಋಣಪರಿಹಾರಕ ಸಾಮಾಜಿಕ ಚಟುವಟಿಕೆಯನ್ನವಲಂಬಿಸಿ ವ್ಯಕ್ತಿಯ ನಡತೆ ಇರುತ್ತದೆ. ಇದು ವ್ಯಕ್ತಿ ಸಮಾಜದ ಯಾವುದೇ ವಿಭಾಗಕ್ಕೆ ಸೇರಿದ್ದರೂ ಮಾನವ ಮಾತ್ರನಾದವನಿಗೆ ಸಮಾನವಾಗಿ ಅನ್ವಯವಾಗಿರುತ್ತದೆ. ಈ ನಡತೆ ವ್ಯಕ್ತಿಗೆ **ಔನ್ನತ್ಯವನ್ನೂ ಘನತೆಯನ್ನೂ ಮನ್ನಣೆಯನ್ನೂ ತಂದುಕೊಡುತ್ತದೆ.** ಜಾತಿ (Caste) ಎಂದರೆ (Honour) ಮನ್ನಣೆ ಎಂದು ಸೋದರಿ ಸ್ಪಷ್ಟಪಡಿಸುತ್ತಾರೆ.

ಪ್ರತಿಯೊಬ್ಬ ವ್ಯಕ್ತಿಗೂ ತನ್ನ ತನ್ನದೇ ಕೌಟುಂಬಿಕ ಹಾಗೂ ಪರಂಪರಾಗತ ದೇವತೆ ಋಷಿ ವಿದ್ಯೆಗಳು ಇದ್ದೇ ಇದೆ. ಅವು ವ್ಯಕ್ತಿಗೆ ಘನತೆ ತಂದು ಕೊಡುತ್ತದೆ. ಅದೇ ಜಾತಿ. ಈ ಹಿನ್ನೆಲೆಯಲ್ಲಿ ಇವುಗಳ ಅನುಷ್ಠಾನ ಸಮಾಜದ ಭದ್ರತೆಗೆ ಸರ್ವತೋಮುಖ ಶಾಂತಿ ಸುಖ ಸಂಪತ್ಸಮೃದ್ಧಿಗಳ ಅಭಿವೃದ್ಧಿಗೆ ಪೂರಕವಾಗುತ್ತದೆ. ವ್ಯಕ್ತಿ ತನ್ನ ಕುಟುಂಬಕ್ಕೆ ಹೊಂದಿರುವ ಕುಲದೇವತೆ ಒಂದಿರುತ್ತದೆ. ಅದರ ಆರಾಧನೆಗೂ ಒಂದು ಪದ್ಧತಿ ಇರುತ್ತದೆ, ಇದೂ ವ್ಯಕ್ತಿ ತನ್ನ ಪರಮ ನೆಲೆಯನ್ನು ಹೊಂದುವ ಸಾಧನೆಗಳಲ್ಲಿ ಒಂದು ಎಂದು ಹಿಂದೂ ಸಂಸ್ಕೃತಿ ಪರಿಭಾವಿಸುತ್ತದೆ.

**ಪೂಜಾಪದ್ಧತಿ:** ವಿಶ್ವದ ಒಟ್ಟು ಪೂಜಾ ವಿಧಾನದ ಮೂಲ ಬೀಜರೂಪ ಹಿಂದೂಧರ್ಮದಲ್ಲಿದೆ. ಬೇರೆ ಸಂಸ್ಕೃತಿಗಳು ಪೂಜ್ಯ ದೈವ, ಅರ್ಚಕ, ಪೂಜಕರಿಗಿಂತ ಹೆಚ್ಚು ಏನನ್ನೂ ಪೂಜಾಂಗವಾಗಿ ಗುರುತಿಸಿಲ್ಲ. ಆದರೆ ಹಿಂದೂ ಸಂಸ್ಕೃತಿಯಲ್ಲಿ ಇದು ಒಂದು ಲಿಖಿತ ಮಂತ್ರ ಪ್ರಾರ್ಥನೆ, ಕ್ರಿಯೆಗಳನ್ನೊಳಗೊಂಡಿದೆ. ತಪಸ್ಯೆ ಸಾಧನೆ ಭಜನೆಗಳ ಅಂಗವಾಗಿ ಪೂಜೆಯನ್ನು ಪರಿಗಣಿಸಲಾಗಿದೆ.

ಭಗವಂತ ಎಂಬ ನೆಲೆಯಲ್ಲಿ ನಾವು ಕೊಚ್ಚಿ ಹೋಗುವಲ್ಲಿಯವರೆಗೆ, ಅದರೊಳಗೆ ಒಂದಾಗಿ ನಾವು ನಮ್ಮತನವನ್ನು ದುರಭಿಮಾನಗಳನ್ನು ಕಳೆದುಕೊಳ್ಳುವಲ್ಲಿಯವರೆಗೆ, ನಮ್ಮ 'ಅಹಂಕಾರ' ಎಂಬ ಪ್ರತಿಬಿಂಬದ ದರ್ಶನವನ್ನು ಭಗವತ್ಪ್ರವಾಹದಲ್ಲಿ ಲೀನವಾಗಿಸುವಲ್ಲಿಯವರೆಗೆ, ಪೂಜಾವಿಧಾನದ ಮಂತ್ರ ಕ್ರಿಯಾವಿಧಿಗಳು (ಹಿಂದೂ ಸಂಸ್ಕೃತಿಯಲ್ಲಿ) ಇವೆ. ಸಮೂಹದ ಅಂತಃಸತ್ವದ ಪೋಷಣೆಗೆ ಪೂರಕವಾಗಿ **ಜೀವಾತ್ಮನನ್ನು ಪರಮಾತ್ಮನ ಆವಿರ್ಭಾವವಾಗಿ ಭಾವಿಸುವುದರ ಮೂಲಕ ಅವುಗಳಿಗೆ ಸಲ್ಲಿಸುವ ಸೇವೆಯೂ ಪೂಜೆಯೇ** ಆಗುವುದೆಂದು ಇಲ್ಲಿ ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸೇವೆಯನ್ನೂ ಆತ್ಮಸಾಕ್ಷಾತ್ಕಾರಕ್ಕೆ ಅಗತ್ಯವಾದ ಸಾಧನವೆಂದು ಅಂಗೀಕರಿಸಲಾಗಿದೆ.

ಎಲ್ಲೂ ಧರ್ಮ ಏಕಸ್ವಾಮ್ಯವನ್ನು ಪಡೆದಿರಲಿಲ್ಲ. ಹಿಂದೂ ಧರ್ಮ ಆಚಾರ್ಯರೆಂದು ಪರಿಗಣಿಸುವ ರಾಮ ಕೃಷ್ಣ ಬುದ್ಧ ಉಪನಿಷತ್ತಿನ ಕಾಲದ ಅನೇಕ ಋಷಿಗಳು, ವಿವಿಧ ವರ್ಣ ಪಂಗಡಗಳಿಗೆ ಸೇರಿದ್ದರೆಂಬುದನ್ನೂ ಇಲ್ಲಿ ಚಿಂತಿಸಬೇಕು.

**ರಾಷ್ಟ್ರೀಯ ಧರ್ಮ:** ಒಟ್ಟು ನೈತಿಕ ಬೌದ್ಧಿಕ ವೈಚಾರಿಕ ಆರ್ಥಿಕ ಯಾಂತ್ರಿಕ ರಾಜಕೀಯ ಸಾಮಾಜಿಕ ಗೃಹ ಸಂಬಂಧವಾದ ಎಲ್ಲಾ ರೀತಿಯ ಚಟುವಟಿಕೆಗಳೂ, ಕ್ರಿಯೆ ಪ್ರತಿಕ್ರಿಯೆಗಳು, ಎಲ್ಲವನ್ನೂ 'ಧರ್ಮ'ದಡಿಯಲ್ಲಿ ಪರಿಭಾವಿಸುವುದು ಭಾರತದ ರಾಷ್ಟ್ರೀಯ ಸ್ವಭಾವವಾಗಿದೆ. ಈ ಧರ್ಮಕ್ಕೂ ಕೇಂದ್ರವು 'ದೇವರು', ಅದು ನೂರಾರು ರೂಪ ನೂರಾರು ಹೆಸರುಗಳನ್ನು ಅವರವರ ಹೃದ್ಗತ ಭಾವ ಇಂದ್ರಿಯಗಳ ಬಾಗುವಿಕೆ ಆಂತರಂಗಿಕ ಗುಣಸ್ವಭಾವಗಳ ಗ್ರಹಿಕೆಗೆ ಏಕಾಗ್ರತೆಗೆ ಧ್ಯಾನಕ್ಕೆ ಪೋಷಕವಾಗಿ ಹೊಂದಿವೆ. ಇರುವುದು ಒಂದೇ, **'ಏಕಂ ಸತ್ ವಿಪ್ರಾ ಬಹುಧಾ ವದಂತಿ'**, 'ಪರಮ ಸತ್ಯ'. ಈ ಹಿನ್ನೆಲೆಯಲ್ಲೇ ಅದು ತನ್ನ ಸಂಪರ್ಕಕ್ಕೆ ಬಂದ ಪ್ರತಿಯೊಂದು ಸಿದ್ಧಾಂತವನ್ನೂ ತನ್ನ ತೆಕ್ಕೆಗೆ ತೆಗೆದುಕೊಂಡು ಅದರೊಡನೆ ಕೈಜೋಡಿಸಿ, ಏಕೀಭಾವವನ್ನು ಹೊಂದುತ್ತದೆ. ಆ ಮತಸಿದ್ಧಾಂತಗಳಲ್ಲಿ ಮೇಲು-ಕೀಳುಗಳನ್ನು, ಭೇದ-ಭಾವವನ್ನು ಅದು ಎಣಿಸುವುದಿಲ್ಲ. **'ಆ ನೋ ಭದ್ರಾ ಕ್ರತವೋ ಯಂತು ವಿಶ್ವತಃ'** ವಿಶ್ವದ ಮೂಲೆ ಮೂಲೆಗಳಿಂದ ಮಂಗಳಕರವಾದ ಜ್ಞಾನ ವಿಚಾರ ಚಿಂತನೆಗಳು ನಮ್ಮೆಡೆಗೆ ಬರಲಿ ಎಂಬ ಉದಾರಭಾವವೇ ಅದರ ಹಿರಿಮೆ.

**ಉಪಸಂಹಾರ:**

ಸೋದರಿ ನಿವೇದಿತಾ ವಿಶ್ವದ ವಿವಿಧ ಧರ್ಮ ಸಂಸ್ಕೃತಿಗಳೊಡನೆ, ಹಿಂದೂ ಸಂಸ್ಕೃತಿಯ ಧರ್ಮದ ತತ್ತ್ವಗಳನ್ನು ಹೋಲಿಸಿ ವಿಶ್ಲೇಷಿಸಿ ಅದರ ಗರಿಮೆಯನ್ನು Crown of Hinduism ಎನ್ನುವ ತನ್ನ ಲೇಖನದಲ್ಲಿ, ''ಹಿಂದೂಧರ್ಮ ಓದುವುದು ನಂಬುವುದು ಇಷ್ಟನ್ನು ಮಾತ್ರ ಬೋಧಿಸುವುದಿಲ್ಲ. ಸಾಕ್ಷಾತ್ಕಾರ ಮತ್ತು ಅನುಭವವೇ ಅದರ ಮೂಲ ಆಧಾರ. ಜ್ಞಾನವನ್ನು ಹೊಂದಲು ಮಾಡುವ ಎಲ್ಲಾ ಪ್ರಾಮಾಣಿಕ ಪ್ರಯತ್ನಗಳನ್ನೂ ಅದು ಅಂಗೀಕರಿಸುತ್ತದೆ. ಅದು ಸತ್ಯದ ಯಾವುದೇ ರೂಪವನ್ನೂ ಸಂಶಯಿಸುವುದೂ ಇಲ್ಲ, ದ್ವೇಷಿಸುವುದೂ ಇಲ್ಲ. ಸಾವಿನ ನಿಗೂಢತೆ, ಒಳಿತು-ಕೆಡಕುಗಳ ರಹಸ್ಯ, ದೈವೀಪುರುಷನ ಪ್ರೇಮದ ಗುಣ, ಜೀವಿಗಳ ನರಕ ಶಿಕ್ಷೆಯ ಉದ್ಧಾರದ ಅಸ್ತ್ರ, ಹೀಗೆ ವಿಭಿನ್ನ ಸಿದ್ಧಾಂತ ಕೇಂದ್ರಗಳುಳ್ಳ ವಿಶ್ವದ ಇತರ ಸಿದ್ಧಾಂತಗಳಿಗಿಂತ, ಯಾವ ಜಾತಿ ಮತ ಭೇದ ಭಾವವಿಲ್ಲದ ತ್ಯಾಗ ವೈರಾಗ್ಯ ಮುಕ್ತಿಯ ಮಂತ್ರವನ್ನು ತನ್ನ ಸಿದ್ಧಾಂತದ ಕೇಂದ್ರವನ್ನಾಗಿ ಹೊಂದಿರುವುದು ಹಿಂದೂ ಸಂಸ್ಕೃತಿಯ ವೈಶಿಷ್ಟ್ಯ'' ಎಂದು ಸುಸ್ಪಷ್ಟವಾಗಿ ಘೋಷಿಸಿದ್ದಾಳೆ. ❖

# ನಿವೇದಿತಾ ಶಿಕ್ಷಣ ದೃಷ್ಟಿ

**(ನಿವೇದಿತಾ ಕಂಡಂತೆ ರಾಷ್ಟ್ರೀಯ ಶಿಕ್ಷಣ)**

**ಡಾ. ಹೆಚ್. ಪಾಂಡುರಂಗ ವಿಠಲ**

ಬ್ರಿಟಿಷ್ ಆಳ್ವಿಕೆಯಲ್ಲಿ ಆರಂಭವಾದ ಹೊಸ ಶಿಕ್ಷಣ ವ್ಯವಸ್ಥೆ ಭಾರತದ ಭವಿಷ್ಯಕ್ಕೆ ಹೇಗೆ ಮಾರಕವಾಗಬಲ್ಲುದು, ಭಾರತದ ಜನಜೀವನವನ್ನು ಉನ್ನತಿಗೆ ಏರಿಸಬಲ್ಲ ಆಧುನಿಕ ಶಿಕ್ಷಣ ಕ್ರಮ ಹೇಗಿರಬೇಕು ಎಂಬುದನ್ನು ಆಳವಾಗಿ ಚಿಂತಿಸಿ, ಒಂದು ಯೋಗ್ಯ ಶಕ್ಷಣ ವಿಧಾನವನ್ನು ರೂಪಿಸಿದ್ದಳು ಸೋದರಿ ನಿವೇದಿತಾ. ಈ ಕುರಿತು ಬರೆದಿರುವ ಲೇಖಕರು ಮೈಸೂರಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದಾರೆ. ಒಳ್ಳೆಯ ಚಿಂತಕರೂ, ಬರಹಗಾರರೂ ಆಗಿರುವ ಇವರ ಹಲವು ಬರಹಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.



ತಮ್ಮ ಕಾಲದಲ್ಲಿ ಪ್ರಚಲಿತವಿದ್ದ ಇಂಗ್ಲಿಷ್ ಶಿಕ್ಷಣ ಪದ್ಧತಿಯ ಕಟು ವಿಮರ್ಶಕರಾಗಿದ್ದ ಸ್ವಾಮಿ ವಿವೇಕಾನಂದರು ''ವಿದ್ಯಾಭ್ಯಾಸವೆಂದರೆ ಮಾನವನಲ್ಲಿ ಈಗಾಗಲೇ ಸುಪ್ತವಾಗಿರುವ ಪರಿಪೂರ್ಣತೆಯನ್ನು ಹೊರತರುವುದು'' ಎಂದು ಹೇಳಿ, ಮಣ್ಣಿನಲ್ಲಿ ಗಿಡ ಬೆಳೆಯುವಂತೆ ಮಗು ತನಗೆ ತಾನೆ ಅರಿವನ್ನು ಮೂಡಿಸಿಕೊಳ್ಳುತ್ತದೆ ಎನ್ನುವರು. ಈ ಮಾತು ಅವರ 'ಧರ್ಮವೆಂದರೆ ಮಾನವನಲ್ಲಿ ಈಗಾಗಲೇ ಸುಪ್ತವಾಗಿರುವ ದಿವ್ಯತೆಯನ್ನು ಹೊರತರುವುದು' ಎನ್ನುವುದನ್ನು ಹೋಲುವುದು. ಕಾರಣ ಅವರ ಪ್ರಕಾರ ಧರ್ಮವೆಂದರೆ ಆತ್ಮಸಾಕ್ಷಾತ್ಕಾರವಾಗಿದ್ದು, ಶಿಕ್ಷಣ ಅದರ ಒಂದು ಭಾಗ, ಅಷ್ಟೇ. 'ಪುರುಷಸಿಂಹರನ್ನಾಗಿಸುವ ವಿದ್ಯಾಭ್ಯಾಸ' ಎಂದು ಅವರು ಶೀಲನಿರ್ಮಾಣದ ಅಗತ್ಯವನ್ನು ಒತ್ತಿ ಹೇಳುವರು. ''ನನ್ನ ದೃಷ್ಟಿಯಲ್ಲಿ ವಿದ್ಯಾಭ್ಯಾಸದ ಸಾರವೇ ಏಕಾಗ್ರತೆ, ಬರಿಯ ವಿಷಯಸಂಗ್ರಹವಲ್ಲ. ಏಕಾಗ್ರತೆಯ ಕರೆಗೆ ಪ್ರಕೃತಿ ಎಲ್ಲ ದ್ವಾರಗಳನ್ನೂ ತೆರೆದು ಜ್ಞಾನಪ್ರವಾಹವನ್ನು ಹೊರಗೆ ಬಿಟ್ಟುಬಿಡುವುದು'' ಎಂಬ ಇನ್ನೊಂದು ಹೇಳಿಕೆಯು, ಪುರಾತನ ಹಿಂದೂ ಯೋಗಿಗಳ ಈ ಆವಿಷ್ಕಾರವನ್ನು ಪುನಃ ನಮ್ಮ ಶಿಕ್ಷಣಕ್ರಮದಲ್ಲಿ ಬಳಕೆಗೆ ತರಬೇಕು ಎಂಬ ಅವರ ಬಯಕೆಯನ್ನು

ಸೂಚಿಸುವುದು. ಸ್ವಾಮೀಜಿಯ ಇನ್ನೊಂದು ಆಸೆ – ಶಿಕ್ಷಣವು ನಾವು ಬದುಕುವ ಮಾರ್ಗವನ್ನು ತೋರಿ, ಜೀವನದ ಸಮಸ್ಯೆಗಳನ್ನು ಎದುರಿಸಿ ಸ್ವಾವಲಂಬಿಯನ್ನಾಗಿಸಬೇಕು ಎಂಬುದು. ''ಕೆಲವು ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ, ಚೆನ್ನಾಗಿ ಉಪನ್ಯಾಸ ಮಾಡಲು ಬಂದುಬಿಟ್ಟರೆ ನಿಮ್ಮ ಪಾಲಿಗೆ ಒಬ್ಬ ಸುಶಿಕ್ಷಿತನಾದಂತಾಯಿತು! ಯಾವ ವಿದ್ಯೆಯ ನೆರವಿನಿಂದ ಇತರ ಸಾಧಾರಣ ಜನರನ್ನು ಜೀವನ ಸಂಗ್ರಾಮವನ್ನೆದುರಿಸಲು ಸಮರ್ಥರನ್ನಾಗಿ ಮಾಡುವುದಕ್ಕಾಗುವು ದಿಲ್ಲವೋ, ಯಾವುದು ಮನುಷ್ಯನ ಒಳಗಿನಿಂದ ಚಾರಿತ್ರ್ಯಬಲ, ಪರಸೇವಾತತ್ಪರತೆ, ಸಿಂಹಸದೃಶ ಸಾಹಸ ಇವುಗಳನ್ನು ಹೊರತರಲು ನೆರವಾಗುವುದಿಲ್ಲವೋ ಅದು ವಿದ್ಯೆಯೇನು?'' ಎನ್ನುವರು. ಇತ ರರ ಆಳ್ವಿಕೆಯಲ್ಲಿ, ಅನುಕರಣೆಯಲ್ಲಿ ಶಿಕ್ಷಣದ ಈ ಆದರ್ಶಗಳನ್ನು ಅನುಷ್ಠಾನಕ್ಕೆ ತರುವುದು ಕಷ್ಟವೆಂದೂ ಅವರಿಗೆ ಅನ್ನಿಸಿತ್ತು. ''ನಮ್ಮ ಆದರ್ಶವೇನೆಂದರೆ, ಪಾರಮಾರ್ಥಿಕ ಮತ್ತು ಲೌಕಿಕ ಶಿಕ್ಷಣಗಳೆರಡೂ ನಮ್ಮ ಅಧೀನದಲ್ಲಿರಬೇಕು. ಅವು ರಾಷ್ಟ್ರೀಯವಾಗಿರಬೇಕು, ಸಾಧ್ಯ



ವಾದ ಮಟ್ಟಿಗೆ ರಾಷ್ಟ್ರೀಯ ಸ್ವರೂಪವನ್ನು ಪಡೆದಿರಬೇಕು. ಇದೊಂದು ವಿರಾಟ್ ಯೋಜನೆಯೇನೋ ಸರಿ. ಅದು ಎಂದಿ ಗಾದರೂ ಸಾಧ್ಯವಾದೀತೇನೋ ಎಂಬುದು ನನಗೆ ಗೊತ್ತಿಲ್ಲ. ಆದರೆ ನಾವು ಕೆಲಸವನ್ನು ಪ್ರಾರಂಭಿಸಬೇಕು.''

ಹೀಗೆ ರಾಷ್ಟ್ರೀಯ ಶಿಕ್ಷಣದ ಕೆಲಸವನ್ನು ಪ್ರಾರಂಭಿಸಿದ ಸ್ವಾಮೀಜಿಯ ಶಿಷ್ಯರಲ್ಲಿ ಸೋದರಿ ನಿವೇದಿತಾ ಅಗ್ರಮಾನ್ಯಳು. ಜನಜಾಗೃತಿಗೆ ಚಿಕ್ಕಮಕ್ಕಳ ಹಾಗೂ ಸ್ತ್ರೀಯರ ವಿದ್ಯಾಭ್ಯಾಸವೇ ಬುನಾದಿ ಎಂದು ಕಂಡುಕೊಂಡ ಆಕೆ ಬಂದ ಕಷ್ಟಗಳನ್ನೆಲ್ಲ ಎದುರಿಸಿ ಕೊಲ್ಕತಾದಲ್ಲಿ ಶಾಲೆಯೊಂದನ್ನು ತೆರೆದಳು. ಆಕೆ ಹೆಣ್ಣುಮಕ್ಕಳ ಶಾಲೆಯನ್ನು ಆರಂಭಿಸಿದರೂ, ರಾಷ್ಟ್ರೀಯ ಶಿಕ್ಷಣ ಹೇಗಿರಬೇಕೆಂಬ ಬಗ್ಗೆ ಸ್ಪಷ್ಟವಾದ ಅಭಿಪ್ರಾಯಗಳನ್ನು ಹೊಂದಿದ್ದಳು. ರಾಷ್ಟ್ರೀಯ ಮನೋಭಾವ (National mind) ಎಂಬ ನುಡಿಗಟ್ಟು ನಿವೇ ದಿತಾಳದು. ಆಕೆ ಇದನ್ನು ಹೀಗೆ ವಿವರಿಸುತ್ತಾಳೆ: ''ತಮ್ಮತಮ್ಮ ಸಮಸ್ಯೆಗಳನ್ನು ಎದುರಿಸಲು ರಾಷ್ಟ್ರೀಯ ಮನೋಭಾವವನ್ನು ಹೇಗೆ ತರಬೇಕೆನ್ನುವುದನ್ನು ಜರ್ಮನಿ ಹಾಗೂ ಅಮೆರಿಕಾ ಬಲ್ಲುದು. ಅಂದರೆ, ಅವರು ಸಾಮಾನ್ಯ, ಜನಪ್ರಿಯ ಮನೋಭಾವ ವನ್ನು ಸಂಘಟಿಸಿ, ಈ ಸಂಘಟಿತ ಮನಸ್ಸಿಗೆ... ತಂತಮ್ಮ ದೇಶದ ಅಭ್ಯುದಯ ಮತ್ತು ಸುಸ್ಥಿತಿಯನ್ನು ಸಾಧಿಸುವ ಜಟಿಲ ಸಮಸ್ಯೆ ಯನ್ನು ನೀಡುವರು.''

ಇಂತಹ ಸಾಮಾನ್ಯ ರಾಷ್ಟ್ರೀಯ ಮನೋಭಾವದ ಆಧಾರ ವಿಲ್ಲದೆ ಸಮಾಜವನ್ನು ಒಟ್ಟುಗೂಡಿಸಿ ಅಭಿವೃದ್ಧಿಯನ್ನು ಸಾಧಿಸಲು ಆಗದು. ಭಾರತವನ್ನು ದುರ್ಬಲಗೊಳಿಸಲು ಬ್ರಿಟಿಷರಂತೆಯೇ ತಮ್ಮ ಸ್ವಂತ ಲಾಭಕ್ಕಾಗಿ ನಮ್ಮವೇ ಆದ ರಾಜಕೀಯ ಮತ್ತು ವೈಚಾ ರಿಕ ಶಕ್ತಿಗಳು ಪ್ರಜ್ಞಾಪೂರ್ವಕವಾಗಿ ವಿಘಟನೆಗಳನ್ನು ಹುಟ್ಟುಹಾಕು ತ್ತಿವೆ; ಇದರ ಫಲವಾಗಿ ಸೃಷ್ಟಿಯಾದ ಸಮಸ್ಯೆಗಳಿಂದ ಅವು ತಮ್ಮ ಅಭಿವೃದ್ಧಿ ಸಾಧಿಸುತ್ತಿವೆ. ಆದರೆ ಸಾಂಪ್ರದಾಯಿಕ ಭಾರತೀಯ ಸಮಾಜವು ಹೊರ ತೋರಿಕೆಯಲ್ಲಿ ಸಾಮಾಜಿಕ ವೈವಿಧ್ಯ ಹೊಂದಿ ದ್ದರೂ, ಸನಾತನ ಸಂಸ್ಕೃತಿಯ ಅಂತರ್ಗತವಾದ ರಚನೆ ನಾಶ ವಾಗಿಲ್ಲ. ಕಾರಣ ನಮ್ಮ ಋಷಿಗಳು ತಮ್ಮದೇ ಮಾದರಿಯ ರಾಷ್ಟ್ರೀಯ ಮನೋಭಾವವನ್ನು ಸೃಷ್ಟಿಸಿರುವರು.

ಭಾರತೀಯ ರಾಷ್ಟ್ರೀಯ ಶಿಕ್ಷಣದ ಬುನಾದಿ ಏನಿರಬೇಕು? ''ಈ ಆಧುನಿಕ ಯುಗದಲ್ಲಿ ಇಡೀ ಸಮಾಜಕ್ಕೆ ಸಾಮಾನ್ಯವಾಗಿರುವ ವಿಶಿಷ್ಟ ಯೋಚನೆಗಳು, ಕಲ್ಪನೆಗಳ ಭಾಂಡಾರವೇ ಇದ್ದು, ಅವನ್ನು ಮುಂದೆ ತನ್ನ ಪ್ರೌಢ ಜೀವನವನ್ನು ದಕ್ಷತೆಯಿಂದ ನಡೆಸಬಯಸುವ ಪ್ರತಿ ವ್ಯಕ್ತಿಗೂ ತಿಳಿಸಬೇಕಾದದ್ದು ಅತಿ ಮುಖ್ಯ'' ಎನ್ನುತ್ತಾಳೆ ನಿವೇ ದಿತಾ. ಗುರು-ಶಿಷ್ಯರು ಪ್ರತಿಜ್ಞಾಬೋಧನೆಗೆ ಬಳಸುವ ಋಗ್ವೇದದ ಮಂತ್ರವೊಂದು ಈ ಸಾಮಾನ್ಯ ಮನೋಭಾವವನ್ನು ತಿಳಿಸುತ್ತದೆ: **ಸಮಾನೋ ಮಂತ್ರ ಸಮಿತಿಃ ಸಮಾನೀ ಸಮಾನಮ್ ಮನಃ ಸಹ ಚಿತ್ತಮೇಷಾಂ। ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ ಸಮಾನಮ್ ಅಸ್ತು ವೋ ಮನೋ ಯಥಾ ವಃ ಸುಸಹಾಸತಿ॥** *(ಋಗ್ವೇದ, ೧೦.೧೯೧.)* 'ನಿಮ್ಮ ಧ್ಯೇಯವು ಸಮಾನವಾಗಿರಲಿ; ನಿಮ್ಮ ಸಭೆಯು ಸಮಾನವಾಗಿರಲಿ; ನಿಮ್ಮೆಲ್ಲರ ವಿಚಾರಗಳು ಮತ್ತು ಮನಸ್ಸುಗಳು ಸಮಾನವಾಗಿದ್ದು, ಒಟ್ಟಾಗಿರಲಿ; ನಿಮ್ಮ ಮುಂದೆ ನಾನು ಸಮಾನವಾಗಿರುವ ಉದ್ದೇಶವನ್ನು ಇಡುತ್ತಿರುವೆನು; ನಿಮ್ಮ ಗುರಿಯಿಂದ ಮತ್ತು ನಿಮ್ಮ ಹೃದಯಗಳನ್ನು ಒಟ್ಟುಮಾಡಿ ಪೂಜಿಸಿ; ನೀವೆಲ್ಲ ಜೊತೆಯಾಗಿ ಸಂತೋಷದಿಂದ ಜೀವಿಸುವಂತೆ ನಿಮ್ಮ ಮನಸ್ಸುಗಳು ಒಂದಾಗಿರಲಿ.)' ಇಂತಹ ಪ್ರತಿಜ್ಞೆಯಲ್ಲಿ ನಾವು ಯಾವ ಧರ್ಮಯುದ್ಧ, ಇತರರ ಮೇಲೆ ಆಕ್ರಮಣ ಅಥವಾ ಜಿಹಾದ್‌ಗೆ ಕರೆ ನೀಡಿಲ್ಲ – ಭಾರತದ ಇತಿಹಾಸವೇ ಅದಕ್ಕೆ ಸಾಕ್ಷಿ. ಇಲ್ಲಿನ ಸಾಮಾನ್ಯ ಉದ್ದೇಶ ಎಲ್ಲರ, ಎಲ್ಲದರ ಆನಂದ– '**ಸರ್ವೇ ಭವಂತು ಸುಖಿನಃ**.' ಇದಕ್ಕೆ ವ್ಯಕ್ತಿಗತ ಅಥವಾ ರಾಷ್ಟ್ರೀಯ ಅಹಂ ಕಾರ ಅಥವಾ ತನ್ನನ್ನು ಮುಂದುಮಾಡಿಕೊಳ್ಳುವ ಆಗ್ರಹ ಇಲ್ಲ. ನಿವೇದಿತಾ ಇಂತಹ ರಾಷ್ಟ್ರೀಯ ಮನೋಭಾವದಲ್ಲಿ ಇರುವ ವಿಶ್ವಾತ್ಮಕತೆಯನ್ನು ಗುರುತಿಸಿ ಈ ಸಮಾನ ಮನಸ್ಸು ಶಕ್ತ ಸಮರ್ಥ ವಾಗಲು, ನಾಗರಿಕ ಆದರ್ಶಗಳು ಮತ್ತು ಜವಾಬ್ದಾರಿಯನ್ನೂ ಮೈಗೂಡಿಸಿಕೊಳ್ಳಬೇಕೆಂದು ಆಶಿಸಿದ್ದಳು. ಮನೆ ಗೆದ್ದು ಮಾರು ಗೆಲ್ಲು ಎಂದಂತೆ ಇದನ್ನು ತಮ್ಮಲ್ಲಿ, ಮಕ್ಕಳಲ್ಲಿ ಬೆಳೆಸುವ ಜವಾಬ್ದಾರಿ ಯನ್ನು ತಂದೆತಾಯಂದಿರು ವಹಿಸಬೇಕು.

ಗೊತ್ತಿದ್ದುದರಿಂದ ಗೊತ್ತಿಲ್ಲದ್ದರ ಕಡೆಗೆ ಹೋಗುವುದು ಶಿಕ್ಷಣದ ವಿಧಾನ. ನಮ್ಮ ಕಲ್ಪನೆಗಳು ನಮ್ಮದೇ ಆದ ವೀರ ಸಾಹಿತ್ಯದ ಮೇಲೆ

ರಚಿತವಾಗಬೇಕು. ನಿವೇದಿತಾ ಹೇಳುವುದು ಭಾರತದ ಮಗುವಿಗೆ ಯುಧಿಷ್ಠಿರನ ಸತ್ಯ ನಿಷ್ಠೆಯನ್ನು ಕಲಿಸುವುದು ಸೂಕ್ತವೇ ಹೊರತು ವಾಷಿಂಗ್‌ಟನ್ನನದ್ದಲ್ಲ. ನಮ್ಮ ಮಕ್ಕಳಿಗೆ ಪಾಶ್ಚಾತ್ಯ ಕಲ್ಪನೆ ಅರ್ಥವಾಗದು. ಆದರೆ ಈಗಿನ ಶಿಕ್ಷಣದ ಅವಸ್ಥೆ ಹೇಗಿದೆ? ಸ್ವಲ್ಪವೂ ಪರಿಚಿತವಲ್ಲದ್ದನ್ನು ಎಳೆಯ ಮನಸ್ಸುಗಳಿಗೆ ಕಲಿಸಲಾಗುತ್ತಿದೆ. 'ನಮ್ಮ ಹಿಂದಿನದೆಲ್ಲ ವ್ಯರ್ಥ; ನಮ್ಮ ಚರಿತ್ರೆ ಎಂಬುದು ಇಲ್ಲ; ನಮ್ಮ ಮಹಾಕಾವ್ಯಗಳು ಬರೀ ಹಿಂಸೆ, ಮೋಸ, ಉತ್ಪ್ರೇಕ್ಷೆಗಳ ಮೂಟೆಗಳು; ವೇದಕಾಲೀನ ಹಿಂದುತ್ವ ಎಂದರೆ ಜಗಳಗಂಟಿ ದೇಶಭಕ್ತಿ. ಇಂತಹ ಟೊಳ್ಳು ಪ್ರತಿಷ್ಠೆಗಳನ್ನು ಬಯಲಿಗೆಳೆಯುವುದು ಪ್ರಗತಿಶೀಲತೆ. ತಾಯ್ನಾಡಿನ ಪ್ರೇಮವನ್ನು ತ್ಯಜಿಸಿ ಜಾಗತಿಕ ಪ್ರೇಮವನ್ನು ರೂಢಿಸಿಕೊಳ್ಳುವುದು ವಿಮೋಚನೆ.' ಈ ಪರಿಸ್ಥಿತಿ ಬದಲಾಗಬೇಕು.

ನಿವೇದಿತಾ ಹೇಳುವಂತೆ, 'ಶಿಕ್ಷಣವಿಧಾನಕ್ಕಿಂತ, ಶಿಕ್ಷಣದ ಹಿಂದಿರುವ ಮನಸ್ಸನ್ನು ಮೊದಲು ರೂಪಿಸಬೇಕೆಂದು ಹಿಂದೂವು ತಿಳಿದಿದ್ದು ಭಾರತೀಯ ಸಂಸ್ಕೃತಿಯ ಅದೃಷ್ಟ.' ಶಿಕ್ಷಣದಲ್ಲಿ ಬುದ್ಧಿಗಿಂತ ಭಾವನೆಗಳಿಗೆ ಪ್ರಾಶಸ್ತ್ಯ ನೀಡಬೇಕೆನ್ನುವುದು ಅವಳ ಅಭಿಪ್ರಾಯ. ''ಭಾವನೆ ಮುಖ್ಯವಾಗಿ ಸ್ಥಳೀಯತೆಗೆ ಸಂಬಂಧಿಸಿದುದು. ಪ್ರತಿಯೊಬ್ಬನ ಹೃದಯದಲ್ಲಿ ಅವನ ಸ್ವದೇಶವಿದೆ.'' ಹೀಗೆ ನಿವೇದಿತಾಳ ಶಿಕ್ಷಣದ ತತ್ತ್ವ ಸ್ಥಳೀಯ ಪ್ರತಿಮೆಗಳು, ಪಾತ್ರಗಳು ಮತ್ತು ಪ್ರಕ್ರಿಯೆಗಳ ಮೂಲಕ ಸಾಧಿತವಾದ ಪರಿಶುದ್ಧ, ಉದಾತ್ತ ಭಾವನೆಗಳ ಮಿಶ್ರಣ. ''ನಾವು ಮಾನವನಿಗೆ ಭಾವನೆಗಳು ಮತ್ತು ಆಯ್ಕೆಗಳಲ್ಲಿ ತರಬೇತಿ ನೀಡದಿದ್ದರೆ, ಅವನು ಬಳಸಬಹುದಾದ ಕೆಲವು ಬೌದ್ಧಿಕ ಕಸರತ್ತುಗಳನ್ನು ಕಲಿತು ಹೊರಬೀಳುತ್ತಾನೆ. ಇವುಗಳಿಂದ ಆತ ಅನ್ನ ಸಂಪಾದಿಸಿಕೊಳ್ಳಬಲ್ಲ. ತನ್ನ ಜೀವವನ್ನೇ ಬಲಿಕೊಡಲು ಅಥವಾ ಹೃದಯವನ್ನು ತಟ್ಟಲು ಅವನಿಗೆ ಅಸಾಧ್ಯ.''

ನಿವೇದಿತಾಳ 'ಉದಾತ್ತವಾಗಿ ಭಾವಿಸುವ' ಸಂಸ್ಕೃತಿಯನ್ನು ಮೆಚ್ಚುವ ರವೀಂದ್ರನಾಥ ಠಾಕೂರರು ಇತರ ಪ್ರಾಣಿಗಳಿಗಿಂತಲೂ ಆಳವಾಗಿ ಮಾನವನು ತನ್ನ ವ್ಯಕ್ತಿತ್ವವನ್ನು ಪರಿಭಾವಿಸುತ್ತಾನೆ ಎನ್ನುತ್ತಾರೆ. ನಿವೇದಿತಾ ಇಚ್ಛೆಯನ್ನು ಭಾವನೆಯ ಸಂವಾದಿ ಪದವನ್ನಾಗಿ ಬಳಸುತ್ತಾಳೆ. ''ಇಚ್ಛೆಯನ್ನು ಉದಾತ್ತಗೊಳಿಸಿದರಷ್ಟೇ ಸಾಲದು; ಅದನ್ನು ನೈಜ ವಿದ್ಯಾಭ್ಯಾಸದ ಆದರ್ಶವನ್ನು ಸಾಧಿಸಲು ಪರಿಣಾಮಕಾರಿಯನ್ನಾಗಿಸಬೇಕು... ಘನತೆಯಿಲ್ಲದ ದಕ್ಷತೆ ನಿರುಪಯುಕ್ತವಷ್ಟೇ ಅಲ್ಲ, ವಿನಾಶಕರ. ದಕ್ಷತೆ ಇಲ್ಲದ ಘನತೆ ಎಷ್ಟೋ ಮೇಲು.'' ಈ ಉದಾತ್ತ ಇಚ್ಛೆ ನಮ್ಮ ವ್ಯಕ್ತಿತ್ವದಲ್ಲಿ ಸೇರಿ ಹೋಗಲು ಕೃತಜ್ಞತೆ ಎಂಬ ಉಚ್ಚ ಭಾವನೆ ಸಹಕಾರಿ. ಋಣದ ಕಲ್ಪನೆ ನಮ್ಮಲ್ಲಿ ಕರ್ತವ್ಯ ಪ್ರಜ್ಞೆಯನ್ನು ಸದಾ ಜಾಗೃತವಾಗಿ ಇಟ್ಟಿರುತ್ತದೆ.

ಶಿಕ್ಷಣ ಎಂದರೆ ತರಬೇತಿಗೊಳಿಸಿದ ಗಮನದ ಹಾಗೂ ಏಕಾಗ್ರತೆಯ ಶಕ್ತಿ; ಕೊಟ್ಟ ವಿಷಯಕ್ಕೆ ಸಂಬಂಧಿಸಿದಂತೆ ಯೋಚಿಸುವ ಅರ್ಹತೆ ಹಾಗೂ ಅತ್ತಿತ್ತ ಹೋಗದಂತೆ ಸರಿಯಾಗಿ ಹಾಗೂ ಪರಿಣಾಮಕಾರಿಯಾಗಿ ಇಚ್ಛೆಯನ್ನು ಬಳಸುವ ಶಕ್ತಿಯೇ ಎನ್ನುತ್ತಾಳೆ ನಿವೇದಿತಾ. ಹೀಗೆ ಶಿಕ್ಷಣದ ಬಗೆಗಿನ ಪೂರ್ಣ ಸತ್ಯ ಇದೇ: ಏಕಾಗ್ರತೆ, ಪಟ್ಟುಹಿಡಿಯುವಿಕೆ, ಸರಿಯಾದ ಇಚ್ಛೆ. ''ತಮ್ಮ ಮಕ್ಕಳು ಶಾಲೆಗೆ ಹೊರಟೊಡನೆ ತಂದೆತಾಯಂದಿರು ತಮ್ಮ ಕೆಲಸ ಮುಗಿಯಿತೆಂದು ಭಾವಿಸಬಾರದು. ಮನೆಯಲ್ಲಿ ನಿತ್ಯವೂ ಧರ್ಮದ ಬಗೆಗಿನ ಚಿಂತೆ ನೆಲೆಸುವಂತೆ ಮಾಡಬೇಕು. ಕುಟುಂಬ ಸಾಮರಸ್ಯ, ದಾನ, ಮಿತವ್ಯಯ, ಗೌರವ, ದೇಶದ ನಾಯಕರನ್ನು ಗೌರವಿಸುವ ಪರಂಪರೆ, ಪೌರಾಣಿಕ ಸಾಹಿತ್ಯದ ಕಣಜ ಮೊದಲಾದ ಭಾರತೀಯ ಆದರ್ಶಗಳನ್ನು ಪ್ರತಿನಿತ್ಯ ಮಾತಿನಲ್ಲಿ ತರುವುದಲ್ಲದೆ, ಅವುಗಳ ಬಗ್ಗೆ ತಮ್ಮ ಮೆಚ್ಚುಗೆಯನ್ನು ತಿಳಿಸಬೇಕು. ಮಕ್ಕಳಿಗೆ ಸಿಗುವ ಉತ್ತಮ ಶಿಕ್ಷಣ ಎಂದರೆ ತಮ್ಮ ಪೋಷಕರೊಂದಿಗಿನ ಮಾತುಕತೆಯೇ.''

ನಿವೇದಿತಾ ಹೇಳುವ ಇನ್ನೊಂದು ಮಾತು, ಭಾರತವೇ ಅದರ ಚರಿತ್ರೆ; ಯಾತ್ರೆಯೇ ಅದನ್ನು ಅರಿತುಕೊಳ್ಳುವ ರೀತಿ. ಇಲ್ಲಿನ ಎಲ್ಲ ಶ್ರೇಷ್ಠ ತತ್ತ್ವಸಿದ್ಧಾಂತಗಳಿಗೂ ಅದನ್ನು ನಿರ್ವಹಿಸುವ ಸ್ಥಾನ ಹಾಗೂ ಸಂಪ್ರದಾಯ ಇದೆ. ಆದರೆ ಮಾಹಿತಿಯ ಸಂಗ್ರಹವೇ ಜ್ಞಾನವೆನ್ನಿಸಿಕೊಳ್ಳುತ್ತಿರುವ ಈ ಕಾಲದಲ್ಲಿ ನಮ್ಮ ಭಾವನಾತ್ಮಕ ದಿಕ್ಸೂಚಿಯನ್ನು ನಾವು ಕಳೆದುಕೊಂಡು, ಸಾಧನೆಯ ಉದ್ದೇಶವಿರುವ ನೈತಿಕ ಜೀವನಕ್ಕೆ ಮುಖ ತಿರುಗಿಸಿದ್ದೇವೆ.

ನಿವೇದಿತಾ ಗುರುಕುಲ ಶಿಕ್ಷಣವನ್ನು ಮೆಚ್ಚಿದ್ದಳು. ನಲಂದಾ ಮೊದಲಾದ ವಿಶ್ವವಿದ್ಯಾಲಯಗಳ ಜೊತೆಗೆ ಹಳ್ಳಿಗಳಲ್ಲಿ ಇತ್ತೀಚಿನವರೆಗೂ ನಡೆಯುತ್ತಿದ್ದ ತೋಲ್‌ಗಳಲ್ಲಿನ ಶಿಕ್ಷಣ ಕ್ರಮವನ್ನು ವಿವರಿಸುತ್ತಾಳೆ. ಬಂದ ವಿದ್ಯಾರ್ಥಿಗೆ ಗುರು ತನ್ನ ಮನೆಯಲ್ಲೇ ಉಚಿತ ಆಹಾರ, ವಸತಿಗಳನ್ನು ನೀಡುತ್ತಿದ್ದರು. ಆತನು ಗ್ರಂಥವೊಂದನ್ನು ಅನುಕ್ರಮವಾಗಿ ಆಳ ಅಧ್ಯಯನ ಮಾಡಬೇಕಿತ್ತು. ಪ್ರತಿ ಬೆಳಗ್ಗೆ ಪಠನ, ಪರೀಕ್ಷೆ. ಸಮಾಧಾನವಾಗದಿದ್ದರೆ, ಪುನಃ ಅದನ್ನೇ ಮನನ ಮಾಡಬೇಕು. ಮಧ್ಯಾಹ್ನ ಗುರುಗಳಿಂದ ಮುಂದಿನ ವಿಷಯದ ವಿಸ್ತರಣೆ. ಸಂಜೆ ಗುರುಗಳ ಜತೆ ಇಬ್ಬರು ಮೂವರು ಗುಂಪಾಗಿ ನಡೆದು ಹೋಗುವರು. ಅಧ್ಯಯನದಲ್ಲಿ ಎದುರಾದ ಪ್ರಶ್ನೆಗಳ ಬಗ್ಗೆ ಚರ್ಚೆ. ಕೆಲವೊಮ್ಮೆ ಇನ್ನೊಂದು ತೋಲ್‌ಗೆ ಭೇಟಿ, ಅಲ್ಲೂ ಚರ್ಚೆ. ವಿದ್ಯಾರ್ಥಿಗಳ ಸ್ವಂತಿಕೆ ಹಾಗೂ ಸಾಮರ್ಥ್ಯ ನಿಜವಾಗಿ ಬೆಳೆಯುವುದು ಇಂತಹ ನಿರಂತರ ಚರ್ಚೆಗಳಿಂದಲೇ. ಚರ್ಚೆ ಸತ್ಯ ದರ್ಶನಕ್ಕಾಗಿ, ವ್ಯಕ್ತಿಗಳಿಗಾಗಲ್ಲ. ಇಂತಹ ವಾಕ್ಯಾರ್ಥಗಳು ಮದುವೆಯ ಸಮಾರಂಭದಲ್ಲಿ ಪ್ರತಿಷ್ಠೆಗಾಗಿ ನಡೆಯುವುದು; ಪಣದ ಹಣ ವಿಜೇತರಿಗೆ. ವಿರಾಮ, ಆರಾಮಗಳು ಹೆಚ್ಚಿದ್ದ ಉಚಿತ ಶಿಕ್ಷಣವು ವಿದ್ಯಾರ್ಥಿಯ ಆಸಕ್ತಿಯ ಮೇಲೆ ಆಳವನ್ನು ಪಡೆದುಕೊಳ್ಳುತ್ತಿತ್ತು. ಕುಂಭಮೇಳ ಮೊದಲಾದ ಸಂದರ್ಭಗಳಲ್ಲಿ ಸೇರುವ ವಿದ್ವಾಂಸರ ವಿದ್ವತ್ ಸಭೆಯಲ್ಲಿ, ವಾದದ ಮೂಲಕ ಯೋಗ್ಯತೆಯ ನಿರ್ಣಯವಾಗುತ್ತಿತ್ತು. ಗುರುವಿನ ಶ್ರಮಕ್ಕೆ ಏನನ್ನೂ ನೀಡುತ್ತಿರಲಿಲ್ಲ. ಆದರೆ ಆಡಳಿತಗಾರರು ಆತನ ಅಭಿಪ್ರಾಯಕ್ಕೆ ಮನ್ನಣೆ ನೀಡುತ್ತಿದ್ದರು. ಲೌಕಿಕ ಯಶಸ್ಸಿಗಿಂತ ಮಿಗಿಲಾಗಿ, ಅಂತಃಕರಣ, ಅಮೂರ್ತ ಚೇತನಗಳೇ ಜೀವನವಾಗಿದ್ದ ಕಾಲ ಅದು. ಇವುಗಳು ಕಲಿಕೆಯ ಅದ್ಭುತ ವಿನ್ಯಾಸದ ಭಾಗಗಳಾಗಿದ್ದು, ಇದನ್ನು ಪುನಃ ಬೆಳಕಿಗೆ ತರುವುದು ತಾಯಿ ಭಾರತಿಯ ಮಕ್ಕಳ ಕರ್ತವ್ಯವಾಗಬೇಕು. ❖

# ನಿವೇದಿತಾ ಕಂಡಂತೆ ಭಾರತೀಯ ಮಹಿಳೆ



ಡಾ. ವಿ. ಶ್ರೀಮತಿ

ಭಾರತೀಯ ಮಹಿಳೆ ಪ್ರಾಚೀನ ಹಾಗೂ ಆಧುನಿಕ ಜಗತ್ತಿನಲ್ಲಿ ನಮ್ಮ ಸಮಾಜದ ಹಾಗೂ ಸಂಸ್ಕೃತಿಯ ಪರಿಪಾಲನೆ ಮಾಡುತ್ತ ಬಂದಿರುವುದು ಎಷ್ಟೇ ಪ್ರಧಾನವಾದ ಸಂಗತಿಯಾಗಿದ್ದರೂ, ನಾನಾಬಗೆಯ ಸಂದರ್ಭಗಳಲ್ಲಿ ಅವಳ ಸ್ಥಾನಮಾನ, ಬೆಳವಣಿಗೆ ಹಾಗೂ ಹಕ್ಕುಗಳಿಗೆ ಹೆಚ್ಚಿನ ಮಹತ್ವ ನೀಡಬೇಕಾಗಿರುವುದು ಅತ್ಯಂತ ಪ್ರಧಾನವಾದ ಸಂಗತಿ. ಈ ಕುರಿತಂತೆ ನಿವೇದಿತಾ ವಿಚಾರಗಳನ್ನು ವಿವರಿಸಿರುವ ಲೇಖಕಿ, ಮೈಸೂರಿನಲ್ಲಿ ಸಂಸ್ಕೃತ ಉಪನ್ಯಾಸಕಿಯಾಗಿದ್ದಾರೆ. ಸಂಗೀತ, ಕಲೆ, ಶಾಸ್ತ್ರ, ಅಧ್ಯಾತ್ಮ ಹೀಗೆ ಹಲವು ಕ್ಷೇತ್ರಗಳಲ್ಲಿ ತೊಡಗಿಕೊಂಡಿರುವ ಅವರು ಅನೇಕ ಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದಾರೆ.

**‘ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ’** ಎಂಬ ಉದಾತ್ತ ಭಾವನೆಯನ್ನು ಜಗತ್ತಿಗೆ ಸಾರಿ ಹೇಳಿ ಅದನ್ನನುಸರಿಸಿದ ಭವ್ಯ ದಿವ್ಯ ನಾಡು ಭಾರತ. ಗಾರ್ಗಿ, ಮೈತ್ರೇಯಿ, ವಾಚಕ್ನವಿ ಮುಂತಾದ ಬ್ರಹ್ಮವಾದಿನಿಯರಿಗೆ ಜನ್ಮ ನೀಡಿದ ಪವಿತ್ರಭೂಮಿ ನಮ್ಮ ಭಾರತ. ಮಾತೃಭೂಮಿ ಎಂದು ದೇಶಕ್ಕೆ ತಾಯಿಸ್ಥಾನದ ಗೌರವವನ್ನು ನೀಡಿರುವುದು ನಮ್ಮ ಭಾರತದಲ್ಲಿ ಮಾತ್ರ. ‘**ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ**’ ಎಂಬ ನುಡಿ ತಾಯಿಗೂ, ತಾಯ್ನಾಡಿಗೂ ಸಂದಿರುವ ಉತ್ಕೃಷ್ಟತೆಯನ್ನು ತಿಳಿಸುತ್ತದೆ.

ಆದರೆ ದುರದೃಷ್ಟವಶಾತ್ ಕಾಲಪ್ರಭಾವಕ್ಕೊಳಗಾಗಿ ಒಂದು ಕಾಲಘಟ್ಟದಲ್ಲಿ ಭಾರತದಲ್ಲಿ ಮಹಿಳೆಯ ಜೀವನವು ನಾನಾ ಕಾರಣಗಳಿಂದಾಗಿ ಸ್ವಾತಂತ್ರ್ಯ ವಿಹೀನವಾಗಿ ಬಳಲಬೇಕಾಯಿತು. ಈ ಹಂತದಲ್ಲಿ ಶಿಕ್ಷಣ, ಸಾಮಾಜಿಕ ಸ್ಥಾನಮಾನಗಳೆಲ್ಲದರಿಂದ ವಂಚಿತಳಾದ ಮಹಿಳೆ ನಾಲ್ಕು ಗೋಡೆಯ ಮಧ್ಯೆ ಜೀವಿಸಬೇಕಾಗಿತ್ತು. ಭಾರತೀಯ ಮಹಿಳೆಯರಲ್ಲಿ ಪ್ರಾಚೀನಕಾಲದಿಂದಲೂ ಹಲವಾರು ಹಿರಿಮೆಗಳಿದ್ದರೂ ಶಿಕ್ಷಣದ ಕೊರತೆ ಹಾಗೂ ಕೆಲವು ಮೂಢನಂಬಿಕೆಗಳು ಮತ್ತು ಆಚರಣೆಗಳ ಹೆಸರಿನಲ್ಲಿ ಆಕೆಯು ಶೋಷಣೆಗೊಳಗಾಗಿದ್ದಳು. ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ವಿದೇಶೀ ಮಹಿಳೆಯೊಬ್ಬಳು ಭಾರತೀಯ ಸಂಸ್ಕೃತಿಯ ಹಿರಿಮೆಗೆ ಮಾರುಹೋಗಿ, ಭಾರತೀಯ ನಾರಿಯರಲ್ಲಿ ಸುಪ್ತವಾಗಿದ್ದ ಅಂತಃಚೈತನ್ಯವನ್ನು ಬಡಿದೆಬ್ಬಿಸಿ, ಪ್ರಾಚೀನ ಭಾರತೀಯ ಮಹಿಳೆಯ ಶ್ರೇಷ್ಠತ್ವವನ್ನು ಸಾರಿ ಹೇಳಿ, ಸ್ತ್ರೀಯರಲ್ಲಿ ಶಿಕ್ಷಣ, ಒಗ್ಗಟ್ಟು, ಛಲ, ರಾಷ್ಟ್ರಭಕ್ತಿ, ಆಧ್ಯಾತ್ಮಿಕತೆಗಳನ್ನು ತಮ್ಮದಾಗಿಸಿಕೊಳ್ಳುವ ಅವಕಾಶಗಳನ್ನು ಕಲ್ಪಿಸಿ, ಅವರಿಗಾಗಿಯೇ ದುಡಿದು ಜೀವನದ ಸಾರ್ಥಕತೆಯನ್ನು ಕಂಡುಕೊಂಡಳೆಂದರೆ, ಆಕೆಗೆ ಗೌರವದಿಂದ ತಲೆಬಾಗದಿರಲು ಸಾಧ್ಯವೆ? ಆಕೆಯೇ ಸ್ವಾಮಿ ವಿವೇಕಾನಂದರ ಅಧ್ಯಾತ್ಮ ಪುತ್ರಿ ‘ಸೋದರಿ ನಿವೇದಿತಾ.’

ಲಂಡನ್ನಿನಲ್ಲಿ ಪ್ರಥಮ ಬಾರಿಗೆ ಸ್ವಾಮಿ ವಿವೇಕಾನಂದರನ್ನು ಕಂಡ ಮಾರ್ಗರೇಟ್ ಎಲಿಜಬೆತ್ ನೋಬಲ್ ಕೂಡಲೆ ಅವರ ಪ್ರಭಾವಲಯಕ್ಕೆ ಸಿಲುಕಿ ಮುಂದೆ ಸೋದರಿ ನಿವೇದಿತಾ ಆಗಿರುವಳು. ‘‘ನನ್ನ ದೇಶದ ಸ್ತ್ರೀಯರನ್ನು ಉದ್ಧಾರ ಮಾಡುವ ಯೋಜನೆಯಲ್ಲಿದ್ದೇನೆ. ಅದರಲ್ಲಿ ನೀನು ಸಹಾಯ ಮಾಡಬಲ್ಲೆಯಾ?’’ ಎಂಬ ಸ್ವಾಮೀಜಿಯವರ ನುಡಿಯೇ ಸೋದರಿ ನಿವೇದಿತಾಳಿಗೆ ಆಕೆಯ ಮುಂದಿನ ಮಾರ್ಗವನ್ನು ತೋರಿಸಿಕೊಟ್ಟಿತು. ಗುರುಗಳಿಗೆ ನೀಡಿದ ವಚನವನ್ನು ಆಕೆ ತ್ರಿಕರಣಪೂರ್ವಕವಾಗಿ ಈಡೇರಿಸಿ ಭಾರತದ ಅತ್ಯಮೂಲ್ಯ ನಿಧಿಯೆನಿಸಿದಳು.

೧೮೯೮ ಜನವರಿ ೨೮ ರಂದು ನಿವೇದಿತಾ ಭಾರತಕ್ಕೆ ಆಗಮಿಸಿದಳು. ೧೮೯೮ ಮಾರ್ಚ್ ೧೭ರಂದು ಆಕೆ ಶ್ರೀಮಾತೆಯವರನ್ನು ಪ್ರಥಮಬಾರಿಗೆ ಭೇಟಿಯಾದಳು. ಅದು ತನ್ನ ಜೀವನದ ಅತ್ಯಂತ ಪ್ರಮುಖ ದಿನ ಎಂದು ಆಕೆ ವರ್ಣಿಸಿರುವಳು. ಶ್ರೀಮಾತೆಯ

ಸಂಪೂರ್ಣ ಆಶೀರ್ವಾದವನ್ನು ಪಡೆದು, ಅವರ ಪ್ರೀತಿಯ ಝರಿಯಲ್ಲಿಮಿಂದ ಆಕೆ ಭಾರತೀಯ ನಾರಿಯ ಹೃದಯ ವೈಶಾಲ್ಯವನ್ನು ಅರಿತಳು.

ಹಿಂದೂ ನಾರಿಯರ ಜೀವನಕ್ರಮವನ್ನು, ಅವರ ಆಲೋಚನಾ ಲಹರಿಯನ್ನು, ಅವರ ಸಂಪ್ರದಾಯಗಳನ್ನು ತಿಳಿಯಲು ತಾನು ಅವರಲ್ಲಿ ಒಂದಾಗಬೇಕು ಎಂದು ಅರಿತ ನಿವೇದಿತಾ ಮನಃಪೂರ್ವಕವಾಗಿ ಭಾರತೀಯ ಮಹಿಳೆಯಂತೆ ಸರಳ ಜೀವನವನ್ನನುಸರಿಸುತ್ತಾ, ಅವರ ವಿಶ್ವಾಸವನ್ನು ಗಳಿಸುವ ಪ್ರಯತ್ನವನ್ನು ಮಾಡಿದಳು.

ಭಾರತೀಯ ಮಹಿಳೆಯರ ಸೇವೆ ಮಾಡಿ ಅವರೊಡನೆ ಬೆರೆತು, ಅವರನ್ನು ಅವರಿರುವ ಸ್ಥಿತಿಯಿಂದ ಮೇಲಕ್ಕೆತ್ತಬೇಕಾದರೆ ಅವರ ಜೀವನದ ಪರಿಪೂರ್ಣ ಪರಿಚಯವಾಗಬೇಕು. ಇದಕ್ಕಾಗಿ ಸೋದರಿಯು ಕಲ್ಕತ್ತೆಯಲ್ಲಿ ಶ್ರೀಮಾತೆಯವರೊಡನೆ ವಾಸಿಸಲು ಇಚ್ಛಿಸಿದಳು. ಇದರಿಂದ ಭಾರತೀಯ ಮಹಿಳೆಯಂತೆಯೇ ತಾನೂ ಜೀವಿಸಲು, ಅವರೊಳಗೆ ಒಂದಾಗಿ ಅವರ ವಿಶ್ವಾಸವನ್ನು ಗಳಿಸಲು ಸುಲಭವಾಗುವುದೆಂದು ಆಕೆಯ ಚಿಂತನೆ.

ಭಾರತೀಯ ಹೆಣ್ಣುಮಕ್ಕಳಿಗೆ ಭಾರತೀಯತ್ವದ ಪರಿಚಯವಾಗಬೇಕು. 'ತಾನು ಭಾರತೀಯಳು' ಎಂದು ಹೆಮ್ಮೆಯಿಂದ ಹೇಳುವಂತಾಗಬೇಕು. ಅದಕ್ಕಾಗಿ ಅವಳಿಗೆ ಯೋಗ್ಯ ವಿದ್ಯಾಭ್ಯಾಸವನ್ನು ನೀಡಬೇಕು. ವಿದ್ಯೆ ಎಂದರೆ ನಮ್ಮ ಪ್ರಾಚೀನತೆಯನ್ನು ಆಕೆಗೆ ತಿಳಿಸಬೇಕು. ನಮ್ಮ ಪದ್ಧತಿ, ಆಚಾರ-ವಿಚಾರಗಳನ್ನು ಆಕೆ ಹೆಮ್ಮೆಯಿಂದ ಅನುಸರಿಸುವಂತಾಗಬೇಕು. ಸ್ವಾವಲಂಬಿಯಾಗಿ, ಸನ್ನಡತೆಯಿಂದ ನಡೆಯಲು ಬೇಕಾದ ಆತ್ಮಸ್ಥೈರ್ಯವನ್ನು ತುಂಬುವುದೇ ವಿದ್ಯೆ ಎಂಬುದು ನಿವೇದಿತಾಳ ಬಲವಾದ ನಂಬಿಕೆಯಾಗಿತ್ತು.

ಭಾರತೀಯ ಕುಟುಂಬ ವ್ಯವಸ್ಥೆಯನ್ನು ಸೋದರಿಯು ಮುಕ್ತಕಂಠದಿಂದ ಪ್ರಶಂಸಿಸಿರುವಳು. ಭಾರತೀಯ ಕುಟುಂಬ ಉತ್ತಮವಾದುದು. ಅಲ್ಲಿ ಉದ್ವೇಗವಿಲ್ಲ. ಶಾಂತ, ಸುಂದರ ಪರಿಸರ. ವಿಶ್ವಾಸಪೂರ್ವ ನಡವಳಿಕೆ. ಪರಸ್ಪರ ಸಹಕಾರ, ಪ್ರೀತಿ, ವಿಶ್ವಾಸಗಳೆಲ್ಲವನ್ನೂ ಆಕೆ ಕಂಡು ಆನಂದಿಸಿ, ಅನುಭವಿಸಿದಳು. ಒಬ್ಬ ಅವಿದ್ಯಾವಂತ ಮಹಿಳೆಯೇ ಆರೋಗ್ಯ, ಮನೆವಾರ್ತೆ, ಅತಿಥಿಸತ್ಕಾರ ಮೊದಲಾದ ಎಲ್ಲ ಜವಾಬ್ದಾರಿಗಳನ್ನೂ ಯಾವುದೇ ತೊಂದರೆಯಿಲ್ಲದೆ ನಿಭಾಯಿಸಲು ಸಾಧ್ಯವಾಗುವುದಾದರೆ ವಿದ್ಯಾವಂತ ಮಹಿಳೆ ಇನ್ನೂ ಎಷ್ಟು ಚೆನ್ನಾಗಿ ಮಾಡಬಹುದು? ಹಾಗಾಗಿ ಭಾರತೀಯ ಮಹಿಳೆಯರಿಗೆ ವಿದ್ಯೆ ನೀಡುವುದೇ ತನ್ನ ಪ್ರಥಮ ಕರ್ತವ್ಯ ಎಂದು ಆಕೆ ಆಲೋಚಿಸಿದಳು. ಇದಕ್ಕಾಗಿ ಹೆಣ್ಣುಮಕ್ಕಳಿಗಾಗಿ **''ಶ್ರೀರಾಮಕೃಷ್ಣ ಬಾಲಿಕಾ ವಿದ್ಯಾಲಯ''** ಎಂಬ ಹೆಸರಿನಲ್ಲಿ ಶಾಲೆಯೊಂದನ್ನು ತೆರೆದಳು. ಶ್ರೀಮಾತೆಯವರೇ ಅದನ್ನು ಉದ್ಘಾಟಿಸಿ ಆಶೀರ್ವದಿಸಿದ್ದು ವಿಶೇಷ. ಅವರ ಆಶೀರ್ವಾದವೇ ಅತ್ಯಧಿಕ ಶುಭ, ಫಲದಾಯಕವೆಂದು ಸೋದರಿ ನಿವೇದಿತಾ ಅತ್ಯಂತ ಸಂತೋಷಪಟ್ಟಳು.

ಈ ವಿದ್ಯಾಲಯದಲ್ಲಿ ಶಿಕ್ಷಣ ಪಡೆದ ಸ್ತ್ರೀಯರು ಭಾರತದ ಸಕಲ ಸ್ತ್ರೀ-ಪುರುಷರ ಮಧ್ಯೆ ಶ್ರೇಷ್ಠ ಪ್ರತಿಭಾನ್ವಿತರಾಗಬೇಕು ಎಂಬುದು ಸ್ವಾಮಿ ವಿವೇಕಾನಂದರ ದೂರದೃಷ್ಟಿಯ ಮಹದಾಸೆಯಾಗಿತ್ತು. ಭಾರತೀಯ ಸ್ತ್ರೀಯರ ಬಗ್ಗೆ ಅತ್ಯಂತ ಕಾಳಜಿ ಹೊಂದಿದ ನಿವೇದಿತಾಳು ಅವರ ಸ್ಥಿತಿ-ಗತಿಗಳ ಉದ್ಧಾರಕ್ಕಾಗಿ ನಾನಾ ಕಾರ್ಯಕ್ರಮಗಳನ್ನು ರೂಪಿಸಲು ಚಿಂತಿಸಿದಳು. ಆದರೆ ಇದು ಕಾರ್ಯಗತಗೊಳ್ಳಲು ಹಣದ ಅವಶ್ಯಕತೆ ತೀವ್ರವಾಗಿತ್ತು. ಅದಕ್ಕಾಗಿ ದೇಶ-ವಿದೇಶಗಳಲ್ಲಿ ಭಾರತೀಯ ಮಹಿಳೆಯ ಕುರಿತಂತೆ ಉಪನ್ಯಾಸಗಳನ್ನು ನೀಡಿ ತನ್ನ ಉದ್ದೇಶಕ್ಕಾಗಿ ಹಣ ಸಂಗ್ರಹಣೆಯನ್ನು ಮಾಡಿರುವಳು.

ನ್ಯೂಯಾರ್ಕಿನಲ್ಲಿ 'ಹಿಂದೂ ನಾರಿಯರ ಆದರ್ಶ', ಎಡಿನ್ ಬರೋನಲ್ಲಿ 'ಭಾರತೀಯ ಸ್ತ್ರೀತ್ವದ ಆದರ್ಶಗಳು', ಗೈಟಿ ಥಿಯೇಟರಿನಲ್ಲಿ 'ಭಾರತೀಯ ನಾರಿ' ಎಂಬುದು ಆಕೆ ನೀಡಿರುವ ಕೆಲವು ಪ್ರಮುಖ ಉಪನ್ಯಾಸಗಳು.

ಗೈಟಿ ಥಿಯೇಟರಿನಲ್ಲಿ ಉಪನ್ಯಾಸ ನೀಡುತ್ತಾ, ''ಆಧುನಿಕ ಯುಗದ ಯೂರೋಪಿನಲ್ಲಿ ಸ್ತ್ರೀಯರು ಯಾವ ಗೌರವ ಸ್ಥಾನವನ್ನು ಅನುಭವಿಸುತ್ತಿರುವರೋ, ಭಾರತೀಯ ಸ್ತ್ರೀಯರು ವೈದಿಕ ಯುಗದಲ್ಲಿ ಅದಕ್ಕೆ ಅನುರೂಪವಾದ ಸ್ಥಾನವನ್ನು ಪಡೆದಿದ್ದರು. ಭಾರತದಲ್ಲಿ ಯುಗಯುಗದಲ್ಲಿಯೂ ಸೀತೆ, ಸಾವಿತ್ರಿಯಂತಹ ಸ್ತ್ರೀಯರು ಪೂಜನೀಯರಾಗಿದ್ದರು. ಸ್ತ್ರೀ ಆದರ್ಶದ ಈ ವೈಶಿಷ್ಟ್ಯಕ್ಕೆ ಧಾರ್ಮಿಕ ಬುದ್ಧಿಯೇ ಕಾರಣ'' ಎಂದು ನುಡಿದಿರುವಳು.

ಪ್ರಾಚೀನ ಭಾರತದ ಆದರ್ಶ ನಾರಿಯರ ಬಗ್ಗೆ ನಿವೇದಿತಾಳಿಗಿದ್ದ ಪೂಜ್ಯಭಾವನೆ ಇದರಿಂದ ವ್ಯಕ್ತವಾಗುತ್ತದೆ. ಭಾರತೀಯ ಸ್ತ್ರೀಯರ ಹರ್ಷಚಿತ್ತ ಜೀವನ, ಸಾಮಾಜಿಕ ಪ್ರಾಮುಖ್ಯ ಮತ್ತು ಉತ್ತಮ ಚಾರಿತ್ರ್ಯ ಇವು ರಾಷ್ಟ್ರಜೀವನದ ಅತಿ ಭವ್ಯ ಸಂಪತ್ತು ಎಂದು ಆಕೆ ನುಡಿದಿರುವಳು.

ಪವಿತ್ರತೆ ಮತ್ತು ಶಕ್ತಿ ದೇಶದ ಅಮೂಲ್ಯಭಂಡಾರ. ಇದನ್ನು ಬೆಳೆಸಲು ಸ್ತ್ರೀಯರೇ ಹೆಚ್ಚು ಸಮರ್ಥರು. ಪುರುಷ ಏನೇ ಸಾಧಿಸಬೇಕಾದರೂ ಆತನಿಗೆ ಮೂಲ ನೆಲೆ ಮನೆ. ಆ ಮನೆಯ ಏಳ್ಗೆ ಗೃಹಿಣಿಯನ್ನೇ ಅವಲಂಬಿಸಿರುತ್ತದೆ. ಅದಕ್ಕಾಗಿಯೇ **'ಗೃಹಿಣೀ ಗೃಹಮುಚ್ಯತೇ'** ಎಂದು ಹೇಳಲಾಗಿದೆ. ನಮ್ಮ ಸಂಸ್ಕೃತಿಯಲ್ಲಿ ಗೃಹಿಣಿಗೆ ನೀಡಿರುವ ಮಹತ್ವದ ಸ್ಥಾನ ಇದರಿಂದ ಅರಿವಾಗುತ್ತದೆ.

ಭಾರತದ ಸ್ತ್ರೀಯರ ಎಲ್ಲ ಕಾರ್ಯಗಳ ಹಿಂದೆ ಸಮಸ್ತ ಕುಟುಂಬದ ಯೋಗಕ್ಷೇಮದ ಚಿಂತನೆಯಿದೆ ಎಂಬುದು ನಿವೇದಿತಾಳಿಗೆ ಅರಿವಾಗಿತ್ತು. ಹಾಗಾಗಿಯೇ ಆಕೆ ಭಾರತೀಯ ಮಹಿಳೆಯ ದೈನಂದಿನ ಚಟುವಟಿಕೆಗಳನ್ನೂ ಆಸಕ್ತಿ, ವಿಸ್ಮಯಗಳಿಂದ ಗಮನಿಸುತ್ತಾ ಅದರ ಹಿನ್ನೆಲೆಯನ್ನು ಅರಿಯುತ್ತಿದ್ದಳು. ಅದನ್ನು ಆಕೆಯ ಮಾತಿನಲ್ಲೇ ಹೇಳಬೇಕೆಂದರೆ: ''ಭಾರತೀಯ ಮಹಿಳೆಯರು ಬೆಳಗಾಗೆದ್ದು ಮನೆಯ ಮುಂದೆ ಗುಡಿಸಿ, ನೀರು ಹಾಕಿ, ರಂಗೋಲಿ ಹಾಕುವುದು ಹಾಗೂ ಹೊಸ್ತಿಲ ಪೂಜೆ ಮಾಡುವುದು ಪವಿತ್ರ ಕೆಲಸ. ಸಾವಿರಾರು ವರ್ಷಗಳಿಂದ ಇಂತಹ ಕಾರ್ಯಗಳನ್ನು ಮಾಡುತ್ತಿರುವುದು ಭಾರತೀಯ ಮಹಿಳೆಯ ತಾಳ್ಮೆ, ಸರಳ ಜೀವನ ಪವಿತ್ರ ಭಾವನೆಯ ಪ್ರತೀಕವಾಗಿದೆ. ಈ ತಾಳ್ಮೆಯೇ ನಾಗರಿಕತೆಯ

ಬೆಳವಣಿಗೆಗೆ ಕಾರಣ. ಭಾರತೀಯ ಮಹಿಳೆಯ ಮಾನಸಿಕ ಶಕ್ತಿಯೊಡನೆ ಬೆರೆತ ಸಹನೆಯೇ ಭಾರತೀಯ ನಾಗರಿಕತೆಯನ್ನು ಉಂಟುಮಾಡಿದೆ ಹಾಗೂ ಮಾಡುತ್ತಿದೆ.''

ಸಣ್ಣ ಸಣ್ಣ ಕಾರ್ಯಗಳಿಂದಲೇ ಹೇಗೆ ಮಹತ್ತನ್ನು ಸಾಧಿಸಬಹುದು ಎಂಬುದನ್ನು ನಿವೇದಿತಾಳು ಇಲ್ಲಿ ತೋರಿಸಿರುವಳು. ಭಾರತೀಯ ಮಹಿಳೆಯ ಇಂತಹ ಕಾರ್ಯಗಳನ್ನು ತನ್ನ ಕರ್ತವ್ಯವೆಂದು ನಿಷ್ಠೆಯಿಂದ ಮಾಡುವಳೇ ಹೊರತು ಇದಕ್ಕಾಗಿ ಎಂದೂ ಬೇಸರಿಸಿಕೊಳ್ಳುವುದಿಲ್ಲ. ಇದಕ್ಕೆ ಭಾರತೀಯ ಮನಸ್ಥಿತಿಯೇ ಕಾರಣ ಎಂಬುದನ್ನು ಸೋದರಿಯು ವಿಶ್ಲೇಷಿಸಿರುವಳು.

ಭಾರತೀಯ ಮಹಿಳೆಯ ಬದುಕು ಆದರ್ಶಮಯ, ಸಾತ್ವಿಕತೆಯ ಪ್ರತೀಕ ಎಂದರಿತ ಸೋದರಿಯು ಹೃದಯತುಂಬಿ ಭಾರತೀಯ ನಾರಿಯರ ಸರಳ ಜೀವನವನ್ನು ಕೊಂಡಾಡುತ್ತಾಳೆ – ''ಭಾರತೀಯ ಮಣ್ಣಿನಲ್ಲಿ ಅರಳಿದ ಸುಂದರ ಕಾವ್ಯದಂತಿದೆ ಮಹಿಳೆಯ ಬದುಕು. ಕಳೆದ ಕೆಲವು ಶತಮಾನಗಳಿಂದ ಪಾಶ್ಚಾತ್ಯ ರಾಷ್ಟ್ರಗಳು ಹೊಂದಾಣಿಕೆ ಮತ್ತು ಸಾಮಾಜಿಕ ಒಗ್ಗಟ್ಟನ್ನು ಕಳೆದುಕೊಂಡಿವೆ. ಆದರೆ ಅದು ಭಾರತೀಯರಲ್ಲಿ ಜೀವಂತವಾಗಿದೆ.''

ಭಾರತೀಯ ನಾರಿಯರಲ್ಲಿ ಕಂಡುಬರುವ ಒಂದೊಂದು ಗುಣವನ್ನೂ ಗಮನಿಸಿ, ವಿಶ್ಲೇಷಿಸಿ, ಅದನ್ನು ಗೌರವಿಸುವ ಔದಾರ್ಯವಂತೆ ಸೋದರಿ ನಿವೇದಿತಾ. ಆಕೆ ಗಮನಿಸಿರುವ ಕೆಲವು ಅಂಶಗಳೆಂದರೆ – ''ಬಂಗಾಳಿ ಸ್ತ್ರೀಯು ಸಂತರ ರೀತಿಯಲ್ಲಿ ತನ್ನ ಪತಿಯ ಸೇವೆ ಮಾಡಿ ಮಕ್ಕಳನ್ನೂ, ಮನೆಯವರನ್ನೂ ನೋಡಿಕೊಳ್ಳುತ್ತಾಳೆ.

''ಮಹಾರಾಷ್ಟ್ರದ ಹೆಂಗಸರು ಯಾವುದೇ ಪಶ್ಚಿಮ ದೇಶದ ಸ್ತ್ರೀಯರಂತೆ ಶಕ್ತಿಯುತರಾಗಿರುವರು.

''ರಜಪೂತ ಮಹಿಳೆ ತಮ್ಮ ವಂಶದ ಧೈರ್ಯದ ಬಗ್ಗೆ ಎಷ್ಟು ಅಭಿಮಾನಶಾಲಿಗಳಾಗಿರುತ್ತಾರೆಂದರೆ ಅವರು ತಮ್ಮ ಪತಿಯನ್ನು ಮರಣದಲ್ಲೂ ಹಿಂಬಾಲಿಸುತ್ತಾರೆ.

''ಗುಜರಾತಿನ ಮಹಿಳೆಯರು ವ್ಯಾಪಾರದ ಕುಶಲತೆಯನ್ನು ಅರಿತಿರುತ್ತಾರೆ. ಕೃಷಿ ಪ್ರಧಾನ ಕುಟುಂಬಗಳಲ್ಲಿ ಮಹಿಳೆ ಪುರುಷರಿಗೆ ಸರಿಸಮಾನವಾಗಿ ದುಡಿಯುವರು.''

ಒಟ್ಟುಕುಟುಂಬ ವ್ಯವಸ್ಥೆ ಭಾರತದ ಒಂದು ವಿಶೇಷತೆ. ಈ ಒಟ್ಟುಕುಟುಂಬದ ಪರಿಕಲ್ಪನೆ ನಿವೇದಿತಾಳಿಗೆ ಅತ್ಯಂತ ಮೆಚ್ಚುಗೆಯಾಗಿತ್ತು. ಸೋದರರು ಹಾಗೂ ಅವರ ಪತ್ನಿಯರ ನಡುವೆ ಕಂಡುಬರುವ ಸೌಹಾರ್ದ ಸಂಬಂಧ, ಮನೆಯ ಎಲ್ಲ ಮಕ್ಕಳನ್ನೂ ಎಲ್ಲ ಸ್ತ್ರೀಯರೂ ಪ್ರೀತಿಸುವುದು, ಸೊಸೆ ಹಾಗೂ ಮಾವನ ನಡುವೆ ಕಂಡುಬರುವ ಆತ್ಮೀಯತೆ, ದಾಯಾದಿಗಳೊಡನೆ ವಿಶ್ವಾಸ – ಇವೆಲ್ಲವೂ ಆಕೆಗೆ ಅಚ್ಚರಿಯ ವಿಷಯವಾಗಿತ್ತು. ''ಪ್ರತಿ ಮಹಿಳೆಗೂ ತನ್ನ ಮನೆಯಲ್ಲಿ ಸೂಕ್ತ ಸ್ಥಾನಮಾನ ದೊರಕುತ್ತಿತ್ತು. ಹಿಂದೂ ಕುಟುಂಬದ ಎಲ್ಲ ಸ್ತ್ರೀಯರೂ, ಪುರುಷರೂ ಪರಸ್ಪರ ಆರೋಗ್ಯಕರ, ಭಾವನಾತ್ಮಕ ಸಂಬಂಧಗಳನ್ನು ಹೊಂದಿರುವರು. ಇದು ಪಶ್ಚಿಮದ ಏಕಾಂಗಿ ಮಹಿಳೆಗೆ, ದುಡಿಯುವ ಮಹಿಳೆಗೆ ದಕ್ಕದ ಸೌಲಭ್ಯ '' ಎಂದು ಆಕೆ ಭಾರತದ ಕುಟುಂಬ ವ್ಯವಸ್ಥೆಯನ್ನು ಮೆಚ್ಚಿಕೊಂಡಾಡಿರುವಳು.

ಒಂದು ಕುಟುಂಬ ಶಾಂತ ರೀತಿಯಿಂದ ಸುವ್ಯವಸ್ಥಿತವಾಗಿ ನಡೆಯಬೇಕಾದರೆ ಅಲ್ಲಿ ಮಹಿಳೆಯ ಪಾತ್ರ ಅತ್ಯಂತ ಪ್ರಮುಖವಾದುದು. ಭಾರತೀಯ ಮಹಿಳೆಯು ಸಮಗ್ರ ಕುಟುಂಬವನ್ನಲ್ಲದೆ ಕೇವಲ ತನ್ನ ಸ್ವಾರ್ಥವನ್ನು ಎಂದೂ ಯೋಚಿಸಲಾರಳು. ತನ್ನಿಂದ ಕುಟುಂಬಕ್ಕೆ ತೊಂದರೆಯಾಗುವುದನ್ನು ಸಹಿಸಲಾರಳು. ಕುಟುಂಬದ ಸದಸ್ಯರೆಲ್ಲರ ಹಿತಕ್ಕಾಗಿ ಯಾವುದೇ ತ್ಯಾಗಕ್ಕೂ ಸಿದ್ಧಳಿರುವಳು ಎಂಬ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದ ನಿವೇದಿತಾಳು ಅವೆಲ್ಲವನ್ನೂ ತನ್ನ ಗ್ರಂಥಗಳಲ್ಲಿ ದಾಖಲಿಸಿರುವಳು.

ಕುಟುಂಬದ ಶಾಂತಿ ಮತ್ತು ಮರ್ಯಾದೆಯನ್ನು ಕಾಪಾಡುವುದಕ್ಕಾಗಿಯೇ ಪತಿ–ಪತ್ನಿಯರು ಎಲ್ಲರ ಎದುರಿನಲ್ಲಿ ಸಲಿಗೆಯಿಂದ ಮಾತನಾಡುತ್ತಿರಲಿಲ್ಲ. ಪತ್ನಿಯು ಪತಿಯನ್ನು ಹೊಗಳುವುದಿರಲಿ ಆತನ ಹೆಸರನ್ನೂ ಹೇಳುತ್ತಿರಲಿಲ್ಲ.

ಭಾರತೀಯ ಮಹಿಳೆಯರು ಸಂಸಾರಕ್ಕಾಗಿ ಮಾಡುವ ತ್ಯಾಗ ಮತ್ತು ಸೇವೆಗಳು, ಪಡುವ ಕಷ್ಟಗಳು ಬೇರಾರಿಗೂ ಅರಿವಾಗುತ್ತಿರಲಿಲ್ಲ. ಆಕೆಯೂ ಅದನ್ನು ಯಾರಿಗೂ ಹೇಳುತ್ತಿರಲಿಲ್ಲ. ಇದು ಆಕೆಯ ಆತ್ಮಸ್ಥೈರ್ಯ ಹಾಗೂ ಸಹನೆಯನ್ನು ತೋರಿಸುತ್ತದೆ. ಮಹಿಳೆ ತನ್ನ ಕುಟುಂಬದ ಮೇಲೆ ಹೊಂದಿರುವ ಅತಿಯಾದ ಮಮತೆಯೇ ಪುರುಷನಂತೆ ಆಕೆ ಸಾಮಾಜಿಕ ಬದುಕಿನಲ್ಲಿ ಪಾಲ್ಗೊಳ್ಳುವುದನ್ನು ತಡೆಯುತ್ತಿತ್ತು. ಅತಿಥಿಗಳು ಎಷ್ಟೇ ಜನ ಬಂದರೂ ಅವರಿಗೆ ಅಡಿಗೆ ಮಾಡಿ ಬಡಿಸುವುದರಲ್ಲಿ ಭಾರತೀಯ ಮಹಿಳೆ ಸೋಲುತ್ತಿರಲಿಲ್ಲ. ಅತಿಥಿಗಳನ್ನು ಎಂದೂ ತಿರಸ್ಕಾರದಿಂದ ಕಾಣುತ್ತಿರಲಿಲ್ಲ. **'ಅತಿಥಿದೇವೋ ಭವ'** ಎಂಬ ಮಾತು ಪ್ರತಿಗೃಹದಲ್ಲೂ ಸಾಕಾರವಾಗಿರುವುದನ್ನು ಆಕೆ ಗಮನಿಸಿರುವಳು. ಗೃಹಸ್ಥಾಶ್ರಮದ ಕರ್ತವ್ಯಗಳಲ್ಲಿ ಇದೂ ಸಹ ಅತ್ಯಂತ ಪ್ರಮುಖವಾದುದು.

ನೂತನ ವಧು ವಿವಾಹದ ನಂತರ ಅಪರಿಚಿತ ಕುಟುಂಬ ವಲಯದೊಳಗೆ ಪ್ರವೇಶಿಸಿ, ಆ ಹೊಸ ವಾತಾವರಣಕ್ಕೆ, ವ್ಯವಸ್ಥೆಗೆ ಯಾವುದೇ ಗೊಣಗಾಟವಿಲ್ಲದೆ ಸಹಜವಾಗಿ ಹೊಂದಿಕೊಳ್ಳಬೇಕಾದರೆ ಆ ಬಾಲಕಿಯರಲ್ಲಿ ಎಂತಹ ಮನಸ್ಥೈರ್ಯವಿರಬೇಕು? ಎಂತಹ ಸಂಸ್ಕಾರ ಆಕೆಗೆ ದೊರಕಬೇಕು? ಭಾರತೀಯ ಮಹಿಳೆಯರಲ್ಲಿ ರಕ್ತಗತವಾಗಿರುವ ಇಂತಹ ಹೊಂದಾಣಿಕೆಯ ಗುಣವು ಈ ರೀತಿಯ ಸಂಸ್ಕಾರದ ಅರಿವೇ ಇಲ್ಲದ ನಾಡಿನಿಂದ ಬಂದ ಸೋದರಿಗೆ ಎಷ್ಟೆಲ್ಲ ವಿಸ್ಮಯವನ್ನುಂಟುಮಾಡಿರಬಹುದು! ಆಕೆಗೆ ಭಾರತೀಯ ಕುಟುಂಬದ ಪರಿಚಯವಾಗುತ್ತಿದ್ದಂತೆ, ಆ ಸ್ತ್ರೀಯರ ವಿಶೇಷ ಗುಣಗಳನ್ನು ತಾನು ಕಂಡಂತೆ ಚಿತ್ರಿಸಿರುವಳು.

ಪಾಶ್ಚಾತ್ಯ ಮಹಿಳೆ ಚರ್ಚ್‌ನೊಳಗೆ ಪ್ರವೇಶಿಸುವಂತೆ ಹಿಂದೂ ಮಹಿಳೆ ತನ್ನ ಪತಿಗೃಹಕ್ಕೆ ಪ್ರವೇಶಿಸುತ್ತಾಳೆ. ಪತಿ–ಪತ್ನಿಯರ

ಪ್ರೀತಿಯು ಏಕಾಂತದಲ್ಲಿ ಮಾತ್ರ ಅಭಿವ್ಯಕ್ತವಾಗುವುದು ಹಾಗೂ ಅದು ಪರಸ್ಪರ ನಿಷ್ಠೆಯ ವಿಷಯವಾಗಿತ್ತು. ಪತ್ನಿಯು ತನ್ನ ಪತಿಯ ಮನೆಯವರನ್ನು ತನ್ನ ಸ್ವಂತದವರಿಗಿಂತಲೂ ಹೆಚ್ಚಾಗಿ ಪ್ರೀತಿಸುವಳು. ಅತ್ತೆ ಮಾವಂದಿರು ತಾಯಿ-ತಂದೆಗಳಿಗಿಂತಲೂ ಮಿಗಿಲಾಗಿರುವರು.

ವಿವಾಹದ ನಂತರ ಸ್ತ್ರೀಯು ತನ್ನ ಪತಿಯ ಮನೆಯವರೊಡನೆ ಪ್ರೀತಿ-ವಿಶ್ವಾಸದಿಂದಿರಬೇಕು. ಅದೇ ಅವಳ ಮುಂದಿನ ಬದುಕಿನ ಜವಾಬ್ದಾರಿ.

ಕಿರಿಯ ವಯಸ್ಸಿನ ಸೊಸೆಯು ಹಿರಿಯರೆದುರಿನಲ್ಲಿ ತನ್ನತನವನ್ನು ತೋರಿಸದೆ ಸದಾ ಕರ್ತವ್ಯನಿರತಳಾಗಿರುತ್ತಿದ್ದಳು. ತನ್ನ ನಿಷ್ಠೆಯ ದುಡಿಮೆಯಿಂದಲೇ ಎಲ್ಲರ ವಿಶ್ವಾಸವನ್ನು ಗಳಿಸುತ್ತಿದ್ದಳು. ಉತ್ತಮ ನಡವಳಿಕೆಯ, ಸದಾಚಾರದ ಶಿಕ್ಷಣವು ಆಕೆಗೆ ಮನೆಯಲ್ಲಿ ದೊರಕುತ್ತಿತ್ತು.

ಸೀತೆ, ಸಾವಿತ್ರಿ, ಸತಿ, ಉಮಾ ಇವರೆಲ್ಲರೂ ಆದರ್ಶ ಪತ್ನಿಯರು. ಪತ್ನಿಯು ತನ್ನದೆಲ್ಲವನ್ನೂ ನೀಡುವವಳೇ ಹೊರತು ಪಡೆಯುವಳಲ್ಲ.

ಭಾರತೀಯ ಮಹಿಳೆಯು ತನಗೆ ಎಷ್ಟೇ ದುಃಖವಾದರೂ ಅದನ್ನು ಸಹಿಸಕೊಂಡು ಪತಿಕುಲದ ಏಳ್ಗೆಗಾಗಿ ಚಿಂತಿಸುವಳು. ಅದನ್ನು ಸಾಧಿಸಲು ತನ್ನ ನೋವು, ಅವಮಾನಗಳೆಲ್ಲವನ್ನೂ ಸಹನೆಯಿಂದ, ಮೌನವಾಗಿ ಅನುಭವಿಸುವಳು.

ದಂಪತಿಗಳಿಗೆ ಮಕ್ಕಳಿಲ್ಲದಿದ್ದರೆ ವಿವಾಹವಾಗಿ ಏಳುವರ್ಷಗಳ ನಂತರ, ಪತ್ನಿಯ ಒಪ್ಪಿಗೆಯನ್ನು ಪಡೆದು ಆ ಪತಿಯು ತನ್ನ ಸಂತಾನಕ್ಕಾಗಿ ಮತ್ತೊಂದು ವಿವಾಹವಾಗಬಹುದು. ಪಾಶ್ಚಾತ್ಯ ದೇಶಗಳಲ್ಲಿ ಈ ರೀತಿಯ ಒಪ್ಪಿಗೆ ಪಡೆಯುವುದು ಅಸಾಧ್ಯವೇ ಸರಿ. ಆದರೆ ಭಾರತದಲ್ಲಿ ವಂಶದ ಅಭಿವೃದ್ಧಿಯನ್ನು ಚಿಂತಿಸುವ ಮಹಿಳೆ ಪತಿಯ ಮರುವಿವಾಹಕ್ಕೆ ಸಮ್ಮತಿಸುತ್ತಾಳೆ. ಭಾರತೀಯ ಸ್ತ್ರೀಯರಲ್ಲಿ ಮಾತ್ರ ಕಂಡುಬರುವ ಇಂತಹ ನಿಸ್ವಾರ್ಥ, ಔದಾರ್ಯಗುಣಕ್ಕೆ ಮಾರುಹೋಗಿರುವಳು ಸೋದರಿ ನಿವೇದಿತಾ.

ನಮ್ಮ ದೇಶದಲ್ಲಿ ತಾಯಿಗೆ ಅತ್ಯಂತ ಮಹತ್ವದ ಸ್ಥಾನವಿದೆ. **'ಮಾತೃದೇವೋ ಭವ'** ಎಂದು ವೇದಗಳೂ ಮಾತೆಯ ಮಹತ್ವವನ್ನು ಸಾರಿ ಹೇಳಿವೆ. ಎಂತಹುದೇ ಕಷ್ಟಪರಿಸ್ಥಿತಿಯಲ್ಲಿ 'ಅಮ್ಮಾ' ಎಂಬ ನುಡಿ ಹೃದಯದಾಳದಿಂದ ಮೂಡಿ ಬರುತ್ತದೆ. ತಾಯಿಯ ಮಮತೆ ಎಂದೂ ಬತ್ತದು. ಎಲ್ಲಾ ಸ್ತ್ರೀಯರನ್ನು ತಾಯಿಯಂತೆ ಗೌರವಿಸಬೇಕು ಎಂಬ ಉದಾತ್ತಭಾವನೆ ಭಾರತದ್ದು. ಈ ಅಂಶ ಸಮಸ್ತ ಭಾರತೀಯರ ನಡೆ-ನುಡಿಗಳಲ್ಲಿ ಹಾಸು-ಹೊಕ್ಕಾಗಿರುವುದನ್ನು ನಿವೇದಿತಾ ಕಂಡುಕೊಂಡಿರುವಳು.

''ಮಾತೃ ಆರಾಧನೆ ಹಿಂದೂ ಶೀಲವನ್ನೆಲ್ಲ ರಕ್ಷಿಸುತ್ತಿರುವುದು. ಅದೇ ಉತ್ತಮ ಗುರಿಯೆಡೆಗೆ ಒಯ್ಯುವುದು'' ಎಂದು ಅತ್ಯಂತ ಗೌರವದಿಂದ ಆಕೆ ನುಡಿದಿರುವಳು. ಈ ಮಾತಿಗೆ ಆಧಾರವಾಗಿ ಭಾರತದ ಪುರಾಣೇತಿಹಾಸಗಳ ಅನೇಕ ದೃಷ್ಟಾಂತಗಳನ್ನೂ ಆಕೆ ಉಲ್ಲೇಖಿಸಿರುವಳು.

ಶ್ರೀಶಂಕರಭಗವತ್ಪಾದರು ತಮ್ಮ ತಾಯಿಗೆ ನೀಡಿದ ವಚನವನ್ನು ಪೂರೈಸಿದ್ದು; ಶಿವಾಜಿಯು ತನ್ನ ತಾಯಿಯಿಂದ ವಿಶೇಷವಾಗಿ ಪ್ರಭಾವಿತನಾಗಿದ್ದು; ಧ್ರುವ ತನ್ನ ತಾಯಿಯಿಂದ ಕಲಿತಂತಹ ವಿಶೇಷ ಭಕ್ತಿ; ಪಂಚಪಾಂಡವರು ತಮ್ಮ ತಾಯಿಯಿಂದ ಕಲಿತ ಸನ್ನಡತೆ ಹಾಗೂ ಅವರು ಆಕೆಯಲ್ಲಿ ತೋರುವ ವಿಶೇಷ ಪ್ರೀತ್ಯಾದರಗಳು - ಮುಂತಾದವುಗಳನ್ನೆಲ್ಲ ಗೌರವದಿಂದ ಸ್ಮರಿಸುವ ನಿವೇದಿತಾಳು ಭಾರತದಲ್ಲಿ ಸ್ತ್ರೀಯರಿಗೆ ದೊರಕಿರುವ ಉತ್ತಮ ಸ್ಥಾನ ಹಾಗೂ ಮರ್ಯಾದೆಯನ್ನೂ ಗಮನಿಸುತ್ತಾಳೆ.

''ಮಹಿಳೆಯರು ರಸ್ತೆಯಲ್ಲಿ ಸಾಗುತ್ತಿದ್ದರೆ ಪುರುಷರು ತಲೆಯೆತ್ತಿ ಅವರನ್ನು ನೋಡುತ್ತಿರಲಿಲ್ಲ. ಪರಸ್ತ್ರೀಯರ ಹೆಸರನ್ನೂ ಹೇಳುತ್ತಿರಲಿಲ್ಲ, ಅವರನ್ನು ಗೌರವದಿಂದ ಕಾಣುತ್ತಿದ್ದರು. ಮಹಿಳೆ ಶಾಪ ನೀಡಿದರೆ ಸಮಸ್ತ ಕುಟುಂಬವೇ ನಾಶವಾಗಿ ಹೋಗುತ್ತದೆ ಎಂಬ ಭಯವೂ ಜನರಲ್ಲಿತ್ತು'' ಎಂದು ಆಕೆ ವರ್ಣಿಸಿರುವಳು.

ಅಂದಿನ ಸಾಮಾಜಿಕ ವ್ಯವಸ್ಥೆಗಳಿಗನುಗುಣವಾಗಿ ಮಹಿಳೆಯರಿಗಿದ್ದ ಕೆಲವು ನಿರ್ಬಂಧಗಳು, ಕಟ್ಟುಪಾಡುಗಳನ್ನೂ ತಾನು ಕಂಡಂತೆಯೇ ನಿವೇದಿತಾಳು ವಿವರಿಸಿರುವಳು.

''ಮನೆಯ ಹೊರಭಾಗದಲ್ಲೆಲ್ಲ ಪುರುಷರ ಓಡಾಟ. ಮಾತುಕತೆಗಳಿದ್ದರೆ ಒಳಕೋಣೆಯಲ್ಲಿ ಮಾತ್ರ ಮಹಿಳೆಯ ಅಂತರಂಗ ಅನಾವರಣಗೊಳ್ಳುತ್ತಿತ್ತು. ಆಕೆಯ ನೋವು, ನಲಿವು, ಸಂತೋಷಗಳೆಲ್ಲ ಆ ಕೋಣೆಯೊಳಗೆ ಮಾತ್ರ ಪ್ರಕಟವಾಗುತ್ತಿತ್ತು. ಮಧ್ಯಾಹ್ನದ ಬಿಡುವಿನ ಸಮಯದಲ್ಲಿ ಮಾತ್ರ ಆ ಸ್ತ್ರೀಯರ ಪರಸ್ಪರ ಭೇಟಿ, ಸಂವಾದಗಳು. ಸಂಜೆಯಾಗುತ್ತಿದ್ದಂತೆ ಮತ್ತೆ ಮೌನವಾಗಿ ತಮ್ಮ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು.

''ಹಿಂದೂ ವಿಧವೆಯರ ಬದುಕು ಕಷ್ಟಕರವಾಗಿತ್ತು. ಬಿಳಿವಸ್ತ್ರವನ್ನುಟ್ಟು, ಯಾವುದೇ ಆಭರಣಗಳಿಲ್ಲದೆ, ಮಿತ ಆಹಾರವನ್ನು ಸೇವಿಸುತ್ತಾ, ಕೇವಲ ಪೂಜೆ-ಪ್ರಾರ್ಥನೆಗಳಲ್ಲಿ ತೊಡಗಿರಬೇಕಿತ್ತು ಯಾವುದೇ ಶುಭಸಮಾರಂಭಗಳಲ್ಲಿ ಭಾಗವಹಿಸುವಂತಿರಲಿಲ್ಲ. ಇತರರ ಸೇವೆಗಾಗಿಯೇ ಇವರ ಜೀವನ ಮುಡಿಪಾಗಿತ್ತು.

''ಕಲ್ಕತ್ತೆಯಲ್ಲಿದ್ದ ವಿಧವೆಯರು ಕೇವಲ ಗಂಗಾಜಲವನ್ನೇ ಕುಡಿಯುತ್ತಿದ್ದರು. ಕಾಯಿಲೆಯಾದಾಗ ಭಾರತೀಯ ವೈದ್ಯರ ಶುಶ್ರೂಷೆಯನ್ನು ಮಾತ್ರ ಪಡೆಯುತ್ತಿದ್ದರು. ಒಂದೇ ಹೊತ್ತು ಊಟ; ಅದೂ ಬೇರೆಯವರು ತಯಾರಿಸಿದ ಆಹಾರವನ್ನು ಸೇವಿಸುವಂತಿರಲಿಲ್ಲ. ರಾತ್ರಿ ಕೇವಲ ಹಾಲು-ಹಣ್ಣು ಸೇವನೆ. ಇವರಿಗೆ ಶಿರೋಮುಂಡನವನ್ನು ಮಾಡಿರುತ್ತಿದ್ದರು. ದೇವಸ್ಥಾನಗಳಿಗೆ ಮಾತ್ರ ಇವರು ಭೇಟಿ ನೀಡಬಹುದಾಗಿತ್ತು. ಮದುವೆಯಾದ ಕನ್ಯೆಯು ಬಾಲವಿಧವೆಯಾಗಿ ತವರು ಮನೆಯನ್ನು ಸೇರಿದರೆ ಆ ಕುಟುಂಬದ ಹಿರಿಯರು ಆಕೆಗೆ ನಿಯಮಬದ್ಧ ಜೀವನವನ್ನು ಅಭ್ಯಾಸ ಮಾಡಿಸುತ್ತಿದ್ದರು. ಭಾರತೀಯ ಪತ್ನಿಯ ಧರ್ಮ ಪತಿಯ ಸೇವೆ ಹಾಗೂ ವಿಧವೆಯ ಧರ್ಮ ದೇವರ ಸೇವೆ ಎಂಬುದಾಗಿ ತೀರ್ಮಾನಿಸಲ್ಪಟ್ಟಿತ್ತು.

''ಜಲ–ನೆಲಗಳಿಗೆ ಭಾರತೀಯರು ನೀಡುತ್ತಿದ್ದುದು ಪವಿತ್ರ ಭಾವನೆ. ಪ್ರಾರ್ಥನೆಯಿಲ್ಲದೆ ಊಟವಿಲ್ಲ; ಸ್ನಾನವಿಲ್ಲದೆ ಪ್ರಾರ್ಥನೆಯಿಲ್ಲ. ಹಾಗಾಗಿ ಪ್ರತಿನಿತ್ಯ ಬೆಳಗಾದೊಡನೆಯೇ ಭಕ್ತಿಪೂರ್ವಕ ಗಂಗಾಸ್ನಾನದೊಡನೆಯೇ ಆ ಸ್ತ್ರೀಯರ ದಿನಚರಿ ಪ್ರಾರಂಭವಾಗುತ್ತಿತ್ತು. ಮನೆಯಲ್ಲಿ ಶಾಂತವಾಗಿ, ಮೌನವಾಗಿ, ತಪಸ್ವಿನಿಯಂತೆ ಬಾಳಿದ, ಸತೀತ್ವದಲ್ಲಿ ಮಾತ್ರ ಹೆಮ್ಮೆಪಡುತ್ತಿದ್ದ, ಪರಿಪೂರ್ಣತೆಯ ಮಹತ್ವಾಕಾಂಕ್ಷೆಯೊಂದನ್ನು ಮಾತ್ರ ಹೊಂದಿದ್ದ ಭಾರತೀಯ ಮಹಿಳೆಯರ ಮೂಲಕವೇ ಬಾಹ್ಯ ಯುದ್ಧಗಳಿಗಿಂತಲೂ ಹೆಚ್ಚಾಗಿ ಧರ್ಮ ಸಂರಕ್ಷಣೆಯಾಗಿದೆ ಮತ್ತು ಧರ್ಮಸಂವೃದ್ಧಿಯೂ ಆಗಿದೆ.''

ಧರ್ಮದ ನೆಲೆಗಟ್ಟಿನಲ್ಲಿ ರೂಪುಗೊಂಡಿರುವುದು ಭಾರತದೇಶ. ಹಾಗಾಗಿ ಧರ್ಮದ ಆಧಾರದಲ್ಲೇ ಮನುಷ್ಯರ ವ್ಯವಹಾರವು ನಡೆಯುತ್ತದೆ. ಅದರಲ್ಲೂ ಸಂಸ್ಕೃತಿಯ ರಕ್ಷಕರೂ, ವಾಹಕರೂ ಆದ ಸ್ತ್ರೀಯರ ನಡೆ–ನುಡಿಗಳೆಲ್ಲವೂ ಧರ್ಮಸಮ್ಮತವಾಗಿರಬೇಕೆಂದು ಅಪೇಕ್ಷಿಸಲಾಗಿತ್ತು. ಹಾಗಾಗಿ ಭಾರತೀಯ ಸ್ತ್ರೀಯರ ದೈನಂದಿನ ಕರ್ತವ್ಯಗಳೂ ಸಹ ಸದಾಚಾರ ಸನ್ನಡತೆಯಿಂದ ಕೂಡಿತ್ತು. ಪಾಶ್ಚಾತ್ಯ ಮಹಿಳೆಯಾದ ಸೋದರಿ ನಿವೇದಿತಾ ಇವೆಲ್ಲವನ್ನೂ ಕೌತುಕದಿಂದ ಕಂಡು, ಶ್ರದ್ಧೆಯಿಂದ ಅಭ್ಯಸಿಸಿ, ಅದರ ಹಿಂದಿರುವ ಔಚಿತ್ಯಪ್ರಜ್ಞೆಯನ್ನರಿತು, ಭಾರತೀಯ ಸ್ತ್ರೀಯರ ಆಚಾರ–ವಿಚಾರಗಳೆಲ್ಲವೂ ಅತ್ಯಂತ ಶ್ರೇಷ್ಠವೆಂದು ಮನಗಂಡು, ತಾನೂ ಮನಃಪೂರ್ವಕವಾಗಿ ಅದನ್ನೇ ವಿಶ್ವಕ್ಕೆ ಸಾರಿ ಹೇಳಿರುವಳು. ನಿಷ್ಕಾಮಕರ್ಮ, ಇಂದ್ರಿಯನಿಗ್ರಹ, ಸಹನೆ, ಸದಾಚಾರಗಳೇ ಭಾರತೀಯ ಸ್ತ್ರೀಯರ ಅಲೌಕಿಕ ಸಂಪತ್ತು ಎಂದು ಮನಗಂಡಿರುವಳು. ಶಾಲಾಶಿಕ್ಷಣದಿಂದ ಬಾಲಕಿಯರು ವಂಚಿತರಾಗಿರಬಹುದು. ಆದರೆ ಮನೆಯಲ್ಲಿ ಅವರ ಹಿರಿಯರಿಂದ ದೊರಕುವ ಸಂಯಮಪೂರ್ಣ, ತಾಳ್ಮೆಯ ಜೀವನಪಾಠವೇ ಅವರ ಗೌರವಪೂರ್ಣ ವ್ಯಕ್ತಿತ್ವವನ್ನು ರೂಪಿಸುತ್ತದೆ. ''ಭಾರತವು ಎಂದೂ ಪಾಶ್ಚಾತ್ಯ ರಾಷ್ಟ್ರಗಳಿಗೆ ತಲೆಬಾಗಬೇಕಿಲ್ಲ. ಪಾಶ್ಚಾತ್ಯ ದೇಶಗಳೇ ಭಾರತದಿಂದ ಕಲಿಯಬೇಕಾದದ್ದು ಬಹಳಷ್ಟಿದೆ'' ಎಂದು ದಿಟ್ಟವಾಗಿ ನುಡಿದಿರುವ ಸೋದರಿಯು ನಮಗೆ ಒಂದು ಕಿವಿಮಾತನ್ನೂ ಹೇಳಿರುವಳು. ''ಈಗ ದೇಶ ಮತ್ತು ಧರ್ಮ ದುರವಸ್ಥೆಗೀಡಾಗಿರುವಾಗ ಶ್ರದ್ಧಾವಂತ ಸ್ತ್ರೀಯರೇ ಇದನ್ನು ರಕ್ಷಿಸಬೇಕು. ಮಾತೆಯರು ತಮ್ಮ ಪುತ್ರರಲ್ಲಿ ಬ್ರಹ್ಮಚರ್ಯದ ಮಹತ್ವವನ್ನು ತಿಳಿಸಬೇಕು.''

ಏಕೆಂದರೆ ಶೀಲ ಮತ್ತು ಉತ್ತಮ ನಡತೆಗಳೇ ವ್ಯಕ್ತಿತ್ವವನ್ನು ರೂಪಿಸುತ್ತದೆ. ಅಂತಹ ಉತ್ತಮ ವ್ಯಕ್ತಿತ್ವವೇ ಸುಭದ್ರ ಸಮಾಜಕ್ಕೆ ಯೋಗ್ಯ ತಳಹದಿಯಾಗುತ್ತದೆ. ಈ ರೀತಿ ಸಮಾಜಕ್ಕೆ ಭದ್ರಬುನಾದಿಯಾಗಬಲ್ಲ ಸಂಸ್ಕಾರ, ಮೌಲ್ಯಭರಿತ ಜೀವನಕ್ರಮಗಳನ್ನೊಳಗೊಂಡಿರುವ ಭಾರತೀಯ ಮಹಿಳೆಯರ ಸರಳ ಹಾಗೂ ಪವಿತ್ರ ಜೀವನವನ್ನು ಅರ್ಥೈಸಿಕೊಂಡ ಸೋದರಿ ನಿವೇದಿತಾಳು ಆ ಆದರ್ಶಮಯ ಜೀವನಕ್ಕೆ ಮನಸೋತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.



# ನಿವೇದಿತಾ ಹಾಗೂ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ

ಸಿ. ಎಸ್. ಮಂಗಳಮ್ಮ



**ಭಾರತ ಸ್ವಾತಂತ್ರ್ಯ ಸಂಗ್ರಾಮದ ಅಗೋಚರ ಸಾಹಸಗಾಥೆಗಳ ಶೋಧವೇ ಒಂದು ಮಹಾಯಾತ್ರೆಯಾಗಬಹುದು. ಅದರಲ್ಲಿ ಗುಪ್ತ ವಾಗಿಯೂ, ವ್ಯಕ್ತವಾಗಿಯೂ ಹೋರಾಡಿದ ಅಸಂಖ್ಯಾತ ವೀರವನಿತೆಯರಲ್ಲಿ ಒಬ್ಬಾಕೆ ಸೋದರಿ ನಿವೇದಿತಾ. ಅವಳ ಹೃದಯದಾಳದಲ್ಲಿದ್ದ ಭಾರತಪ್ರೇಮ ಹೇಗೆ ಅವಳನ್ನು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡಿತು – ಈ ಕಥೆಯನ್ನು ಇಲ್ಲಿ ವಿವರಿಸಿ ಹೇಳುವ ಲೇಖಕಿ ಮೈಸೂರು ಆಶ್ರಮದ ಭಕ್ತರು.**

''ನಾವು ಆಶಾವಾದಿಗಳೂ ಅಲ್ಲ, ನಿರಾಶಾವಾದಿಗಳೂ ಅಲ್ಲ. ನಮ್ಮದು ದೃಢ ನಿಶ್ಚಯ.. ನಾವು ಅಗ್ರಗಾಮಿಗಳಾಗಿ ಪ್ರಾಣವನ್ನಪ್ಪುವವರು, ನಾವು ನಮ್ಮ ಶರೀರದ ಮೂಲಕ ಸೇತುವೆಯನ್ನು ಸಿದ್ಧಪಡಿಸುತ್ತೇವೆ, ಮುಂದಿನ ಸೈನಿಕರು ಆ ಸೇತುವೆಯ ಮೇಲೆ ಹಾದು ಹೋಗಿ ಸ್ವಾತಂತ್ರ್ಯದ ವಿಜಯೋತ್ಸವವನ್ನು ಆಚರಿಸುವರು.'' ಇದು ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಸೋದರಿ ನಿವೇದಿತಾಳ ಆಗ್ರಹದ ಮಾತು.

ವಿದೇಶಿಯಳಾಗಿದ್ದ ಮಾರ್ಗರೆಟ್ ಎಲಿಜಬೆತ್ ನೋಬೆಲ್, 'ನಿವೇದಿತಾ' ಆಗಿ ಅಪ್ಪಟ ಭಾರತೀಯಳಾಗಿ ಬ್ರಿಟಿಷರ ದಾಸ್ಯದಿಂದ ಭಾರತವನ್ನು ಮುಕ್ತಿಗೊಳಿಸುವ ಸಲುವಾಗಿ ನಡೆಸಿದ ಹೋರಾಟ ಅತ್ಯಾಶ್ಚರ್ಯವೆನಿಸಬಹುದು. ಆದರೆ ಅವಳ 'ಭಾರತೀಯತೆ'ಯ ಹಿನ್ನೆಲೆ ಮತ್ತಷ್ಟು ರೋಚಕವಾದದ್ದು. ಸಂಕ್ಷಿಪ್ತವಾಗಿ ಇದರ ಪರಿಚಯ ಮಾಡಿಕೊಳ್ಳೋಣ. ಸ್ವಾತಂತ್ರ್ಯಕ್ಕಾಗಿ ಹೋರಾಡುವ ಗುಣ ಅವಳಿಗೆ ಹುಟ್ಟಿನಿಂದಲೇ ಬಂದಿತ್ತೆನ್ನಬಹುದು. ಐರಿಷ್ ಜನಾಂಗದವರು ಇಂಗ್ಲಿಷಿನವರ ದಬ್ಬಾಳಿಕೆಯನ್ನು ಎದುರಿಸಿ ತಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಹೋರಾಡುತ್ತಿದ್ದವರ ಪೈಕಿ ಜಾನ್ ನೋಬೆಲ್ ಒಬ್ಬರು. ಅವರ ಮಗ ಸ್ಯಾಮ್ಯುಯೆಲ್ ರಿಚ್ಮಂಡ್ ಇವನೂ ಸಹ ಸ್ವಾತಂತ್ರ್ಯಪ್ರಿಯ, ಜೊತೆಗೆ ಧರ್ಮ ಭೀರು, ದೀನ ದಲಿತರ ಬಗ್ಗೆ ಇತ್ತು ದಯೆ. ಇವನ ಮಗಳೇ ಮಾರ್ಗರೆಟ್ ಎಲಿಜಬೆತ್. ಈ ಗುಣಗಳು ಅವಳಲ್ಲಿ ರಕ್ತಗತವಾಗಿತ್ತು. ಅವಳು ದಿಟ್ಟೆ, ಧೀರೆ, ಸ್ವತಂತ್ರ ಮನೋಭಾವದವಳಾದರೂ ಇತರರಿಗೆ ನೋವುಂಟು ಮಾಡಿದವಳಲ್ಲ. ಬಡತನದಲ್ಲಿ ಬೆಳೆದಿದ್ದರೂ, ಸ್ವಾಭಿಮಾನಿ. ಯಾವುದನ್ನೂ ಪೂರ್ಣವಾಗಿ ಅರಿಯದೆ ಒಪ್ಪುವವಳಲ್ಲ. ಕೆಲವೊಮ್ಮೆ ಇವಳ ವಾದ ವಿವಾದಗಳಿಂದ ಸಮಾಜವನ್ನು ಎದುರಿಸಬೇಕಾದ ಕಠಿಣ ಪರಿಸ್ಥಿತಿ ಉಂಟಾಗುತ್ತಿತ್ತು. ಅವಳೆಂದೂ ತನ್ನ ದೃಢ ನಿಶ್ಚಯದಿಂದ ಹಿಮ್ಮೆಟ್ಟಿದವಳಲ್ಲ. ಸಮಾಜದ ಹಿತ ಅವಳ ಗುರಿಯಾಗಿತ್ತು. ತನ್ನ ಸ್ವತಂತ್ರ ಮನೋಭಾವನೆಯನ್ನು ಉಳಿಸಿಕೊಳ್ಳಬೇಕಾದರೆ ಅವಳಿಗೆ ಹೋರಾಟ ಅನಿವಾರ್ಯವಾಗಿತ್ತು.

ಜೀವನ ಒಂದು ಸಂಗ್ರಾಮ. ಅಲ್ಲಿ ಪ್ರತಿ ಕ್ಷಣವೂ ಬೇಕು–ಬೇಡ, ಹೌದು–ಇಲ್ಲಗಳ ಹೋರಾಟ ನಡೆಯುತ್ತಲೇ ಇರುತ್ತದೆ. ಮಹಾಪುರುಷರು ತಮ್ಮ ವೈಯಕ್ತಿಕ ಇಚ್ಛೆಗಳನ್ನು ಬದಿಗಿಟ್ಟು, ಲೋಕ ಹಿತಕ್ಕಾಗಿ ಹೋರಾಡುತ್ತಾರೆ. ಅವರಿಗೆ ಸೋಲು, ಗೆಲುವುಗಳ ಕಡೆ ನಿರ್ಲಕ್ಷ್ಯ. ಜನಹಿತ ಒಂದೇ ಗುರಿ. ಮಾರ್ಗರೆಟ್‌ಳ ಜೀವನವೂ ಇದಕ್ಕೆ ಹೊರತಾಗಿರಲಿಲ್ಲ. ಸಾಮಾನ್ಯ ಜನರಿಗಿಂತ ಒಂದು ವಿಶೇಷತೆ ಅವಳ ಬಾಲ್ಯದಿಂದಲೂ ಕಂಡುಬರುತ್ತದೆ. ಶಿಕ್ಷಣವನ್ನು ಪೂರೈಸಿದ ನಂತರ ತನಗೆ ಪ್ರಿಯವಾಗಿದ್ದ ಶಿಕ್ಷಕ ವೃತ್ತಿಯನ್ನು ಕೈಗೊಂಡಳು. ಮಕ್ಕಳಿಗೆ ಆಟಗಳ ಮೂಲಕವೇ ಪಾಠಗಳನ್ನು ಕಲಿಸುತ್ತಿದ್ದಳು. ಇವಳ ಈ ಸ್ವತಂತ್ರ ಭಾವನೆಗೆ, ಆಗಿನ ಸಮಾಜದಲ್ಲಿ ಪ್ರೋತ್ಸಾಹ ಸಿಗಲಿಲ್ಲ. ಆದರೆ ಇವಳ ಪ್ರತಿಭೆ, ವಾಗ್ಧಾರೆ ಕೆಲವು ಗಣ್ಯ ವ್ಯಕ್ತಿಗಳನ್ನು ಆಕರ್ಷಿಸಿತು. ಶಿಕ್ಷಣದ ಬದಲಾವಣೆಯ ಹೋರಾಟದಲ್ಲಿ ಪೂರ್ಣ ಯಶಸ್ಸು ಸಿಗದಿದ್ದರೂ, ಮಾರ್ಗರೆಟಳಿಗೆ ತೃಪ್ತಿಯನ್ನು ಉಂಟು ಮಾಡಿತ್ತು. ಇವಳ ಕಾರ್ಯಚಟುವಟಿಕೆ ಸೇವಾಮನೋಭಾವಗಳು ಸಮಾಜದಲ್ಲಿ ಒಬ್ಬ ಗಣ್ಯ ವ್ಯಕ್ತಿಯನ್ನಾಗಿ ಮಾಡಿದವೆಂದರೆ ತಪ್ಪಿಲ್ಲ. ವೈಯಕ್ತಿಕವಾದ ಸ್ವಾತಂತ್ರ್ಯ ಹೋರಾಟದಲ್ಲಿ ಯಶಸ್ಸುಗಳಿಸಿದಳೆನ್ನ

ಬಹುದು. ಇವಳೊಬ್ಬ ಆದರ್ಶ ವ್ಯಕ್ತಿಯಾಗಿ ಪರಿಗಣಿಸಲ್ಪಟ್ಟಳು. ೧೮೯೨ ರಲ್ಲಿ ಐರ್ಲೆಂಡ್ ಪರವಾಗಿ 'ಹೋಮ್ ರೂಲ್ ಬಿಲ್' ಪಾರ್ಲಿಮೆಂಟ್ ಮುಂದಿಟ್ಟಾಗ, ಅದರ ಪರವಾಗಿ ನಿರ್ಭಯವಾಗಿ ವಾದಮಾಡಿದಳು.

''ಪತ್ರಿಕೋದ್ಯಮಿಯಾಗಿ, ಶಿಕ್ಷಣ ತಜ್ಞೆಯಾಗಿ, ಉಪನ್ಯಾಸಕಳಾಗಿ ಎಲ್ಲ ಬಗೆಯ ಸ್ವಾತಂತ್ರ್ಯಕ್ಕಾಗಿ ಹೋರಾಡುವವಳಾಗಿ ಉಜ್ವಲ ಜೀವನ ನಡೆಸಿ ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯಾಗಿ ಮೆರೆದಳು'' ಎಂದು 'ಲಂಡನ್ ಟೈಮ್ಸ್' ಪತ್ರಿಕೆಯು ನಿವೇದಿತಾ ಕುರಿತು ಮೆಚ್ಚಿ ಬರೆದಿದೆ.

ಮಾರ್ಗರೆಟ್‌ಳ ವೈಯಕ್ತಿಕ ಜೀವನ ಸಂಗ್ರಾಮದ ಎರಡನೇ ಹೋರಾಟದಿಂದ ಅವಳ ಬದುಕಿನ ದಿಕ್ಕೇ ಬದಲಾಯಿಸಿತು. ಪಶ್ಚಿಮದಿಂದ ಪೂರ್ವಕ್ಕೆ ಪರಿವರ್ತನೆಗೊಂಡಿತು. ೧೮೯೩ರಲ್ಲಿ ಚಿಕಾಗೋದಲ್ಲಿ ನಡೆದ 'ವಿಶ್ವಧರ್ಮ ಸಮ್ಮೇಳನ'ದಲ್ಲಿ ಸ್ವಾಮಿ ವಿವೇಕಾನಂದರು ಭಾರತದ ಪ್ರತಿನಿಧಿಯಾಗಿ ಭಾಷಣ ಮಾಡಿ, ಜನಮನಗಳನ್ನು ಗೆದ್ದರು. ಭಾರತದ ಬಗ್ಗೆ ಇದ್ದ ತಪ್ಪುಕಲ್ಪನೆಗಳನ್ನು ಪಾಶ್ಚಾತ್ಯರ ಮನಸ್ಸಿನಿಂದ ತೊಡೆದು ಹಾಕಿದರು. ಭಾರತದ ಹಿರಿಮೆ, ಗರಿಮೆಗಳನ್ನು ಸಾರಿದರು. ಅವರ ಉಜ್ಜ್ವಲ ಭಾಷಣಗಳು ಇಡೀ ವಿಶ್ವವೇ ತಲೆದೂಗುವಂತೆ ಮಾಡಿದವು. ಮುಂದೆ ಸ್ವಾಮೀಜಿಯವರು ಯೂರೋಪು ಪ್ರವಾಸವನ್ನು ಕೈಗೊಂಡರು. ಅವರಿಗೆ ಅದ್ಭುತ ಸ್ವಾಗತ ದೊರೆಯಿತು. ಮಾರ್ಗರೆಟ್‌ಗೆ ಈ ವಿಷಯ ಗೊತ್ತಿದ್ದರೂ ಆಕೆ ಉದಾಸೀನದಿಂದಿದ್ದಳು. ಏಕೆಂದರೆ ಅವಳು ಕ್ರೈಸ್ತಧರ್ಮವನ್ನು ಒಪ್ಪಿಕೊಂಡಿದ್ದಳು. ಆದರೂ ಅವಳ 'ಸತ್ಯಾನ್ವೇಷಣೆ'ಗೆ ಸರಿಯಾದ ಮಾರ್ಗದರ್ಶಿಗಳು ಸಿಕ್ಕಿರಲಿಲ್ಲ. ಹಾಗಾಗಿ ಯಾವ ಧರ್ಮ ಪ್ರಚಾರಕರ ಬಗ್ಗೆಯೂ ಆಕೆ ಉತ್ಸುಕಳಾಗಿರಲಿಲ್ಲ. ಒಮ್ಮೆ ಅವಳು ಗೆಳತಿಯ ಒತ್ತಾಯಕ್ಕಾಗಿ ಸ್ವಾಮೀಜಿಯ ಉಪನ್ಯಾಸ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದಳು. ಸ್ವಾಮೀಜಿಯವರ ವ್ಯಕ್ತಿತ್ವ, ಅವರ ಮಾತಿನ ರೀತಿ, ಉಪನ್ಯಾಸದ ನಡುನಡುವೆ ಭಾರತದ ಬಗೆಗಿನ ಸಣ್ಣಪುಟ್ಟ ಕತೆಗಳ ಮೂಲಕ ಹೇಳುವ ನೀತಿ, ನ್ಯಾಯ, ಧರ್ಮಗಳ ಪ್ರತಿಪಾದನೆ ಇತ್ಯಾದಿಗಳೂ ಮೆಚ್ಚಿಗೆಯಾದವು. ನಂತರ ಸ್ವಾಮೀಜಿಯವರ ಭಾಷಣ ಎಲ್ಲೇ ನಡೆದರೂ ಅವಳು ತಪ್ಪಿಸಿಕೊಳ್ಳುತ್ತಿರಲಿಲ್ಲ. ಅವಳಿಗೆ ಸಹಜವಾದ ಸಂದೇಹಗಳನ್ನು ಅದುಮಿಡಲಾರದೆ, ಪ್ರಶ್ನೆಗಳನ್ನು ಕೇಳುತ್ತಿದ್ದಳು, ಅವುಗಳಿಗೆ ಸೂಕ್ತವಾದ ಪರಿಹಾರವನ್ನು ಪಡೆಯುತ್ತಿದ್ದಳು. ಸ್ವಾಮೀಜಿಯವರಿಗೂ ಈ ರೀತಿಯ ಅಡ್ಡ ಪ್ರಶ್ನೆಗಳು ಬಹಳ ಪ್ರಿಯವಾಗಿರುತಿತ್ತು. ಏಕೆಂದರೆ ಸ್ವಾಮೀಜಿಯವರು ತಮ್ಮ ಗುರುವನ್ನು ಸ್ವೀಕರಿಸಿದ್ದು ಈ ರೀತಿಯ ವಾಗ್ವಾದಗಳಿಂದಲೇ ಅಲ್ಲವೆ?

ಮಾರ್ಗರೆಟಳ ಜೀವನದ ಮಾರ್ಗ ಸುಗಮವಾಯಿತು. ಸ್ವಾಮೀಜಿಯವರನ್ನು 'ಗುರು' ವೆಂದು ಮನಸಾ ಸ್ವೀಕರಿಸಿದಳು. ಸ್ವಾಮೀಜಿಯವರ ರಾಷ್ಟ್ರಪ್ರೇಮ, ರಾಷ್ಟ್ರಪ್ರಜ್ಞೆ ಇವಳ ಮನೋಭಾವನೆಗೆ ಪ್ರೋತ್ಸಾಹ ನೀಡುತ್ತಿದ್ದವು. ಭಾರತದ ಮಹಿಮೆಯನ್ನು ಅರಿತ ಅನೇಕ ಪಾಶ್ಚಾತ್ಯರು ಸ್ವಾಮೀಜಿಯವರನ್ನು ಅನುಸರಿಸಿ ಭಾರತದ ಸೇವೆಗೆ ಸಿದ್ಧರಾದರು. ಮಾರ್ಗರೆಟ್ ಸಹ ತನ್ನ ಮುಂದಿನ ಬದುಕನ್ನು ಭಾರತದ ಸೇವೆಗೆ ಮುಡಿಪಾಗಿಟ್ಟಳು. ಈ ನಿರ್ಣಯಕ್ಕೆ ಬರಬೇಕಾದರೆ ಅವಳು ಅಂತರ್ಯುದ್ಧದಲ್ಲಿ ದೃಢವಾಗಿ ಹೋರಾಡಬೇಕಾಯಿತೆನ್ನುವುದರಲ್ಲಿ ಸಂಶಯವಿಲ್ಲ. ಸ್ವಾಮೀಜಿಯವರಿಗೂ ಮಾರ್ಗರೆಟ್ ವ್ಯಕ್ತಿತ್ವ ಮೆಚ್ಚುಗೆಯಾಯಿತು. ಆದರೆ ಅವಳಿಂದ ಭಾರತಕ್ಕೆ ವಿಶೇಷವಾಗಿ ಮಹಿಳೆಯರ ಉನ್ನತಿ ಮತ್ತು ಶಿಕ್ಷಣದ ಪ್ರಗತಿಯಾಗಬೇಕೆಂದು ಸ್ವಾಮೀಜಿ ನಿರೀಕ್ಷಿಸಿದ್ದರೂ, ಅದು ಭಾರತೀಯರ ಬಗ್ಗೆ ಅನುಕಂಪೆಯಿಂದ, ಅಥವಾ ಸಹಾಯರೂಪದಿಂದ ಕೂಡಿರಬಾರದೆನ್ನುವ ಅಭಿಪ್ರಾಯ ಸ್ವಾಮೀಜಿಯವರದಾಗಿತ್ತು. ಆ ರೀತಿಯ ಸೇವೆ 'ಭಿಕ್ಷೆ' ಆಗುತ್ತದೆ ಅಷ್ಟೆ. ಇದನ್ನು ಮಾರ್ಗರೆಟ್‌ಳಿಗೆ ವಿವರಿಸಿದರು. ''ಸಂಪೂರ್ಣ ಭಾರತೀಯಳಾಗಿ ಭಾರತಕ್ಕೆ ಸೇವೆ ಸಲ್ಲಿಸುವ ಒಪ್ಪಿಗೆ ಇದ್ದರೆ, ಖಂಡಿತವಾಗಿಯೂ ನಿನ್ನನ್ನು ಸ್ವಾಗತಿಸುತ್ತೇನೆ'' ಎಂದರು ಸ್ವಾಮೀಜಿ. ಭಾರತೀಯರ ಮಧ್ಯೆ ಜೀವಿಸಬೇಕಾದರೆ ಎದುರಾಗುವ ಕಷ್ಟನಿಷ್ಠುರಗಳನ್ನೆಲ್ಲಾ ಅವರು ತಿಳಿಸಿದರು. ಮಾರ್ಗರೆಟ್ ಧೀರೆ. ಒಮ್ಮೆ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿದ್ದನ್ನು ಎಷ್ಟೇ ಅಡಚಣೆಗಳು ಎದುರಾದರೂ ಪೂರೈಸುವ ದೃಢಚಿತ್ತ ಉಳ್ಳವಳು. ಗುರುವಿಗೆ ತಕ್ಕ ಶಿಷ್ಯೆ!

ಸ್ವಾಮೀಜಿಯರ ಅಭೀಷ್ಟದಂತೆ 'ಭಾರತೀಯತೆ'ಯ ದೀಕ್ಷೆ ಸ್ವೀಕರಿಸಿದಳು. ಭಾರತಕ್ಕೆ ಸ್ವಾಮೀಜಿಯವರ ಜೊತೆ ಬಂದಳು. ಇಲ್ಲಿಯವರೆಗಿನ ಅವಳ ಬದುಕಿಗೆ, ಪೂರ್ವದಿಕ್ಕಿನ ಭಾರತದ ರೀತಿ, ನೀತಿ ಆಚಾರ-ವ್ಯವಹಾರ ತೀರ ವಿರುದ್ಧವಾಗಿದ್ದವು. ಸ್ವಾಮೀಜಿಯವರ ಪ್ರೋತ್ಸಾಹದಿಂದ ಎಲ್ಲವನ್ನೂ ಸಹನೆಯಿಂದ ಸ್ವೀಕರಿಸಿದಳು. ಅವಳ ಸಂಕಲ್ಪ ದೃಢವಾಗಿತ್ತು. ಆಗೊಮ್ಮೆ ಈಗೊಮ್ಮೆ ಸ್ವಾಮೀಜಿಯವರಿಗೂ ಮಾರ್ಗರೆಟ್‌ಳಿಗೂ ವಾಗ್ವಾದಗಳಾಗುತ್ತಿದ್ದವು. ಸ್ವಾಮೀಜಿಯವರ ರಾಷ್ಟ್ರಪ್ರೇಮ ಅವಳನ್ನು ಎಚ್ಚರಗೊಳಿಸುತ್ತಿತ್ತು. ನಿವೇದಿತಾ ಭಾರತವನ್ನು ಪ್ರೀತಿಸಿದಳು. ಸ್ವಾಮೀಜಿಯವರಿಗೂ ಇವಳ ಪರಿಸ್ಥಿತಿ ಅರ್ಥವಾಯಿತು. ಅವರು ಉತ್ತರ ಭಾರತದ ತೀರ್ಥಯಾತ್ರೆಗೆ ಕೆಲವರೊಡನೆ ಹೊರಟರು. ಮಾರ್ಗರೆಟ್‌ಗೆ ಬಹಳ ಆನಂದವಾಗಿತ್ತು. ಅವಳಲ್ಲಿದ್ದ ಅಲ್ಪಸ್ವಲ್ಪ ಪಾಶ್ಚಾತ್ಯ ಭಾವನೆಯನ್ನೂ ನಾಶಮಾಡುವ ರೀತಿಯಲ್ಲಿ, ಆಲ್ಮೋರದಲ್ಲಿ ಸ್ವಾಮೀಜಿಯವರ ಅಗ್ನಿಪರೀಕ್ಷೆಗೆ ಒಳಗಾದಳು. ಅದರಲ್ಲಿ ಆಕೆ ಗೆದ್ದಳು! ಸ್ವಾಮೀಜಿ ಅವಳನ್ನು 'ನಿವೇದಿತಾ' ಎಂದು ಕರೆದರು. ಭಗವದ್ಗೀತೆಯ ವಾಣಿಯಂತೆ, 'ಸಂಪೂರ್ಣ ಶರಣಾದವರ ರಕ್ಷಣೆ ಭಗವಂತನದು'. ನಿವೇದಿತಾ ಸಂಪೂರ್ಣವಾಗಿ ಭಾರತಮಾತೆಗೆ ಒಪ್ಪಿಸಿಕೊಂಡಳು. ಇದು ಅವಳ ಪುನರ್ಜನ್ಮ. ಅವಳೇ ಹೇಳಿಕೊಂಡಿದ್ದಾಳೆ. ''ಇದು ನನ್ನ ಎರಡನೇ ಜನ್ಮ. ಭಾರತ ನನ್ನ ಆಧ್ಯಾತ್ಮಿಕ ಜನ್ಮಭೂಮಿ'' ಎಂದು. ಮುಂದೆ ಅವಳು ಭಾರತಮಾತೆಗಾಗಿ ಸಲ್ಲಿಸಿದ ಸೇವೆ, ಭಾರತೀಯರೇ ಹುಬ್ಬೇರಿಸುವಂತೆ ಮಾಡಿದೆ.

ನಿವೇದಿತಾ ಪೂರ್ವ ನಿಶ್ಚಯದಂತೆ ಕೊಲ್ಕತ್ತಾದಲ್ಲಿ ಮಹಿಳೆಯರ ಉನ್ನತಿಗಾಗಿ, ಶಿಕ್ಷಣಕ್ಕಾಗಿ ನಾನಾ ರೀತಿಯಲ್ಲಿ ದುಡಿದಳು. ಎದುರಾದ ಕಷ್ಟಗಳನ್ನು ಹೋರಾಟದಿಂದ ಗೆದ್ದಳು ಎನ್ನುವುದಕ್ಕಿಂತ ಪ್ರೀತಿಯಿಂದ, ಸಹನೆಯಿಂದ, ಸೇವಾಕಾರ್ಯಗಳಿಂದ ಗಣ್ಯವ್ಯಕ್ತಿಗಳೊಡನೆ ಗುರುತಿಸಿಕೊಳ್ಳುವ ಮೂಲಕ ಅದನ್ನೆದುರಿಸಿದಳು ಎನ್ನ

ಬೇಕು. ಅವಳ ಭಾಷಣವೂ ಆ ರೀತಿಯಲ್ಲಿ ಆಕರ್ಷಕವಾಗಿರುತ್ತಿತ್ತು. ಸ್ವಾಮೀಜಿಯವರ ರಾಷ್ಟ್ರಪ್ರೇಮ ಅವಳನ್ನು ಆ ರೀತಿ ಎಚ್ಚರಿಸುತ್ತಿತ್ತು. ಸ್ವತಂತ್ರ ಮನೋಭಾವವುಳ್ಳ ನಿವೇದಿತಾ, ಭಾರತದ ರಾಜಕೀಯ ಪರಿಸ್ಥಿತಿಯನ್ನೂ ಗಮನಿಸುತ್ತಿದ್ದಳು. ೧೯೦೨ ರಲ್ಲಿ ಸ್ವಾಮೀಜಿಯವರ ಮಹಾಸಮಾಧಿಯ ನಂತರ ನಿವೇದಿತಾಳಲ್ಲಿ ಭಾರತದ ಬಗ್ಗೆ ಮನಸ್ಸಿನಲ್ಲಿ ಹೋರಾಟ ನಡೆಯಿತು. ಬ್ರಿಟಿಷರ ದಾಸ್ಯದಲ್ಲಿ ಭಾರತೀಯರಿಗೆ ಆಗುತ್ತಿದ್ದ ಅಪಮಾನಗಳು ಇವಳಿಗೆ ಅಸಹನೀಯವಾಗಿದ್ದಿತು.

ಇವಳು ಭಾರತಕ್ಕೆ ಬಂದಿಳಿದಾಗ ಬ್ರಿಟಿಷರ ಹಿಡಿತದಿಂದ ಮುಕ್ತರಾಗಲು, ದೇಶವನ್ನು ಸ್ವತಂತ್ರವನ್ನಾಗಿ ಮಾಡಲು ಕೆಲವು ರಾಷ್ಟ್ರಪ್ರೇಮಿಗಳು, 'ನ್ಯಾಷನಲ್ ಕಾಂಗ್ರೆಸ್' ಎಂಬ ಸಂಸ್ಥೆಯ ಹೆಸರಿನಲ್ಲಿ ಹೋರಾಡುತ್ತಿದ್ದರು. ೧೮೫೭ರಲ್ಲಿ ಪ್ರಾರಂಭವಾದ ಭಾರತ ಸ್ವಾತಂತ್ರ್ಯ ಸಂಗ್ರಾಮವನ್ನು ಅನುಸರಿಸಿ, ಬ್ರಿಟಿಷರ ದಬ್ಬಾಳಿಕೆಯನ್ನು ಖಂಡಿಸುತ್ತಿದ್ದರು. ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ 'ನ್ಯಾಷನಲ್ ಕಾಂಗ್ರೆಸ್' ಕಾರ್ಯ ಚಟುವಟಿಕೆ ನಡೆಸುತ್ತಿತ್ತು. ಅಹಿಂಸೆಯ ಮೂಲಕ, ಭಾರತವನ್ನು ಸ್ವತಂತ್ರವನ್ನಾಗಿ ಮಾಡಲು ಉದ್ದೇಶಿಸಿದ್ದರು. ಭಾರತದಲ್ಲಿ ಇದಕ್ಕೆ ತಕ್ಕ ಪ್ರೋತ್ಸಾಹವೂ ಸಿಕ್ಕಿತ್ತು. ಈ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಿವೇದಿತಾಳ ಕೊಡುಗೆ ಅಮೂಲ್ಯವಾದದ್ದು. ಇವಳ ಸ್ವತಂತ್ರ ಮನೋಭಾವ ವ್ಯಷ್ಟಿಯಿಂದ ಸಮಷ್ಟಿಯೆಡೆಗೆ ವಿಸ್ತರಿಸಿತು. ಹಿಂದೆ ತನ್ನ ಮಾತೃಭೂಮಿಯಾದ ಇಂಗ್ಲೆಂಡನ್ನು ಎಷ್ಟು ಪ್ರೀತಿಸುತ್ತಿದ್ದಳೋ ಅದಕ್ಕಿಂತ ಹೆಚ್ಚಾಗಿ ಭಾರತವನ್ನು ಪ್ರೀತಿಸಿದಳು. ಕಾರಣವಿಷ್ಟೆ, ಅವಳು ಭಾರತದ ಮಹತ್ವವನ್ನು ಅರಿತಿದ್ದಳು. ಸ್ವಾಮೀಜಿಯವರ ಆಧ್ಯಾತ್ಮಿಕ ಪುತ್ರಿಯಾಗಿ ಭಾರತದ ಹಿತವನ್ನೇ ಲಕ್ಷ್ಯವಾಗಿಟ್ಟುಕೊಂಡಿದ್ದಳು. ಭಾರತದಲ್ಲಿ ಬ್ರಿಟಿಷರ ದಬ್ಬಾಳಿಕೆಯನ್ನು ನಿವೇದಿತಾ ಕಣ್ಣಾರೆ ಕಂಡಳು, ಉದ್ರಿಕ್ತಳಾದಳು. ಹಿಂದೆ ಸ್ವಾಮೀಜಿಯವರು ಯೂರೋಪಿನ ಪ್ರವಾಸದಲ್ಲಿದ್ದಾಗ, ಬ್ರಿಟಿಷರಿಂದ ಭಾರತಕ್ಕೆ ಅನೇಕ ರೀತಿಯಲ್ಲಿ ಉಪಕಾರವಾಗುತ್ತಿದೆ ಯೆಂಬ ಅಭಿಪ್ರಾಯವನ್ನು ಅವಳು ವ್ಯಕ್ತಪಡಿಸಿದಾಗ, ಸ್ವಾಮೀಜಿ ಸಿಡಿದೆದ್ದರು. ಅವಳಿಗೆ ಕಟುವಾದ ಮಾತುಗಳಿಂದ, ಅವಳ ಅಭಿಪ್ರಾಯವನ್ನು ಖಂಡಿಸುತ್ತಾ ಉತ್ತರವಿತ್ತರು. ಅದು ಅವಳ ಸ್ವತಂತ್ರ ಮನೋಭಾವಕ್ಕೆ ಧಕ್ಕೆಯನ್ನುಂಟುಮಾಡಿತ್ತು. ಆದರೆ ಈಗ ಸ್ವತಃ ಭಾರತದಲ್ಲಿ, ಭಾರತೀಯರಿಗೆ ಬ್ರಿಟಿಷರಿಂದ ಆಗುತ್ತಿದ್ದ ಕಿರುಕುಳ, ಅಪಮಾನವನ್ನು ಕಂಡು ಅವಳು ಕಿಡಿಕಾರಿದಳು.

ಸ್ವಾಮೀಜಿಯವರ ಮಹಾಸಮಾಧಿಯ ನಂತರ ಒಂದು ನಿರ್ಣಯಕ್ಕೆ ಬಂದಳು. ಸ್ವಾಮೀಜಿಯವರ ಅಪೇಕ್ಷೆಯಂತೆ ಸಾಮಾಜಿಕ ಸೇವಾಕ್ಷೇತ್ರದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಳು. ಆದರೆ ಅವಳಿಗೆ ಭಾರತೀಯರ ಮನಸ್ಸಿನಲ್ಲಿ ಆಳವಾಗಿ ಊರಿದ್ದ ದಾಸ್ಯಭಾವವನ್ನು ತೊಲಗಿಸಿ, 'ಇದು ನನ್ನ ದೇಶ, ನನ್ನ ಮಾತೃಭೂಮಿ' ಎನ್ನುವ ರಾಷ್ಟ್ರಪ್ರಜ್ಞೆಯನ್ನು ಜಾಗೃತಗೊಳಿಸಬೇಕು ಎನ್ನುವ ಸಂಕಲ್ಪಕ್ಕೆ ಸಿದ್ಧಳಾದಳು. ಸ್ವಾಮೀಜಿಯವರ ರಾಷ್ಟ್ರಪ್ರಜ್ಞೆ, ರಾಷ್ಟ್ರಪ್ರೇಮವನ್ನು ಮೆಚ್ಚಿ ಭಾರತಕ್ಕೆ ಬಂದವಳಲ್ಲವೆ! ಯಾವ ಕೆಲಸ ಮಾಡಿದರೆ ಸ್ವಾಮೀಜಿಯವರ ಉದ್ದೇಶಕ್ಕೆ ಭಂಗ ಬಾರದು ಎಂದು ಯೋಚಿಸಿ, ಸ್ವಾತಂತ್ರ್ಯ ಸಂಗ್ರಾಮದ ಹೋರಾಟಕ್ಕೆ, ರಾಜಕೀಯವಾಗಿ ಪದಾರ್ಪಣ ಮಾಡಿದಳು. ಇದಕ್ಕಾಗಿ ರಾಮಕೃಷ್ಣ ಮಹಾಸಂಘದ ಸದಸ್ಯತ್ವವನ್ನೇ ಬಿಟ್ಟಳು. ಆದರೆ ಸಂಘದ ಸಂಬಂಧ ಅವಳ ಉಸಿರು ಇರುವವರೆಗೂ ಗಟ್ಟಿಯಾಗಿತ್ತು. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ಅವಳ ಹುಟ್ಟುಗುಣವಾಗಿತ್ತು.

'ನ್ಯಾಷನಲ್ ಕಾಂಗ್ರೆಸ್' ನವರ ಸ್ವಾತಂತ್ರ್ಯ ಸಂಗ್ರಾಮ ಅಹಿಂಸಾತ್ಮಕವಾಗಿತ್ತು. ಈ ಮಂದಗಾಮಿಗಳ ಕಾರ್ಯಗಳು ಅವಳಿಗೆ ಒಪ್ಪಿಗೆಯಾಗಲಿಲ್ಲ. ಆದರೆ ಅದನ್ನು ತಿರಸ್ಕರಿಸಲಿಲ್ಲ, ಪುರಸ್ಕರಿಸಿದಳು. 'ಭಾರತದ ಆಧ್ಯಾತ್ಮಿಕತೆಗೆ ಇದು ಸೂಕ್ತವೇ' ಎಂದುಕೊಂಡು ಆ ಗುಂಪಿನವರನ್ನು ಗೌರವಿಸಿದಳು, ಪ್ರೀತಿಸಿದಳು. ಮುಂದೆ ಕಾಂಗ್ರೆಸ್‌ನಲ್ಲಿಯೇ ಬಿರುಕುಂಟಾಯಿತು. ಕ್ರಾಂತಿಕಾರಿ ಮನೋಭಾವವುಳ್ಳವರು ಮಂದಗಾಮಿ ಗುಂಪನ್ನು ವಿರೋಧಿಸಿದರು. ಈ ತೆರನಾದ ಬಿರುಕು ಸಂಸ್ಥೆಯ ಬೆಳವಣಿಗೆಗೆ ಒಳ್ಳೆಯದಲ್ಲ ಎಂದು ನಿವೇದಿತಾಗೆ ಅನ್ನಿಸಿದರೂ, ಅವಳ ಕ್ಷಾತ್ರ ಸ್ವಭಾವ ತೀವ್ರಗಾಮಿಗಳ ಕಡೆಗೆ ಒಲಿಯಿತು. ಇವಳಿಗೆ ಉಪನ್ಯಾಸದಲ್ಲಿ ಜನರನ್ನು ಬಡಿದೆಬ್ಬಿಸುವ ಓಜಸ್ಸು ಇತ್ತು. ಯುವಕರನ್ನು ಆಕರ್ಷಿಸುವ ತೇಜಸ್ಸೂ ಇತ್ತು. ಮನೆಮನೆಗೂ ಹೋಗಿ ಸ್ವಾತಂತ್ರದ ಕಿಡಿಯನ್ನು ಹೊತ್ತಿಸುವ ಶಕ್ತಿ ಇತ್ತು. ಕೊಲ್ಕತ್ತಾದಲ್ಲಿ ತನ್ನ ಸೇವಾಕಾರ್ಯಗಳಿಂದ ಎಲ್ಲರನ್ನೂ ಆಕರ್ಷಿಸಿದ್ದಳು. ಮಹಿಳೆಯರಂತೂ ಈಕೆಯನ್ನು ತಮ್ಮವರಲ್ಲಿ ಒಬ್ಬಳೆಂದೇ ಭಾವಿಸಿದ್ದರು. ಇವಳ ಭಾರತೀಯತೆಯಲ್ಲಿ ಶುದ್ಧತೆ ಇತ್ತು. ಅನಾವಶ್ಯಕವಾಗಿ ಯಾರಾದರೂ ಇಂಗ್ಲೀಷನಲ್ಲಿ ಮಾತನಾಡಿಸಿದರೆ ಸಿಡಿದೇಳುತ್ತಿದ್ದಳು. ಒಮ್ಮೆ ಆರ್ಯಸಮಾಜದವರೊಬ್ಬರು 'ಮೇಡಂ ಸಾಹಿಬಾ' ಎಂದು ಕರೆದದ್ದನ್ನು ಕೇಳಿ ನಿವೇದಿತಾ ಕೆರಳಿದಳು. ಅವಳ ನಡೆ-ನುಡಿ ಎಲ್ಲದರಲ್ಲೂ ನೂರಕ್ಕೆ ನೂರರಷ್ಟು ಭಾರತೀಯತೆ! ನಂತರ ಹೇಳುತ್ತಾಳೆ ''ತಾವು 'ಸೋದರಿ' ಎಂದು ಕರೆದರೆ ಬಹಳ ಸಂತೋಷ'' ಎಂದು.

ಶತಶತಮಾನಗಳ ಪರಕೀಯರ ದಾಸ್ಯದಲ್ಲಿಯೇ ಬದುಕು ಸಾಗಿಸುತ್ತಿದ್ದ ಭಾರತೀಯರ ಶೋಚನೀಯ ಸ್ಥಿತಿಗೆ ನಿವೇದಿತಾಳ ಮನಸ್ಸು ಪ್ರಕ್ಷುಬ್ಧಗೊಂಡಿತ್ತು. ಪ್ರಸ್ತುತ ಬ್ರಿಟಿಷರಿಂದ ಭಾರತೀಯರಿಗೆ ಆಗುತ್ತಿದ್ದ ಹಿಂಸೆ, ಅಪಮಾನಗಳನ್ನು ಕಂಡು ರೋಸಿ ಹೋಗಿದ್ದಳು. ಅದಕ್ಕಾಗಿ ಅವಳು ತನ್ನ ಕಾರ್ಯಚಟುವಟುಕೆಗಳಲ್ಲಿ, ಅದರಲ್ಲಿಯೂ ''ಸ್ವಾತಂತ್ರ್ಯ ಸಂಗ್ರಾಮದ'' ಹಿನ್ನೆಲೆಯಲ್ಲಿ ಪ್ರಥಮವಾಗಿ ಭಾರತೀಯರಲ್ಲಿ ರಾಷ್ಟ್ರಪ್ರಜ್ಞೆಯನ್ನು ಮೂಡಿಸುವುದಕ್ಕೆ ಆದ್ಯತೆ ಕೊಟ್ಟಳು. 'ಇದು ನಮ್ಮ ದೇಶ; ಇದು ನಮ್ಮ ಹಕ್ಕು' ಎನ್ನುವುದನ್ನು ಪ್ರತಿ ಭಾರತೀಯನಲ್ಲೂ ದೃಢಪಡಿಸಬೇಕು ಎನ್ನುವ ನಿಲುವು ನಿವೇದಿತಾಳದಾಗಿತ್ತು. ಇವಳ ಭಾವನೆಗೆ ಪುಷ್ಟಿ ನೀಡುವಂತೆ ೧೯೦೨ ರಲ್ಲಿ ದೆಹಲಿಯಲ್ಲಿ ನಡೆದ ದರ್ಬಾರಿಗಾಗಿ ಖರ್ಚುಮಾಡಿದ ಹೇರಳವಾದ ಹಣದ ಬಗ್ಗೆ, ರಾಷ್ಟ್ರಪ್ರೇಮಿಗಳು (ಕಾಂಗ್ರೆಸ್) ಖಂಡಿಸಿದರು. ನಿವೇದಿತಾಳಿಗೆ ಇದು ಸಂತೋಷದ ವಿಷಯವಾಗಿತ್ತು. ಆಡಳಿತಗಾರರಾಗಿದ್ದ ಬ್ರಿಟಿಷರು ತಮ್ಮನ್ನು ಎದುರಿಸುವವರೇ ಇಲ್ಲವೆಂದು ಸೊಕ್ಕಿ ಮೆರೆಯುತ್ತಿದ್ದವರಿಗೆ ಸ್ವಾತಂತ್ರ್ಯ ಸಂಗ್ರಾಮದ ಬಿಸಿ ತಗಲುವಂತೆ ಮಾಡಿದರು. ಬ್ರಿಟಿಷರ ವಿರುದ್ಧ ಗುಡುಗಿದರು. ಇನ್ನೊಂದು ಘಟನೆ ನಿವೇದಿತಾಳನ್ನು ಕೆರಳಿಸಿದ್ದು ಲಾರ್ಡ್ ಕರ್ಜನ್

ಸೇತುವೆಯ ಮೇಲೆ ನಡೆದು ಹೋಗಿ ಸ್ವಾತಂತ್ರ್ಯದ ವಿಜಯೋತ್ಸವನ್ನು ಆಚರಿಸುತ್ತಾರೆ'' ಎಂದು ನಿವೇದಿತಾ ನಿಶ್ಚಯಾತ್ಮಕವಾಗಿ ಹೇಳುತ್ತಿದ್ದಳು. ಅಂತಿರುವಲ್ಲಿ ಅವಳು ಭೂಪೇಂದ್ರರಂತಹ ವೀರರನ್ನು ಹುರಿದುಂಬಿಸದೆ ಇರುತ್ತಾಳೆಯೆ!

ಭೂಪೇಂದ್ರರು ಸೆರೆಮನೆಯಲ್ಲಿದ್ದಾಗ ಆಗಾಗ ಅವರ ಮನೆಗೆ ಹೋಗಿ, ನಿವೇದಿತಾ ಅವರ ತಾಯಿ ಭುವನೇಶ್ವರೀ ದೇವಿಯವರಿಗೆ ಸಮಾಧಾನದ ಮಾತುಗಳನ್ನು ಹೇಳುತ್ತಿದ್ದಳು. ''ಯಾವುದೇ ಪರಿಸ್ಥಿತಿ ಎದುರಾದರೂ ಸರಿಯೆ, ಭುವನೇಶ್ವರೀ ದೇವಿಯವರನ್ನು ನಾನು ನೋಡಿಕೊಳ್ಳುತ್ತೇನೆ'' ಎಂದು ನಿವೇದಿತಾ ಭೂಪೇಂದ್ರರಿಗೆ ಮಾತುಕೊಟ್ಟಿದ್ದಳು. ಆ ಮಾತಿನಂತೆಯೇ ಅವಳು ನಡೆದುಕೊಂಡಳು. ಸೆರೆಮನೆಯಿಂದ ಬಿಡುಗಡೆಗೊಂಡ ಬಳಿಕ ಭೂಪೇಂದ್ರರು ಅಮೆರಿಕೆಗೆ ಹೋಗಿ ಅಲ್ಲಿಂದಲೇ ಚಳುವಳಿಯ ಕೆಲಸಗಳನ್ನು ಮಾಡತೊಡಗಿದರು. ಈ ನಡುವೆ ನಿವೇದಿತಾ ಅಮೇರಿಕಾ ಯಾತ್ರೆ ಕೈಗೊಂಡಿದ್ದಾಗ, ಭೂಪೇಂದ್ರರನ್ನೂ ಸಂಧಿಸಿದಳು. ಆ ಹೊತ್ತಿನಲ್ಲಿ ಅವರು ಆರ್ಥಿಕ ಸಂಕಷ್ಟಕ್ಕೆ ಗುರಿಯಾಗಿದ್ದರು. ಆಗ ನಿವೇದಿತಾ ತನ್ನ **'ಕಾಳಿ ದಿ ಮದರ್'** ಎಂಬ ಗ್ರಂಥದ ಪ್ರಕಟನೆಯಿಂದ ತನಗೆ ಲಭಿಸಿದ್ದ ಹಣವನ್ನು ಭೂಪೇಂದ್ರರಿಗೆ ಕೊಟ್ಟು ಸಂತೈಸಿದಳು.

### ಚಾಪೇಕರ್ ಮಾತೆ

ಮುಂಬಯಿಯಲ್ಲಿ ಚಾಪೇಕರ್ ಮನೆತನದ ಮೂವರು ಸೋದರರು ಸ್ವಾತಂತ್ರ್ಯ ಹೋರಾಟದಲ್ಲಿ ಭಾರತಾಂಬೆಗಾಗಿ ತಮ್ಮ ಪ್ರಾಣಗಳನ್ನು ಸಮರ್ಪಿಸಿದ್ದರು. ಆ ವಿಷಯ ನಿವೇದಿತಾಳಿಗೂ ತಿಳಿದಿತ್ತು. ಮುಂಬೈ ಪ್ರವಾಸ ಕಾಲದಲ್ಲಿ ಅವಳು ಚಾಪೇಕರ್ ಸೋದರರ ಮಾತೆಯನ್ನು ಕಾಣಬೇಕೆಂದು ಆಶಿಸಿದಳು. ಪತ್ತೆಮಾಡಿಕೊಂಡು ಅವರ ಮನೆಗೆ ಹೊದಳು. ವೃದ್ಧೆಯಾಗಿ ಸೊರಗಿ ಕುಳಿತಿದ್ದ ಆ ಪುಣ್ಯಮಾತೆಯ ದರ್ಶನ ಮಾಡಿದ ಬಳಿಕ, ''ನೀನು ಕೃತಾರ್ಥಳಾಗಿದ್ದೀಯೆ ತಾಯೆ, ಮೂವರು ಸುಪುತ್ರರನ್ನು ಭಾರತಮಾತೆಯ ಮಡಿಲಿಗೊಪ್ಪಿಸಿಬಿಟ್ಟೆ. ನಿನ್ನ ಸಂಕಟವನ್ನು ಯಾರು ತಾನೆ ಭರಿಸಬಲ್ಲರು! ಸಮಾಧಾನ ತಂದುಕೋ, ಕೊರಗಬೇಡ ತಾಯೆ'' ಎಂದು ಸಾಂತ್ವನದ ನುಡಿಗಳನ್ನಾಡಿದಳು. ಆಗ ಆ ಪುಣ್ಯಜೀವಿಯು ಇಲ್ಲ, ''ಇಲ್ಲ, ಅದೇನು ದೊಡ್ಡದಲ್ಲ ಬಿಡು. ಆ ವಿಚಾರವಾಗಿ ನನಗೇನೂ ಕೊರಗಿಲ್ಲ'' ಎಂದಳು. ಆ ಮಾತನ್ನು ಅಷ್ಟಕ್ಕೇ ಬಿಡದೆ ನಿವೇದಿತಾ ''ಮತ್ತಾವುದರ ಕೊರಗು ತಾಯೆ?'' ಎಂದು ಪ್ರಶ್ನಿಸಿದಳು. ಅದಕ್ಕೆ ಉತ್ತರವಾಗಿ ಆ ಮಾತೆ, ''ದೇಶಕ್ಕಾಗಿ ನೀಡಲು ನನಗೆ ಇನ್ನೂ



ಇಬ್ಬರು ಮಕ್ಕಳಿಲ್ಲವಲ್ಲ, ಅದೇ ನನಗೆ ಕೊರಗು'' ಎಂದಳು. ಆ ಮಾತನ್ನು ಕೇಳಿ ನಿವೇದಿತಾ ಸ್ತಂಭೀಭೂತಳಾಗಿಬಿಟ್ಟಳು. ಮರು ಮಾತಾಡದೆ ಆಕೆಯ ಕಾಲಮೇಲೆ ತಲೆಯಿಟ್ಟು ನಮಸ್ಕರಿಸಿ ಹೊರಬಂದಳು. ಆ ಚಾಪೇಕರ್ ಮಾತೆಯನ್ನೂ ಭಾರತದ ಮಹಾ ವ್ಯಕ್ತಿಗಳ ಗುಂಪಿಗೇ ಸೇರಿಸಬಹುದಲ್ಲವೆ!

### ಆಶ್ಚರ್ಯಜನಕ ವಿಚಾರ

ನಿವೇದಿತಾಳ ಜೀವಿತಾವಧಿ ೪೪ ವರ್ಷಗಳು ಮಾತ್ರವೇ! ಅವಳು ಭಾರತಕ್ಕೆ ಕಾಲಿಟ್ಟಾಗಲೇ ಅವಳಿಗೆ ೩೧ ವರ್ಷ. ಭಾರತದಲ್ಲಿದ್ದ ೧೩ ವರ್ಷಗಳ ಅವಧಿಯಲ್ಲಿ ಎರಡು ಬಾರಿ ವಿದೇಶಯಾತ್ರೆ ಕೈಗೊಂಡು ಅದರಲ್ಲಿಯೇ ನಾಲ್ಕೂವರೆ ವರ್ಷ ಕಳೆದುಹೋಯಿತು. ಹೀಗಾಗಿ ಅವಳು ಭಾರತದ ನೆಲದಲ್ಲಿದ್ದುದು ಕೇವಲ ಎಂಟೂವರೆ ವರ್ಷ ಮಾತ್ರ. ಅಷ್ಟರೊಳಗೆ ಅವಳು ಅದೆಷ್ಟು ಜನ ಮಹಾಪುರುಷರ ಸಂಪರ್ಕ ಸಾಧಿಸಿದಳು, ಅದೆಷ್ಟು ಜನರನ್ನು ಪ್ರೋತ್ಸಾಹಿಸಿದಳು, ಅದೆಷ್ಟು ಜನರನ್ನು ಹುರಿದುಂಬಿಸಿದಳು, ಅದೆಷ್ಟು ಜನರ ಕಣ್ಣೀರನ್ನು ಒರೆಸಿದಳು, ಅದೆಷ್ಟು ಜನರಿಗೆ ಉಪಕಾರ ಮಾಡಿದಳು, ಅದೆಷ್ಟು ಜನರನ್ನು ತಿದ್ದಿದಳು, ಅದೆಷ್ಟು ಓದಿದಳು, ಅದೆಷ್ಟು ಬರೆದಳು ಎಂಬುದನ್ನೆಲ್ಲ ನೋಡಿದರೆ 'ಹೀಗೂ ಉಂಟೆ?' ಎಂದು ಪರಮಾಶ್ಚರ್ಯವಾಗುತ್ತದೆ!

ಆಧಾರ ಗ್ರಂಥಗಳು

*೧. 'ಸೋದರಿ ನಿವೇದಿತಾ', ಸ್ವಾಮಿ ನಿತ್ಯಸ್ಥಾನಂದ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು; ೨೦೧೧. ಪು. ೩೦೩*

*೨. 'ನಿವೇದಿತಾ ಆಫ್ ಇಂಡಿಯಾ' ಸ್ವಾಮಿ ಪ್ರಭಾನಂದ, ಶ್ರೀರಾಮಕೃಷ್ಣ ಮಿಷನ್, ಕೋಲ್ಕತ್ತಾ. ೨೦೦೨. ಪು. ೯೮* ❖

### ನಿರ್ಭಯರಾಗಿ!

ನಿವೇದಿತಾ ತನ್ನ ಶಾಲೆಯ ಬಾಲಕಿಯರನ್ನು ದಕ್ಷಿಣೇಶ್ವರ, ಪಶುಶಾಲೆ, ಪುರಾತನ ವಸ್ತುಸಂಗ್ರಹಾಲಯ ಮುಂತಾದ ಹತ್ತಿರದ ಪ್ರೇಕ್ಷಣೀಯ ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಿದ್ದಳು. ಒಮ್ಮೆ ಅವರು ದೋಣಿಯಲ್ಲಿ ಹೋಗುತ್ತಿರುವಾಗ ದೊಡ್ಡ ಅಲೆಗಳಿಂದಾಗಿ ದೋಣಿಯು ಜೋರಾಗಿ ಓಲಾಡತೊಡಗಿತು. ಬಾಲಕಿಯರು ಭಯಗೊಂಡದ್ದನ್ನು ನೋಡಿ ನಿವೇದಿತಾ ಹೇಳಿದಳು: ''ಭಯವೇಕೆ? ದೊಡ್ಡ ಅಲೆಗಳಿಗೆ ಭಯಪಡಬೇಡಿ. ಉತ್ತಮ ಅಂಬಿಗನು ಎಂತಹ ಅಲೆಗಳು ಬಂದರೂ ವಿಚಲಿತನಾಗದೆ ಅಲೆಗಳ ಮೇಲೆಯೆ ಸುಲಭವಾಗಿ ಹಾದುಹೋಗುವನು. ಹಾಗೆಯೇ ನಮ್ಮ ಜೀವನದಲ್ಲಿಯೂ ನಾವು ಧೈರ್ಯದಿಂದಿದ್ದರೆ ಯಾವ ಭಯವೂ ಇರುವುದಿಲ್ಲ.''

*('ಸೋದರಿ ನಿವೇದಿತಾ', ಪು. ೧೮೯)*



# ನಿಷ್ಕಾಮಕರ್ಮಿ ಸೋದರಿ ನಿವೇದಿತಾ

ಡಾ.ಡಿ.ಕೆ. ರಾಜೇಂದ್ರ

ಸ್ವಾಮಿ ವಿವೇಕಾನಂದರು ನೀಡಿದ ಕರೆಗೆ ಓಗೊಟ್ಟು ದೀನದಲಿತರ, ಬಡವರ ಹಾಗೂ ರೋಗಪೀಡಿತರ ಸೇವೆಗಾಗಿ ಕಟಿಬದ್ಧಳಾಗಿ ನಿಂತ ಸೋದರಿ ನಿವೇದಿತಾ, ಸೇವಾಕಾರ್ಯದ ಮೂಲಕ ಕರ್ಮಯೋಗದ ಆದರ್ಶವನ್ನು ಜಗತ್ತಿಗೆ ತೋರಿಸಿಕೊಟ್ಟವಳು. ಈ ವಿಷಯದ ಬಗ್ಗೆ ಬರೆದಿರುವ ಲೇಖಕರು ಕನ್ನಡದ ಹಿರಿಯ ವಿದ್ವಾಂಸರು ಹಾಗೂ ಲೇಖಕರು.

**ಸೋ**ದರಿ ನಿವೇದಿತಾ ಅಪರೂಪದ ಸ್ತ್ರೀರತ್ನ. ಸ್ವಾಮಿ ವಿವೇಕಾನಂದರು ತಮ್ಮ ಇಂಗ್ಲೆಂಡ್ ಪ್ರವಾಸದಲ್ಲಿ ಹುಡುಕಿ ಭಾರತಕ್ಕೆ ಬರಮಾಡಿಕೊಂಡ ಅಮೋಘ ಪುಷ್ಪ. ಅವರೇ ಒಂದೆಡೆ ಕರೆದಿರುವಂತೆ: 'Nivedita is the fairest flower'. ಅಂತಹ ಅಮೋಘ ಪುಷ್ಪದ ಮೂಲಕ ಭಾರತದಲ್ಲಿ ದೊಡ್ಡ ಸಾಧನೆಯಾಗುವುದಿದೆಯೆಂಬುದನ್ನು ವಿವೇಕಾನಂದರು ತಮ್ಮ ದೂರದೃಷ್ಟಿಯಿಂದ ಕಂಡುಕೊಂಡಿದ್ದರು. ಅವರ ಕನಸನ್ನು ನಿವೇದಿತಾ ನೆರವೇರಿಸಿಕೊಟ್ಟಳು. ಅವರ ದೂರದೃಷ್ಟಿ ಭವಿಷ್ಯದಲ್ಲಿ ಒಳ್ಳೆಯ ಫಲ ನೀಡಿತು. ತನ್ನ ಮೂಲ ಹೆಸರಾದ ಮಾರ್ಗರೆಟ್ ಎಲಿಜಬೆತ್ ನೋಬೆಲ್ ಎಂಬುದನ್ನು ಸಂಪೂರ್ಣವಾಗಿ ಇಲ್ಲವಾಗಿಸಿಕೊಂಡು ಭಾರತದ, ಅಷ್ಟೇ ಏಕೆ ವಿಶ್ವದ ಪಾಲಿಗೆ 'ಸೋದರಿ ನಿವೇದಿತಾ' ಎನಿಸಿಕೊಂಡು ವಿಶ್ವಮಾನ್ಯಳಾದಳು.

ಭಾರತ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಅಷ್ಟೇ ಅಲ್ಲ ಸಾಮಾಜಿಕವಾಗಿಯೂ ಗೊಂದಲಮಯವಾಗಿದ್ದ ಕಾಲದಲ್ಲಿ ಸೋದರಿ ನಿವೇದಿತಾಳಂತಹ ಧೀಮಂತ, ದಿಟ್ಟ ಮಹಿಳೆಯ ಆವಶ್ಯಕತೆಯನ್ನು ಸ್ವಾಮಿ ವಿವೇಕಾನಂದರು ಮನಗಂಡಿದ್ದರು. ಅವರ ಮಾತುಗಳಿಂದ ಪ್ರಭಾವಿತಳಾಗಿದ್ದ ನಿವೇದಿತಾ ಭಾರತದ ಜನಸೇವೆಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಳು. ವಿವೇಕಾನಂದರ ಮಾರ್ಗದರ್ಶನದಲ್ಲಿ ಅಭೂತಪೂರ್ವ ಕಾರ್ಯಗಳನ್ನು ಮಾಡುವುದರ ಮೂಲಕ ಜಗತ್ತೇ ನಿಬ್ಬೆರಗಾಗುವಂತೆ ಮಾಡಿದ ಕೀರ್ತಿ ಆಕೆಯದು.

ಸೋದರಿ ನಿವೇದಿತಾ ಅಸಾಧಾರಣ ಮಹಿಳೆ. ಆಕೆಯದು ''ತಾಯಿಯ ಮೃದು ಹೃದಯ, ಯೋಧನ ವೀರ್ಯೋತ್ಸಾಹಗಳು, ತತ್ತ್ವಜ್ಞಾನಿಯ ಬೌದ್ಧಿಕ ಪ್ರತಿಭೆ, ಸಾಹಿತಿಯ ಸಾಹಿತ್ಯಶಕ್ತಿ, ಕಲಾವಿದನ ಕಲಾನೈಪುಣ್ಯ, ಸಂತನ ದಿವ್ಯದೃಷ್ಟಿ, ದೇಶಪ್ರೇಮಿಯ ರಾಷ್ಟ್ರಪ್ರಜ್ಞೆ – ಇವೆಲ್ಲ ಏಕತ್ರ ಕಲೆತ ನಾರೀಮಣಿಗೆ ಸ್ವಾಮಿ ವಿವೇಕಾನಂದರು ತಮ್ಮ ಅಧ್ಯಾತ್ಮಶಕ್ತಿಯನ್ನು ಧಾರೆಯೆರೆದು ರೂಪಿಸಿದ ಪುಣ್ಯಮೂರ್ತಿಯೇ ನಿವೇದಿತಾ.'' *('ಸೋದರಿ ನಿವೇದಿತಾ', ಸ್ವಾಮಿ ನಿತ್ಯಸ್ಥಾನಂದ).*

ಆಕೆ ಸೌಂದರ್ಯದ ಖನಿಯೂ ಆಗಿದ್ದಳು. ಖ್ಯಾತ ಕಲಾವಿದರಾದ ಅವನೀಂದ್ರನಾಥ ಠಾಕೂರರು ತಮ್ಮ ಒಂದು ಲೇಖನದಲ್ಲಿ ಬಣ್ಣಿಸಿರುವ ಪರಿ ಇದು : ''ಅದೊಂದು ಅಭೂತಪೂರ್ವ ಸಭೆ. ಕಲ್ಕತ್ತೆಯ ಪ್ರಖ್ಯಾತ ಮಹಿಳೆ ಮಹನೀಯರು ತಮ್ಮ ಅತ್ಯಂತ ಬೆಲೆಬಾಳುವ ಉಡಿಗೆ ತೊಡುಗೆಗಳನ್ನು ತೊಟ್ಟು ಬಂದಿದ್ದರು... ಈಕೆಯ ಸರಳ ಸೌಂದರ್ಯ ಮತ್ತು ಸ್ನಿಗ್ಧ ಗಾಂಭೀರ್ಯದೆದುರಿಗೆ ಅಲ್ಲಿ ನೆರೆದಿದ್ದ ಲಾವಣ್ಯವತಿಯರೆಲ್ಲ ಮ್ಲಾನರಾಗಿ ಹೋದರು. ಹಿಂದಿನಂತೆಯೇ ಅದೇ ಶ್ವೇತವಸನ, ಕೊರಳಲ್ಲಿ ರುದ್ರಾಕ್ಷಿಯ ಮಾಲೆ ತಲೆಯಲ್ಲಿ ಅರ್ಧ ಹೊಂಬಣ್ಣ ಅರ್ಧ ರಜತವರ್ಣದ ಕೇಶರಾಶಿ. ಅಲ್ಲಿ ನೆರೆದವರ ದೃಷ್ಟಿಯೆಲ್ಲಾ ಇವರ ಕಡೆ ಧಾವಿಸಿದವು. ಎಲ್ಲರನ್ನೂ ಈಕೆ ಆಕರ್ಷಿಸಿದರು. ಎಲ್ಲರೂ ಪಿಸುಮಾತಾಡತೊಡಗಿದರು. ಯಾರಿರಬಹುದು ಈಕೆ ಎಂದು ವುಡ್‌ರೋಫ್ ಬ್ರಂಟ್ ಎನ್ನುವವರು ನನ್ನನ್ನು ಕೇಳಿದರು. ನಾನು ನಿವೇದಿತಾರವರನ್ನು ನೆರೆದ ಪ್ರಮುಖರಿಗೆ ಪರಿಚಯಮಾಡಿಕೊಟ್ಟೆ. ನೀವು ಸೌಂದರ್ಯದ ವಿಷಯವಾಗಿ ಮಾತನಾಡಬಹುದು. ಆದರೆ ನನಗೆ ನಿವೇದಿತೆಯೇ ಸೌಂದರ್ಯಕ್ಕೆ ಆದರ್ಶವಾಗಿರುವರು. ಬಾಣನ ಕಾದಂಬರಿಯಲ್ಲಿ ಮಹಾಶ್ವೇತೆಯಂತೆ ಇರುವರು ಅವರು. ನಾನು ಇಂತಹ ರೂಪವನ್ನು, ಸೌಂದರ್ಯವನ್ನು ನೋಡಿರುವುದು ಅಪರೂಪ. ಆಕೆ ಲಾವಣ್ಯದ ಪರಾಕಾಷ್ಠತೆಯಂತೆ ನನಗೆ ಕಂಡರು. ಕೆಲವು ನಿಮಿಷಗಳು ಆಕೆಯೊಡನೆ ಮಾತನಾಡಿದರೂ ಸಾಕು ಸ್ಫೂರ್ತಿಯ ಕಿಡಿ ನಮ್ಮೆದೆಯಲ್ಲಿ ಜಾಗೃತವಾಗುವುದು.''

ಸೋದರಿ ನಿವೇದಿತಾ ಹೊರಗಿನ ಸೌಂದರ್ಯವನ್ನಷ್ಟೇ ಹೊಂದಿದವಳಾಗಿರಲಿಲ್ಲ. ಒಳಗೂ ಹೃದಯ ಶ್ರೀಮಂತಿಕೆಯ, ಅಸಾಧಾರಣ ಕರ್ತೃತ್ವ ಶಕ್ತಿಯ, ಅಪೂರ್ವ ವ್ಯಕ್ತಿತ್ವವನ್ನು ಒಳಗೊಂಡವಳಾಗಿದ್ದಳು.

'ನಿವೇದಿತಾ' ಎಂಬ ಹೆಸರೇ ಆಕೆಗೆ ಸಂಪೂರ್ಣ ಅನ್ವರ್ಥ ವಾದುದು. 'ಸಮರ್ಪಿಸಿಕೊಂಡವಳು' ಎಂಬ ಅರ್ಥದ ಆ ಹೆಸರು ಅವಳ ವ್ಯಕ್ತಿತ್ವವನ್ನು ಪೂರ್ಣವಾಗಿ ಅನಾವರಣಗೊಳಿಸುತ್ತದೆ. ಅನ್ಯ ಸಂಸ್ಕೃತಿಯಿಂದ ಬಂದ ಆಕೆ ಭಾರತವನ್ನು ಮನಸಾರೆ ಪ್ರೀತಿಸಿದ್ದು, ಅಲ್ಲಿಯ ಸಂಸ್ಕೃತಿಯನ್ನು ಗೌರವಿಸಿದ್ದು, ಅಲ್ಲಿಯ ಸ್ಥಿತಿಗತಿಯನ್ನು ಕಂಡು ಅನುಕಂಪೆಯನ್ನು ತೋರಿ, ಅದರ ಸುಧಾರಣೆಗೆ ಪಣ ತೊಟ್ಟಿದ್ದು, ಅದಕ್ಕಾಗಿ ಸ್ತ್ರೀಶಿಕ್ಷಣದ ಮಹತ್ವವನ್ನು ಅರಿತು ಸ್ವತಃ ಶಾಲೆಗಳನ್ನು ತೆರೆದು ತಾನೇ ಶಿಕ್ಷಕಿಯಾಗಿಯೂ ಕಾರ್ಯ ನಿರ್ವಹಿಸಿದ್ದು, ಬಡತನದ ನಿರ್ಮೂಲನೆಗೆ ಹಾಗೂ ರೋಗಿಗಳ ಆರೈಕೆಗೆ ತಾನೇ ಮುಂದೆ ನಿಂತು ಶ್ರಮಿಸಿದ್ದು ಇವೆಲ್ಲಕ್ಕೂ ಅಗತ್ಯವಾಗಿ ಬೇಕಾಗಿದ್ದ ಹಣಕ್ಕಾಗಿ ಮತ್ತೆ ತನ್ನ ದೇಶಕ್ಕೆ ತೆರಳಿ ಹಣಸಂಗ್ರಹಣೆಯಲ್ಲಿ ತೊಡಗಿದ್ದು – ಒಟ್ಟಾರೆ ಭಾರತದ ಅಭಿವೃದ್ಧಿಗಾಗಿ ಸ್ವಾಮಿ ವಿವೇಕಾನಂದರ ಜೊತೆ ಕೈಜೋಡಿಸಿ ಅವರ ಭರವಸೆಯನ್ನು ಈಡೇರಿಸಲು ಅಂತಃಕರಣಪೂರ್ವಕವಾಗಿ ಹಗಲಿರುಳೆನ್ನದೆ ದುಡಿದದ್ದು ಸೋದರಿ ನಿವೇದಿತಾಳ ಹೆಚ್ಚುಗಾರಿಕೆ. ಅಷ್ಟೇ ಅಲ್ಲ, ಆಕೆ ಭಾರತೀಯ ಜನರೊಂದಿಗೆ ಬೆರೆತು ಇಲ್ಲಿಯ ಆಚಾರ–ವಿಚಾರ, ಸಂಪ್ರದಾಯ–ನಡವಳಿಕೆಯನ್ನು ಅರ್ಥಮಾಡಿಕೊಂಡು ಅವೆಲ್ಲಕ್ಕೂ ಸ್ಪಂದಿಸಿದ್ದು ವಿಶೇಷ. ಈ ಹಿನ್ನೆಲೆಯಲ್ಲಿ ಆಕೆ ಭಾರತೀಯ ಪ್ರತಿಭಾನ್ವಿತರ ಮನಗೆದ್ದಳು. ಅಂತೆಯೇ ಸಾಮಾನ್ಯರ ಆರಾಧ್ಯ ದೈವವಾದಳು. ಸ್ವಾರ್ಥದ ಲವಲೇಶವನ್ನೂ ಅರಿಯದ ನಿವೇದಿತಾ ಭಾರತದ ಪಾಲಿಗೆ, ಬಡಬಗ್ಗರ ಪಾಲಿಗೆ ಆಶಾಕಿರಣವಾದಳು. ಅವಳ ತ್ಯಾಗ ಹಾಗೂ ಸೇವಾ ಮನೋಭಾವ ಹಾಗೂ ಹಿಡಿದ ಕೆಲಸವನ್ನು ಸಾಧಿಸಿ ತೋರಿಸುವ ಛಲ, ಎಲ್ಲರನ್ನೂ ಬೆರಗುಗೊಳಿಸಿತ್ತು. ಯಾವುದೇ ಕಾರಣಕ್ಕೂ ತನ್ನ ನಿಲುವನ್ನು ಬದಲಿಸಿಕೊಳ್ಳದ ಅವಳ ಧೈರ್ಯ–ಸ್ಥೈರ್ಯ ಅವಳ ಗುರುವಾದ ಸ್ವಾಮಿ ವಿವೇಕಾನಂದರಿಗೂ ಮೆಚ್ಚುಗೆಯಾಗಿತ್ತು. ಅಲ್ಲೊಮ್ಮೆ ಇಲ್ಲೊಮ್ಮೆ ಹಲವು ವಿಚಾರಗಳಲ್ಲಿ ಆಗಿಂದಾಗ್ಗೆ ಅವರಿಬ್ಬರ ನಡುವೆಯೇ ವಾಗ್ವಾದ ನಡೆಯುತ್ತಿದ್ದುದೂ ಉಂಟು. ಅದು ಸ್ವಾಮೀಜಿಗೆ ಹೆಮ್ಮೆಯ ಸಂಗತಿಯೇ ಆಗಿತ್ತು. ಆ ಕಾರಣಕ್ಕಾಗಿಯೇ ಆಕೆ ದಿಟ್ಟ ಮಹಿಳೆ ಎನಿಸಿಕೊಂಡಿದ್ದಳು.

**ನಿವಿನ್ಸನ್** ಎಂಬ ಒಬ್ಬ ಪ್ರಸಿದ್ಧ ಪತ್ರಕರ್ತ ನಿವೇದಿತಾಳ ಬಗ್ಗೆ ಒಂದೆಡೆ ಹೀಗೆ ಬರೆಯುತ್ತಾನೆ : ''ನಿವೇದಿತಾಳನ್ನು ಎರಡು ಪುಟಗಳಲ್ಲಿ ವರ್ಣಿಸುವುದೆಂದರೆ ಬೆಂಕಿಯನ್ನು ಒಂದು ಸೂತ್ರಕ್ಕೆ ಒಳಪಡಿಸಿ ಅದನ್ನು ಜ್ಞಾನ ಎಂದು ಕರೆದಷ್ಟೇ ವ್ಯರ್ಥ. ಅವಳು ನಿಜವಾಗಿಯೂ ಬೆಂಕಿಯಂತಿದ್ದಳು. ಅವಳ ಭಾಷೆ ಮಾತ್ರವಲ್ಲ, ಅವಳ ಇಡೀ ವ್ಯಕ್ತಿತ್ವವೇ ನನಗೆ ಬೆಂಕಿಯನ್ನು ನೆನಪಿಗೆ ತರುತ್ತಿತ್ತು. ಅಗ್ನಿಯಂತೆ, ರುದ್ರನಂತೆ, ಕಾಳಿಯಂತೆ, ಹಾಗೂ ಇನ್ನಿತರ ಭಾರತೀಯ ಶಕ್ತಿದೇವತೆಗಳಂತೆ ಅವಳು ವಿಧ್ವಂಸಕಳೂ ಹೌದು, ಸೃಷ್ಟಿಕರ್ತಳೂ ಹೌದು. ಎಷ್ಟು ವಿಭೀಷಣಳೋ ಅಷ್ಟೇ ಉದಾರಳು. ಮಂದ ಪ್ರವೃತ್ತಿ ಅವಳ ಸ್ವಭಾವಕ್ಕೆ ವಿರುದ್ಧ. ಅವಳನ್ನಾರೂ ಸೌಮ್ಯ ಸ್ವಭಾವದವಳೆಂದು ಕರೆದಿಲ್ಲವೆಂದು ನನ್ನ ಭಾವನೆ... ಶತ್ರುಗಳ ಮುಂದೆ ಅವಳ ಕಣ್ಣುಗಳು ಕಾದ ಉಕ್ಕಿನಂತಾಗುತ್ತಿದ್ದುವು. ಕ್ರುದ್ಧಳಾದಾಗ ಅವು ಗಾರಿಬಾಲ್ಡಿಯ ಕಣ್ಣಿನಂತೆ ಇನ್ನೂ ಕೆಂಪಾಗುತ್ತಿದ್ದವು...''

ಸೋದರಿ ನಿವೇದಿತಾಳ ವ್ಯಕ್ತಿತ್ವವೇ ಅಪರೂಪದ ಚಿನ್ನದ ಗಣಿಯಾಗಿತ್ತು. ಅದರಲ್ಲಿ ಎಲ್ಲವೂ ಗುಪ್ತಗಾಮಿನಿಯಂತೆ ಅಡಕವಾಗಿತ್ತು. ಸಂದರ್ಭೋಚಿತವಾಗಿ ಅವೆಲ್ಲವೂ ಸಿಡಿಮದ್ದಿನಂತೆ ಹೊರಹೊಮ್ಮುತ್ತಿದ್ದುವು. ಅದರ ಪರಿಣಾಮ ಒಳ್ಳೆಯವರಿಗೆ ಒಳ್ಳೆಯದಾಗಿ, ಕೆಟ್ಟವರಿಗೆ ಕೆಟ್ಟದ್ದಾಗಿ ಗುರಿತಪ್ಪದೆ ಪರಿಣಮಿಸುತ್ತಿತ್ತು. ನಿವೇದಿತಾ, ವಿವೇಕಾನಂದರ ಸಂಪರ್ಕದಲ್ಲಿದ್ದರೂ ಕೇವಲ ಆಧ್ಯಾತ್ಮಿಕ ವ್ಯಕ್ತಿಯಾಗಿ ಉಳಿಯಲಿಲ್ಲ. ಅವರಂತೆಯೇ ಭಾರತದ ಸರ್ವತೋಮುಖ ಅಭಿವೃದ್ಧಿಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡಳು. ಸಾಮಾಜಿಕ ಕಾರ್ಯಗಳ ಜೊತೆಗೆ–ಸಾಹಿತ್ಯ, ಕಲೆ, ಪತ್ರಿಕೋದ್ಯಮ, ವಿಜ್ಞಾನ, ಶಿಕ್ಷಣ, ಅಧ್ಯಾತ್ಮ, ಇತಿಹಾಸ ಇತ್ಯಾದಿ ಕಾರ್ಯಗಳಲ್ಲಿಯೂ ಕ್ರಿಯಾಶೀಲಳಾಗಿದ್ದಳು.

ಸ್ವಾತಂತ್ರ್ಯ ಹೋರಾಟಗಾರಳಾಗಿ ಮಹಾತ್ಮಾ ಗಾಂಧೀಜಿ ಅವರ ಮೆಚ್ಚುಗೆಗೆ ಪಾತ್ರಳಾಗಿದ್ದಂತೆಯೇ, ಸಾಹಿತ್ಯಿಕವಾಗಿ ರವೀಂದ್ರನಾಥ ಠಾಕೂರರ ಸಂಪರ್ಕವೂ ಅವಳಿಗಿತ್ತು. ಹಾಗೆಯೇ ವಿಜ್ಞಾನ ಕ್ಷೇತ್ರದ ಡಾ.ಜಗದೀಶ್ ಚಂದ್ರಬೋಸ್ ನಿಕಟವರ್ತಿಯಾಗಿದ್ದರು. ನಿವೇದಿತಾಳ ಬಹುಮುಖ ಪ್ರತಿಭೆ ಸರ್ವವ್ಯಾಪಿಯಾದುದಾಗಿತ್ತು. ಅದಕ್ಕೆ ಎಲ್ಲೆಯೇ ಇರಲಿಲ್ಲ. ಹಾಗಾಗಿ ಭಾರತದ ಎಲ್ಲ ಕ್ಷೇತ್ರದ, ಎಲ್ಲ ಪ್ರತಿಭಾನ್ವಿತರ ಸಂಪರ್ಕ ಅವಳಿಗಿತ್ತು. ಆದರೆ ಅದು ಪರಸ್ಪರ ಪ್ರತಿಭಾ ವಿನಿಮಯದ ಕೊಡುಗೆಯಾಗಿತ್ತು.

ನಿವೇದಿತಾಳ ಅತ್ಯಂತ ನಿಕಟವರ್ತಿಗಳಾಗಿದ್ದ ವಿಜ್ಞಾನಿ ಡಾ. ಜಗದೀಶ್ ಚಂದ್ರಬೋಸ್ ದಂಪತಿಗಳು ಆ ಸಾಲಿನಲ್ಲಿ ಮೊದಲಿಗರಾಗಿ ನಿಲ್ಲುತ್ತಾರೆ. ಡಾ.ಬೋಸರ ಸಂಶೋಧನೆಯನ್ನು ನಿವೇದಿತ ಬಹಳವಾಗಿ ಮೆಚ್ಚಿಕೊಂಡಿದ್ದದ್ದಷ್ಟೇ ಅಲ್ಲ ಹಲವು ರೀತಿಯಲ್ಲಿ ಅವರ ಸಂಶೋಧನೆಗೆ ನೆರವಾಗುವುದರ ಜೊತೆಗೆ ಅವರ ಶಾಂತಿ ಸಮಾಧಾನಗಳ ನೆಲೆಯಾಗಿದ್ದವಳು ನಿವೇದಿತಾ. ರವೀಂದ್ರನಾಥ ಠಾಕೂರರಿಗೆ ಬರೆದ ಪತ್ರವೊಂದರಲ್ಲಿ ಡಾ.ಬೋಸ್ ಅವರು ಹೀಗೆ ಬರೆಯುತ್ತಾರೆ: ''ದಣಿವಾದಾಗಲೆಲ್ಲ, ಬೇಸರವಾದಾಗಲೆಲ್ಲಾ ನಾನು ನಿವೇದಿತಾಳಲ್ಲಿ ಆಶ್ರಯ ಪಡೆಯುತ್ತಿದ್ದೆ.'' ನಿವೇದಿತಾ ಕೇವಲ ಕಾರ್ಯದಕ್ಷತೆಯುಳ್ಳ ಯಂತ್ರವಾಗಿರಲಿಲ್ಲ, ಅಂತಃಕರಣ ತುಂಬಿದ ಮಾನವತ್ವದ ಕಣಜದಂತಿದ್ದಳು. ಡಾ.ಬೋಸರ ಪತ್ನಿ ಅಬಲಾ ಬೋಸ್ ಬರೆದಿರುವ ನಿವೇದಿತಾಳ ಸ್ಮೃತಿಕಥೆಯಲ್ಲಿ ಅದನ್ನು ದಾಖಲಿಸುತ್ತಾರೆ: ''ನಾನು ಅವಳ ದೈನಂದಿನ ಜೀವನವನ್ನು ನೋಡಿರುವೆ. ವಿಶಿಷ್ಟ ಪ್ರಕೃತಿಯ ಮಹಿಳೆ ಎಂಬುದನ್ನು ಅದು ಸ್ಪಷ್ಟಪಡಿಸುವುದು. ಪೂರ್ಣ ತಪಸ್ಸು ಮತ್ತು ನ್ಯಾಯನಿಷ್ಠೆ. ಪವಿತ್ರ ಅಗ್ನಿಯಂತೆ ಅವಳನ್ನು ಆವರಿಸಿ ಪ್ರಕಾಶಗೊಳಿಸುತ್ತಿದ್ದುವು. ಇತರರು ಅವಳನ್ನು ಪ್ರಚಂಡ ನೈತಿಕ ಮತ್ತು ಮಾನಸಿಕ ಶಕ್ತಿಯಂತೆ ನೋಡುತ್ತಿದ್ದರು. ಈ ಶಕ್ತಿಯ ಸಂಪತ್ತಿನೊಡನೆ ಯೋಗ್ಯ ಸಮಯದಲ್ಲಿ ಅವಳು ಭಾರತಕ್ಕೆ ಬಂದಳು. ಅವಳಲ್ಲಿದ್ದಂತಹ ಆತ್ಮಾರ್ಪಣೆಯನ್ನು ಇನ್ನೊಂದು ವ್ಯಕ್ತಿಯಲ್ಲಿ ನಾನೆಲ್ಲೂ ಕಂಡಿಲ್ಲ...''

ಡಾ.ಬೋಸ್ ದಂಪತಿಗಳ ಮತ್ತು ನಿವೇದಿತಾಳ ಸಂಬಂಧ ಮತ್ತು ಸಂಪರ್ಕ ಎಷ್ಟರಮಟ್ಟಿನದಾಗಿತ್ತೆಂದರೆ, ಡಾ.ಬೋಸ್ ತಮ್ಮ

ಉಯಿಲಿನಲ್ಲಿ ನಿವೇದಿತಾಳ ಸ್ಮಾರಕಾರ್ಥವಾಗಿ ಒಂದು ಲಕ್ಷ ರೂ.ಗಳನ್ನು ಕೊಡುಗೆಯಾಗಿ ಕೊಟ್ಟರೆ, ಅವರ ಪತ್ನಿ ಅಬಲಾ ಬೋಸ್ ಅವರು ನಿವೇದಿತಾಳ ಹೆಸರಿನಲ್ಲಿದ್ದ ಮಹಿಳಾ ಅಭಿವೃದ್ಧಿ ಸಂಸ್ಥೆಯಲ್ಲಿ ಒಂದು ಸಭಾಂಗಣ ಕಟ್ಟಿಸುವುದಕ್ಕೆ ಅದನ್ನು ವಿನಿಯೋಗಿಸಿದರು.

ನಿವೇದಿತಾಳ ಕಾರ್ಯವ್ಯಾಪ್ತಿ ಸಾಹಿತ್ಯವಲಯವನ್ನೂ ವ್ಯಾಪಿಸಿತ್ತು. ಅವಳ ಪ್ರಭಾವಕ್ಕೆ ಒಳಗಾಗಿದ್ದ ವ್ಯಕ್ತಿಗಳಲ್ಲಿ ರವೀಂದ್ರನಾಥ ಠಾಕೂರರೂ ಒಬ್ಬರು. ಎಷ್ಟರ ಮಟ್ಟಿಗೆ ಎಂದರೆ, ರವೀಂದ್ರರ 'ಗೋರಾ' ಕಾದಂಬರಿಗೆ ಆಕೆ ಸ್ಫೂರ್ತಿಯಾದಳು. ಅಲ್ಲಿ ಬರುವ ಗೋರಾನ ಪಾತ್ರಸೃಷ್ಟಿಗೆ ಅವಳೇ ಪ್ರೇರಣೆ. ರವೀಂದ್ರರ ಸಣ್ಣಕಥೆ 'ಕಾಬೂಲಿವಾಲಾ'ವನ್ನು ಇಂಗ್ಲಿಷ್‌ಗೆ ಭಾಷಾಂತರ ಮಾಡುವಷ್ಟು ಆಳವಾದ ಸಾಹಿತ್ಯಿಕ ಸಂಬಂಧ ಅವರೀರ್ವರದ್ದಾಗಿತ್ತು. ಇಷ್ಟಾದರು ಅವರ ನಡುವಣ ವೈಚಾರಿಕ ಸಂಬಂಧ ಅನ್ಯೋನ್ಯವಾಗಿಯೇನೂ ಇರಲಿಲ್ಲ. ಅದನ್ನು ಕುರಿತು ರವೀಂದ್ರರು ಹೀಗೆ ದಾಖಲಿಸುತ್ತಾರೆ. ''ನಮ್ಮಿಬ್ಬರ ನಡುವೆ ಭಾವಘರ್ಷಣೆಯುಂಟಾದಾಗ ನನ್ನ ಭಾವನೆಗಳು ಅವಳ ತೀಕ್ಷ್ಣ ಬುದ್ಧಿಯ ತೀವ್ರ ಹೊಡೆತಕ್ಕೆ ತುತ್ತಾಗುತ್ತಿದ್ದುವು ಎಂಬುದನ್ನು ಒಪ್ಪಿಕೊಳ್ಳಲು ನಾನು ಹಿಂಜರಿಯುವುದಿಲ್ಲ. ಈಗ ನನಗನಿಸುತ್ತದೆ, ಅವಳಿಂದ ನಾನು ಬೇರೆಲ್ಲರಿಗಿಂತಲೂ ಅಧಿಕವಾಗಿ ಪ್ರಯೋಜನ ಪಡೆದಿರುವೆ ಎಂದು. ಅವಳನ್ನು ನೆನೆಸಿಕೊಂಡರೆ ದೇಹದಲ್ಲಿ ಶಕ್ತಿ ಸಂಚಾರವಾಗುವುದು. ಅವಳೊಬ್ಬಳು ಹಿಂದುವೆಂದಲ್ಲ, ಅವಳ ಶ್ರೇಷ್ಠತೆಗಾಗಿ ಅವಳನ್ನು ಗೌರವಿಸಬೇಕು. ಅವಳು ನಮ್ಮಂತೆ ಇದ್ದಳೆಂದಲ್ಲ ನಮಗಿಂತಲೂ ಶ್ರೇಷ್ಠಳೆಂದು ಅವಳಿಗೆ ಮಾನ್ಯತೆ ನೀಡಬೇಕು.'' ರವೀಂದ್ರರ ದೃಷ್ಟಿಯಲ್ಲಿ ಆಕೆ 'ಲೋಕಮಾತಾ', ಮೋತಿಲಾಲ್ ಘೋಷ್ ಅವರ ದೃಷ್ಟಿಯಲ್ಲಿ 'ಶಕ್ತಿಯ ಪ್ರತಿಮೂರ್ತಿ', ಅವನೀಂದ್ರನಾಥರು ಆಕೆಯನ್ನು 'ಆದರ್ಶ ಸುಂದರಿ' ಎಂದು ಬಣ್ಣಿಸುತ್ತಾರೆ. ಬಿಪಿನ್ ಚಂದ್ರಪಾಲ್ ಅವರು 'ಅವಳು ಹುಟ್ಟು ಪತ್ರಿಕೋದ್ಯಮಿ' ಎಂದು ಕರೆದರೆ, ದಿನೇಶ ಸೇನರ ದೃಷ್ಟಿಯಲ್ಲಿ ಆಕೆ 'ನಿಷ್ಕಾಮ ಕರ್ಮಿ'.

ನಿವೇದಿತಾಳ ರಾಜಕೀಯ ಗುರು–ಬಿಪಿನ್ ಚಂದ್ರಪಾಲ್. ಇವರೀರ್ವರ ನಡುವೆ ವೈಚಾರಿಕ ಕದನ ಇದ್ದೇ ಇರುತ್ತಿತ್ತು. ಆದರೆ ಅದು ಪೂರ್ಣ ತಾತ್ತ್ವಿಕವಾದುದಾಗಿತ್ತು. ಪರಸ್ಪರ ಗೌರವಯುತವಾದುದಾಗಿತ್ತು. ನಿವೇದಿತಾಳನ್ನು ಕುರಿತು ಅವರು ಹೀಗೆ ಬರೆಯುತ್ತಾರೆ: ''ಯಾವ ಭಾರತೀಯನೂ ಕೂಡಾ ನಿವೇದಿತಾ ಭಾರತವನ್ನು ಪ್ರೀತಿಸುವಷ್ಟು ಪ್ರೀತಿಸಲಿಲ್ಲವೆಂದು ನನಗನ್ನಿಸುತ್ತದೆ. ಮಿಸೆಸ್ ಬುಲ್‌ಳ ಮನೆಯಲ್ಲಿ ನಾವಿಬ್ಬರೂ ವಿರೋಧಿಗುಂಪಿಗೆ ಸೇರಿದ್ದೆವು; ಆದರೆ ಈ ಧರ್ಮಸಮ್ಮೇಳನದಲ್ಲಿ ಒಂದೇ ಭಾರತೀಯ ವೇದಿಕೆಯ ಮೇಲೆ ನಿಂತಿದ್ದರಿಂದ ಪರಮ ಸ್ನೇಹಿತರಾದೆವು. ನಮ್ಮಿಬ್ಬರ ನಡುವೆ ಅನೇಕ ವಿಷಯಗಳಲ್ಲಿ ಭಿನ್ನಾಭಿಪ್ರಾಯವಿದ್ದರೂ ನಮ್ಮ ಸ್ನೇಹ ಬಾಂಧವ್ಯ ಮಾತ್ರ ಎಂದೂ ಮುರಿಯಲಿಲ್ಲ'' ಎಂದು ಪ್ರಶಂಸಿಸುತ್ತಾರೆ.

ನಿವೇದಿತಾಳಿಗೆ ಭಾರತದ ಮೇಲಿದ್ದ ಪ್ರೀತಿ, ಗೌರವ, ಭಕ್ತಿ ಅಪ್ರತಿಮವಾದುದಾಗಿತ್ತು. ಭಾರತೀಯರಲ್ಲಿಯೇ ಅದನ್ನು ಎಚ್ಚರಿಸುವ ಪ್ರಯತ್ನವನ್ನು ಆಕೆ ಮಾಡಿದಳು. ತಾನು ಆರಂಭಿಸಿದ ಶಾಲೆಯಲ್ಲಿ ಪಾಠ ಮಾಡುವಾಗ, ಚಿತ್ರ ಬಿಡಿಸುವ ಸಂದರ್ಭದಲ್ಲಿ ಭಾರತೀಯತ್ವವನ್ನು ಅಳವಡಿಸುವುದನ್ನು ಮರೆಯುತ್ತಿರಲಿಲ್ಲ. ಒಂದು ಸಂದರ್ಭದಲ್ಲಿ 'ವಂದೇಮಾತರಂ' ಗೀತೆಯನ್ನು ಹಾಡುವುದನ್ನು ಅಂದಿನ ಸರ್ಕಾರ ನಿಷೇಧಿಸಿತ್ತು. ಆದರೆ ನಿವೇದಿತಾ ಅದನ್ನೇ ಪ್ರತಿದಿನದ ಶಾಲೆಯ ಪ್ರಾರ್ಥನೆಯಲ್ಲಿ ಹಾಡಿಸುತ್ತಿದ್ದಳು. ಭಾರತದ ಬಗೆಗಿನ ಪ್ರೀತಿ ಅವಳಲ್ಲಿ ಅಸಾಧಾರಣವಾಗಿ ತುಂಬಿ ತುಳುಕುತ್ತಿತ್ತು.

ಬಂಗಾಳಿ ಲೇಖಕ ದಿನೇಶ್‌ಸೇನ್, ನಿವೇದಿತಾಳನ್ನು ಕುರಿತು ಹೀಗೆ ಬರೆದಿದ್ದಾರೆ : ''ನಾನು ಗೀತೆಯಲ್ಲಿ ನಿಷ್ಕಾಮಕರ್ಮದ ಬಗ್ಗೆ ಓದಿದ್ದೆ ಅಷ್ಟೆ, ಆದರೆ ಅವಳಂತೆ ನಿಷ್ಕಾಮಕರ್ಮ ಮಾಡುವವರನ್ನು ನೋಡುವ ಅವಕಾಶ ದೊರಕಿರಲಿಲ್ಲ. ನನ್ನ ದೃಷ್ಟಿಯಲ್ಲಿ ಅವಳು 'ಆದರ್ಶ ಕರ್ಮಯೋಗಿ.' ನಿವೇದಿತಾಳಿಗೆ ದಿನದ ಇಪ್ಪತ್ತನಾಲ್ಕು ಗಂಟೆ ಸಾಕಾಗುತ್ತಿರಲಿಲ್ಲ. ಅವಳ ಜ್ಞಾನದಾಹವೂ ಅಷ್ಟೇ ವ್ಯಾಪಕವಾದುದಾಗಿತ್ತು. ಯಾವ ಕ್ಷೇತ್ರವಾದರೂ ಅದರಲ್ಲಿ ಶ್ರದ್ಧೆ ಆಸಕ್ತಿ ತಾನಾಗಿಯೇ ಚಿಗುರೊಡೆಯುತ್ತಿತ್ತು. ಸಮಾಜಶಾಸ್ತ್ರ, ಅರ್ಥಶಾಸ್ತ್ರ ಕ್ಷೇತ್ರಗಳೂ ನಿವೇದಿತಾಳನ್ನು ಆಕರ್ಷಿಸಿದ್ದುವು. ಆದರೆ ಅವಳ ಕ್ರಾಂತಿಕಾರಕ ಆಲೋಚನೆಗಳನ್ನು ಕಾರ್ಯರೂಪಕ್ಕೆ ತರುವುದು ಕೆಲವೊಂದು ಬಾರಿ ಕಷ್ಟವಾಗುತ್ತಿತ್ತು. ಖ್ಯಾತ ಅರ್ಥಶಾಸ್ತ್ರಜ್ಞ ರಮೇಶ್ ಚಂದ್ರ ದತ್ತರಿಗೂ ನಿವೇದಿತಾಳಿಗೂ ಈ ವಿಷಯದಲ್ಲಿ ಸಾಕಷ್ಟು ಜಿಜ್ಞಾಸೆ ನಡೆದದ್ದುಂಟು. ಆದರೆ ನಿವೇದಿತಾ ತನ್ನ ತಾತ್ತ್ವಿಕ ನಿಲುವಿನಿಂದ ಎಂದೂ ದೂರ ಸರಿಯುತ್ತಿರಲಿಲ್ಲ – ಹಾಗೆಂದು ಅದೆಂದೂ ಪ್ರತಿಷ್ಠೆಯ ವಿಷಯವಾಗಿರುತ್ತಿರಲಿಲ್ಲ.

ನಿವೇದಿತಾಳ ವ್ಯಕ್ತಿತ್ವದ ಬಗ್ಗೆ ಮೋತಿಲಾಲ್ ಘೋಷ್ ಹೇಳುವುದು ಹೀಗೆ: ''ನಿವೇದಿತಾಳ ಉದಾತ್ತ ಗುಣಗಳಿಗಾಗಿ ಅವಳ ಮೇಲೆ ನನಗೆ ಪರಮೋಚ್ಚ ಗೌರವವಿದೆ. ಅವಳು ವಿಶ್ವಸೋದರಿ, ಅವಳ ಭ್ರಾತೃಪ್ರೇಮ ಬಾಘಬಜಾರಿನ ಅಥವಾ ಕಲಕತ್ತೆಯ ಅಥವಾ ಭಾರತದ ಜನರಿಗೆ ಮಾತ್ರ ಸೀಮಿತವಾಗಿರಲಿಲ್ಲ. ಅದು ಪ್ರಪಂಚವನ್ನೆ ವ್ಯಾಪಿಸಿತ್ತು... ಸ್ತ್ರೀಯರ ಮಧ್ಯೆ ಆಕೆ ರಾಣಿಗಿಂತಲೂ ಹೆಚ್ಚಿನವಳು... ಯಾವ ಐರೋಪ್ಯರೂ, ಗಂಡೇ ಆಗಲಿ ಹೆಣ್ಣೇ ಆಗಲಿ, ನಿವೇದಿತಾಳಷ್ಟು ತೀವ್ರವಾಗಿ, ಹೃತ್ಪೂರ್ವಕವಾಗಿ ಭಾರತವನ್ನು ಪ್ರೀತಿಸಲಿಲ್ಲ.''

ಇನ್ನಾವುದೇ ಕ್ಷೇತ್ರದಂತೆ ಕಲಾಕ್ಷೇತ್ರಕ್ಕೂ ನಿವೇದಿತಾಳ ಕೊಡುಗೆ ಅಪ್ರತಿಮವಾದುದಾಗಿದೆ. ಆಕೆ ಕಲಾವಿದೆ ಆಗಿರದಿದ್ದರೂ ಕಲಾ ವಿಮರ್ಶಕಿಯಾಗಿ, ಕಲೆಯ ಅಭಿಮಾನಿಯಾಗಿ ಅದನ್ನು ಪ್ರೋತ್ಸಾಹಿಸುವ ಕಾರ್ಯದಲ್ಲಿ ತೊಡಗಿದ್ದವಳು. ಪಾಶ್ಚಾತ್ಯ ಕಲೆಗೆ ಮಾರುಹೋಗಿ ಅದರತ್ತ ವಾಲಿದ್ದವರನ್ನು ಭಾರತೀಯ ಕಲೆಯತ್ತ ಸೆಳೆದ ಕೀರ್ತಿ ಆಕೆಯದ್ದು. ಭಾರತದ ರಾಷ್ಟ್ರೀಯ ಕಲೆಯ ಪುನರ್ಜನ್ಮವು ನನ್ನ ಪರಮ ಪ್ರೀತಿಯ ಕನಸು ಎಂಬ ಆಕೆಯ ಘೋಷಣೆ ಹೆಮ್ಮೆ ತರುವಂತಹುದು. ಕಲಾವಿದ ನಂದಲಾಲ್ ಆಕೆಯ ಕಲಾಭಿರುಚಿಯನ್ನು ಕುರಿತು ಹೀಗೆ ಅಭಿಪ್ರಾಯಪಟ್ಟಿದ್ದಾರೆ : ''ಅವಳ ಮನಸ್ಸಿನಲ್ಲಿ ಯಾವಾಗಲೂ ಭಾರತೀಯ ಕಲಾವಿದರ ಪ್ರಗತಿಯ

ಯೋಚನೆಯೆ. ನಾನು ಅವಳಿಂದ ಪಡೆದ ಉತ್ತೇಜನದ ಬಗ್ಗೆ ಹೇಳಿ ಮುಗಿಸಲಾರೆ. ಅವಳ ಸಾವಿನಿಂದ ಒಂದು ಮಾರ್ಗದರ್ಶಿ ದೇವತೆಯನ್ನು ಕಳೆದು ಕೊಂಡಂತಾಯಿತು. ನನಗೆ ರಾಮಕೃಷ್ಣರ ವಿವೇಕಾನಂದರ ಭಾವನೆಗಳು ಪರಿಚಯವಾದದ್ದು ನಿವೇದಿತಾಳಿಂದ.''

ಸೋದರಿ ನಿವೇದಿತಾ ಅಸಾಧಾರಣ ಪ್ರತಿಭೆ ಹಾಗೂ ವ್ಯಕ್ತಿತ್ವದ ಅಪೂರ್ವ ಮಹಿಳೆ. ಆಕೆಯ ಶ್ರದ್ಧೆ- ಆಸಕ್ತಿ ಒಂದೆರಡು ಕ್ಷೇತ್ರಗಳದ್ದಲ್ಲ, ಎಲ್ಲವೂ ತಲಸ್ಪರ್ಶಿಯಾದವುಗಳು. ಅದೊಂದು ಅದ್ಭುತ ಶಕ್ತಿ. ಆಕೆಯ ಪ್ರಭಾವಲಯಕ್ಕೆ ಬಾರದವರೇ ಅಪರೂಪ. ಅಂತಹ ಪ್ರಜ್ವಲ ಪ್ರತಿಭೆಯ, ಸೆಳೆತಕ್ಕೆ ಒಳಗಾದವರಲ್ಲಿ ಖ್ಯಾತ ತಮಿಳು ಕ್ರಾಂತಿಕಾರಿ ಕವಿ ಸುಬ್ರಹ್ಮಣ್ಯ ಭಾರತಿ ಅವರೂ ಒಬ್ಬರು. ನಿವೇದಿತಾ ಅವರನ್ನು ಮೊದಲು ಭೇಟಿಯಾದಾಗ ಅವರಿಗಿನ್ನೂ ಇಪ್ಪತ್ತಮೂರು ವರ್ಷ. ಅಲ್ಲಿನಡೆದ ಒಂದು ಪುಟ್ಟ ಸಂಭಾಷಣೆ ಸುಬ್ರಹ್ಮಣ್ಯ ಭಾರತಿ ಅವರ ಬದುಕಿನ ದಿಕ್ಕನ್ನೇ ಬದಲಾಯಿಸಿತು. ಅವರ ಆಲೋಚನಾ ರೀತಿಗೇ ಮೊನಚನ್ನು ತಂದುಕೊಟ್ಟಿತು. ಅವರನ್ನು ಉಗ್ರ ಕ್ರಾಂತಿಕಾರಿ ಯನ್ನಾಗಿ ಪರಿವರ್ತಿಸಲು ಕಾರಣವಾಯಿತು. ಆ ಘಟನೆಯ ಅನುಭವವನ್ನು ಸುಬ್ರಹ್ಮಣ್ಯ ಭಾರತಿಯವರು ಹಿಡಿದಿಟ್ಟಿರುವುದು ಹೀಗೆ: ''ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪ ತೋರಿಸಿ ಆತ್ಮಸಾಕ್ಷಾತ್ಕಾರವನ್ನು ಬೋಧಿಸಿದಂತೆಯೇ ನನಗೆ ಭಾರತ ಮಾತೆಯ ನಿಜರೂಪವನ್ನು ತೋರಿಸಿ ನನ್ನಲ್ಲಿ ದೇಶಭಕ್ತಿಯ ಕಿಚ್ಚನ್ನು ಜಾಗೃತಗೊಳಿಸಿದ ಗುರುವಿನ ಚರಣಗಳಿಗೆ ಈ ಪುಟ್ಟ ಪುಸ್ತಕವನ್ನು ಅರ್ಪಿಸುತ್ತೇನೆ... ಕ್ಷಣಾರ್ಧದಲ್ಲಿ ಒಂದೇ ಒಂದು ನೋಟದಿಂದ ನನಗೆ ಮಾತೃಭೂಮಿಯ ಸೇವಾದೀಕ್ಷೆ ನೀಡಿ ತ್ಯಾಗದ ಮಹಿಮೆಯನ್ನು ಬೋಧಿಸಿದ, ಭಗವಾನ್ ವಿವೇಕಾನಂದರ ಧರ್ಮಪುತ್ರಿ ನಿವೇದಿತಾ ದೇವಿಯವರಿಗೆ ಇದು ಸಮರ್ಪಿತ'' ಎಂದು ತಮ್ಮ ಕೃತಿಯನ್ನು ಅರ್ಪಿಸಿದ್ದಾರೆ. ಅವರ ಈ ಮಾತುಗಳು ಸೋದರಿ ನಿವೇದಿತಾ ಅವರ ಭಾರತೀಯತೆಯನ್ನು ಉಜ್ವಲವಾಗಿ ಮುಗಿಲಿನೆತ್ತರಕ್ಕೆ ಕೊಂಡೊಯ್ಯುತ್ತದೆ.

ಸೋದರಿ ನಿವೇದಿತಾ ಬದುಕಿದ್ದು ಕೇವಲ ನಲವತ್ತನಾಲ್ಕು ವರ್ಷ (೧೮೬೭-೧೯೧೧). ಸ್ವಾಮಿ ವಿವೇಕಾನಂದರಂತೆಯೇ ಆಕೆಯೂ ಅಲ್ಪಾಯುಷಿ. ಆದರೆ ಈ ಇಬ್ಬರ ಸಾಧನೆ, ಸಿದ್ಧಿ, ಪ್ರಭಾವ, ಪರಿಣಾಮ ಅಸಾಧಾರಣವಾದದ್ದು. ಎಣೆಯಿಲ್ಲದ್ದು. ಲೋಕಮಾನ್ಯವಾದದ್ದು. ಈ ಇಬ್ಬರ ನೂರ ಐವತ್ತನೆ ಜನ್ಮದಿನೋತ್ಸವ ಸಂದರ್ಭದಲ್ಲಿ ಅವರನ್ನು ಸ್ಮರಿಸುವುದು ಪುಣ್ಯಕಾರ್ಯ. ವಿದೇಶೀಯಳಾಗಿ ಬಂದು ದೇಶೀಯಳಾಗಿ ಭಾರತವನ್ನು ಯಾರಿಗಿಂತಲೂ ಕಡಿಮೆ ಇಲ್ಲದಂತೆ ಪ್ರೀತಿಸಿ ಸೇವೆಸಲ್ಲಿಸಿ, ಭಾರತೀಯರಿಗೆ ಸ್ಫೂರ್ತಿಯಾದದ್ದು ಒಂದು ಅಸಾಮಾನ್ಯ ಸಂಗತಿ.

ನಿವೇದಿತಾ ಇಹಲೋಕವನ್ನು ತ್ಯಜಿಸಿದಾಗ ಅವಳ ಇಚ್ಛೆಯಂತೆ ಹಿಂದೂ ಸಂಪ್ರದಾಯದ ಪ್ರಕಾರ ಅಂತ್ಯಕ್ರಿಯೆ ನಡೆಯಿತು. ಅವಳ ಸಮಾಧಿಯ ಮೇಲೆ ಬರೆದಿರುವ ಈ ವಾಕ್ಯ ಎಂದೆಂದಿಗೂ ಎಲ್ಲರಿಗೂ ಸ್ಫೂರ್ತಿದಾಯಕ:

> Here reposes Sister Nivedita who gave
> her all to India

(ಇಲ್ಲಿ ತನ್ನದೆಲ್ಲವನ್ನು ಭಾರತಕ್ಕೆ ಸಮರ್ಪಿಸಿದ ಸೋದರಿ ನಿವೇದಿತಾ ಶಾಂತಿಯಿಂದ ನಿದ್ರಿಸಿರುವರು).


*ಆಕರ ಗ್ರಂಥಗಳು :*

*೧. **ಸೋದರಿ ನಿವೇದಿತಾ** – ಸ್ವಾಮಿ ನಿತ್ಯಸ್ಥಾನಂದ*

*೨. **ನಿವೇದಿತಾ** – ಪ್ರಭುಶಂಕರ*

*೩. **ನಾ ಕಂಡಂತೆ ನನ್ನ ಗುರುದೇವ** – ಸೋದರಿ ನಿವೇದಿತಾ* ❖


## ನಿವೇದಿತಾಗೆ ಸ್ವಾಮೀಜಿ ತರಬೇತಿ

ನಿವೇದಿತಾ ತ್ಯಾಗಜೀವನಕ್ಕೆ ದೀಕ್ಷಿತಳಾದ ಮೇಲೆ ಅವಳನ್ನು ಸೇವಾಜೀವನಕ್ಕೆ ತರಬೇತು ಮಾಡಲು ಸ್ವಾಮೀಜಿ ಉದ್ಯುಕ್ತರಾದರು. ನಿವೇದಿತಾ, ಮಿಸೆಸ್ ಬುಲ್ ಮತ್ತು ಮಿಸ್ ಮ್ಯಾಕ್ಲಿಯಾಡ್ – ಈ ಮೂವರು, ಸ್ವಾಮೀಜಿಯವರೆಂದಂತೆ, 'ತ್ರಿಮೂರ್ತಿ'ಗಳು ವಾಸಿಸುತ್ತಿದ್ದ ಬೇಲೂರಿನ ಆ ಹಳೆಯ ಕಟ್ಟಡವೆ ತರಬೇತಿಯ ಕೇಂದ್ರವಾಯಿತು. ನಿವೇದಿತಾಳಿಗೆ ಆ ಮನೆಯೊಂದು ಸ್ವರ್ಗಪ್ರಾಯವಾಗಿತ್ತು. ''ಒಳಗಡೆ ಅಖಂಡ ಸಾಮರಸ್ಯ. ಹೊರಗಡೆ ಎಲ್ಲವೂ ಸುಂದರ. ಹಸಿರುಹುಲ್ಲಿನಿಂದಾವೃತವಾದ ಆ ವಿಶಾಲ ಭೂಮಿ, ಉನ್ನತ ತೆಂಗಿನ ಮರಗಳು, ಅರಣ್ಯದೊಳಗಿನ ಆ ಚಿಕ್ಕಚಿಕ್ಕ ಕಂದುಬಣ್ಣದ ಹಳ್ಳಿಗಳು, ಅನತಿ ದೂರದಲ್ಲಿಯೆ, ನಮಗೆ ಶಿವನ ಆಶೀರ್ವಾದವನ್ನು ತರುವುದಕ್ಕೊ ಎಂಬಂತೆ, ವೃಕ್ಷವೊಂದರ ಮೇಲ್ತುದಿಯಲ್ಲಿ ಗೂಡನ್ನು ಕಟ್ಟಿಕೊಂಡಿದ್ದ ಆ ನೀಲಕಂಠ ಪಕ್ಷಿ ಎಲ್ಲವೂ ರಮಣೀಯ. ಬೆಳಗಿನ ಹೊತ್ತು ನೆಳಲು ಮನೆಯ ಹಿಂಭಾಗದಲ್ಲಿ ಬೀಳುವುದು. ಆದರೆ ಅಪರಾಹ್ನದಲ್ಲಿ ಮನೆಯ ಮುಂದೆ ಕುಳಿತು ದೂರದಲ್ಲಿ ಕಾಣುವ ದಕ್ಷಿಣೇಶ್ವರದ ಪುಣ್ಯದರ್ಶನವನ್ನು ಪಡೆಯುತ್ತ ಆ ಮಹಾತಾಯಿ ಪಾವನಗಂಗೆಯ ಆಶೀರ್ವಾದವನ್ನು ಹೊತ್ತು ತರುವ ಪುಣ್ಯ ಸಮೀರವನ್ನು ಸೇವಿಸುತ್ತ ಗಂಗೆಯನ್ನು ಆರಾಧಿಸಬಹುದು. ಅಲ್ಲಿಯ ಇಡೀ ಪರಿಸರವೆ ಸುಂದರ; ಮತ್ತೆ ಒಬ್ಬ ಮಹಾಪುರುಷನ ಸಾನ್ನಿಧ್ಯವಿದ್ದರೆ ಆ ಮನೆಯೆ ತೀರ್ಥಸ್ಥಾನವಾಗಿ ಪರಿಣಮಿಸುತ್ತಿತ್ತು'' ಎಂದು ನಿವೇದಿತಾ ಬರೆಯುತ್ತಾಳೆ.

*(ಸೋದರಿ ನಿವೇದಿತಾ', ಪು. ೬೮)*



# ಭಾರತೀಯ ಸಂಸ್ಕೃತಿಯ ಪುನರುತ್ಥಾನಕ್ಕಾಗಿ ಹೋರಾಡಿದ ಪಾಶ್ಚಿಮಾತ್ಯ ಮಹಿಳೆ

ಸ್ವಾಮಿ ಮುಕ್ತಿದಾನಂದ

ಭಾರತದ ಶ್ರೇಷ್ಠ ಪರಂಪರೆಯ ಅನರ್ಘ್ಯ ರತ್ನಗಳನ್ನರಿತು ಅವುಗಳನ್ನು ಉಳಿಸಿ, ಬೆಳೆಸುವ ಹಾಗೂ ಜಗತ್ತಿನೆಲ್ಲೆಡೆ ಸಾರುವ ಕಾರ್ಯದಲ್ಲಿ ತೊಡಗಿಕೊಂಡ ಸೋದರಿ ನಿವೇದಿತಾ ನಿಜವಾದ ಅರ್ಥದಲ್ಲಿ ಭಾರತದ ವೀರವನಿತೆಯಾದಳು. ಈ ಕುರಿತು ವಿಶ್ಲೇಷಿಸಿರುವ ಪೂಜ್ಯ ಸ್ವಾಮೀಜಿಯವರು ಮುಂಬಯಿ ರಾಮಕೃಷ್ಣ ಮಠ ಹಾಗೂ ಮಿಷನ್ನಿನ ಅಧ್ಯಕ್ಷರು. ರಾಮಕೃಷ್ಣ ಮಹಾಸಂಘದ ವಿಶ್ವಸ್ತ ಮಂಡಲಿಯ ಸದಸ್ಯರಾಗಿರುವ ಅವರು ಉತ್ತಮ ಚಿಂತಕರೂ, ಪ್ರವಚನಕಾರರೂ, ಲೇಖಕರೂ ಆಗಿದ್ದಾರೆ.

**ಭಾ**ರತೀಯ ಸಂಸ್ಕೃತಿಯ ಸಾರಸರ್ವಸ್ವವನ್ನು ಅದರ ನೈಜತೆಯಲ್ಲಿ ಅರ್ಥೈಸಿಕೊಂಡ ಪಾಶ್ಚಿಮಾತ್ಯರಲ್ಲಿ ಸೋದರಿ ನಿವೇದಿತಾ ಅಗ್ರಗಣ್ಯಳು. ಆಧುನಿಕ ಯುಗದ ಸಮಕಾಲೀನ ಸಂದರ್ಭಗಳಲ್ಲಿಯೂ ಆಕೆ ಭಾರತೀಯ ಮಹಿಳೆಯರ ಮುಂದೆ ಆದರ್ಶ ವ್ಯಕ್ತಿಯಾಗಿ ನಿಲ್ಲಬಲ್ಲಳು. ಸೋದರಿ ನಿವೇದಿತಾಳ ಜೀವನ, ಸಂದೇಶ, ಭಾರತೀಯ ಸಂಸ್ಕೃತಿಯನ್ನು ಎತ್ತಿಹಿಡಿದು ಪುನಶ್ಚೇತನಗೊಳಿಸಲು ಅವಳು ಪಟ್ಟ ಪಾಡನ್ನು ವರ್ತಮಾನ ಭಾರತದ ಸಾಮಾಜಿಕ ಸಂದರ್ಭವನ್ನು ವಿಶ್ಲೇಷಿಸುವುದರ ಮೂಲಕ ಅರ್ಥಪೂರ್ಣವಾಗಿ ಅರಿಯಬಹುದು. ನಮ್ಮ ದೇಶದ ಕೆಲವು ವರ್ಗದ ಜನರಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯ ಅಂಧಾನುಕರಣೆಯನ್ನು ಆತಂಕಕಾರಿ ಎನಿಸುವ ಪ್ರಮಾಣದಲ್ಲಿ ಪ್ರಸಕ್ತ ಸನ್ನಿವೇಶದಲ್ಲಿ ಕಾಣಬಹುದಾಗಿದೆ. ಇತಿಹಾಸವನ್ನು ಅಧ್ಯಯನ ಮಾಡಿದಾಗ ಅದು ವರ್ತಮಾನದ ಜೀವನ ವಿಧಾನಗಳ ದಿಕ್ಸೂಚಿಯಾಗಿ, ಸಮಕಾಲೀನ ಸಮಸ್ಯೆಗಳಿಗೆ ಪರಿಹಾರವಾಗಿ ಒದಗಿ ಬರಬೇಕು. ಆಗಲೇ ಅಂತಹ ಅಧ್ಯಯನ ಸಫಲವಾಗುವುದು.

ಭಾರತೀಯ ಮನಸ್ಸಿನ ಮೇಲೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದ ಮುದ್ರೆಯು ತುಂಬಾ ಆಳವಾಗಿ ಬಿದ್ದಿದೆ. ದೇಶದ ಪ್ರಮುಖ ನಗರಗಳಲ್ಲಿ ಪಾಶ್ಚಾತ್ಯ ಜೀವನ ವಿಧಾನ ಮತ್ತು ಪಶ್ಚಿಮ ದೇಶಗಳಿಂದ ಬರುವ ಯಾವುದೇ ವಿಷಯ ಅಥವಾ ವಸ್ತುಗಳ ಬಗ್ಗೆ ಒಂದು ಬಗೆಯ ಹುಚ್ಚುಪ್ರೀತಿ, ವ್ಯಾಮೋಹಗಳಿರುವುದನ್ನು ಕಾಣಬಹುದು. ಯಾವ ವರ್ಗಗಳು ಆಧುನಿಕ ಶಿಕ್ಷಣ ಪಡೆದಿವೆಯೋ ಮತ್ತು ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಿರುವುವೋ, ಅಂತಹ ವರ್ಗಗಳಲ್ಲಿ 'ಭಾರತೀಯ' ಎನಿಸುವುದು ಏನಾದರೂ ಉಳಿದಿದೆಯೇ ಎಂಬ ಸಂಶಯ ಬರುತ್ತದೆ ನಗರಗಳಲ್ಲಿ. ನಾಗರಿಕ ಜೀವನದ ಕೆಲವೆಡೆ ನಮ್ಮ ಆಹಾರ ಪದ್ಧತಿ, ನಮ್ಮ ವಸ್ತ್ರಗಳು, ನಮ್ಮ ನೃತ್ಯ, ಸಂಗೀತ, ಹಾಡು, ಜೀವನಶೈಲಿ ಎಲ್ಲವೂ ನಮ್ಮ ಧರ್ಮ-ಸಂಸ್ಕೃತಿಗಳಿಂದ ಸಂಪೂರ್ಣ ವಿಚ್ಛೇದನಗೊಂಡು ಪಾಶ್ಚಿಮಾತ್ಯ ಜೀವನಶೈಲಿಯ ಗಾಢವಾದ ಪ್ರಭಾವಕ್ಕೆ ಒಳಗಾದಂತಿರುವುದು ಸ್ಪಷ್ಟ. ಅಂತಹ ಪ್ರದೇಶಗಳಲ್ಲಿ ಇದೇನು ಭಾರತವೋ ಅಥವಾ ಪಾಶ್ಚಾತ್ಯರ ಒಂದು ವಸಾಹತುವೋ ಎಂದು ಆಶ್ಚರ್ಯದಿಂದ ಹುಬ್ಬೇರಿಸುವಂತಾಗುತ್ತದೆ.

ನಾಗರಿಕತೆಗಳು ಪರಸ್ಪರ ಸಂಧಿಸುತ್ತವೆ ಮತ್ತು ಒಂದರೊಡನೊಂದು ಮಿಳಿತವಾಗುತ್ತವೆ ಎಂಬುದು ಐತಿಹಾಸಿಕ ಸತ್ಯ. ಜಪಾನ್, ಚೀನಾ, ಇಸ್ರೇಲ್ ಮುಂತಾದ ದೇಶಗಳಲ್ಲಿ ಆಧುನಿಕತೆ ಪ್ರವೇಶಿಸಿದ್ದರೂ ತಮ್ಮ ಮೂಲ ಸಂಸ್ಕೃತಿಯ ಬೇರುಗಳನ್ನು ಅವು ಉಳಿಸಿಕೊಂಡಿವೆ. ಆದರೆ ಭಾರತದ ಸನ್ನಿವೇಶವು ಆಘಾತಕಾರಿಯಾಗಿದೆ. ಭಾರತೀಯ ಸಂಸ್ಕೃತಿಯ ಸಾರವು ಆಧುನಿಕತೆಯ ಆರ್ಭಟ ಮತ್ತು ವಿಜೃಂಭಣೆಯಲ್ಲಿ ಎಲ್ಲೋ ಕಳೆದುಹೋಗಿದೆ ಎಂಬ ಭಾವನೆಯುಂಟಾಗುತ್ತದೆ. ಆಕ್ರಮಣಗಳ ನಂತರ ಆಕ್ರಮಣಗಳು,



ಸುದೀರ್ಘ ಕಾಲದ ಬ್ರಿಟಿಷರ ಪ್ರಭಾವಗಳ ತುಳಿತಕ್ಕೆ ಒಳಗಾದ ನಮ್ಮ ದೇಶದಲ್ಲಿ ನಮ್ಮ ನೈಜ ಅಸ್ಮಿತೆಯೇ ಕಳೆದುಹೋಗಿರುವುದನ್ನು ಅರ್ಥಮಾಡಿಕೊಳ್ಳಬಹುದು. ಆದರೆ 'ಭಾರತೀಯ' ಎನಿಸುವ ಯಾವುದೇ ಸಂಗತಿಯ ವಿರುದ್ಧ ಬಂಡೇಳುವ ಪ್ರವೃತ್ತಿಯು ನಮ್ಮ ಗ್ರಹಿಕೆಯನ್ನು ಮೀರಿದುದಾಗಿದೆ. ಭೌತಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಭಾರತದ ಮೇಲಿನ ಆಕ್ರಮಣವು ಇನ್ನೂ ಮುಂದುವರಿಯುತ್ತಿದೆ ಎಂಬ ಕಹಿಸತ್ಯವು ಇದರಿಂದ ಸ್ಪಷ್ಟವಾಗುತ್ತದೆ. ಈಗಲೂ ಶಿಕ್ಷಿತರು, ವಿದ್ಯಾವಂತರು ಎನಿಸಿಕೊಂಡ ಒಂದು ವರ್ಗದಲ್ಲಿ ಭಾರತೀಯ ಸಂಸ್ಕೃತಿಯ ಪ್ರಸ್ತಾಪವಾದರೆ ತಿರಸ್ಕಾರ, ತಾತ್ಸಾರಗಳ ಪ್ರತಿಕ್ರಿಯೆಯು ಹೊರಹೊಮ್ಮುತ್ತದೆ. ಪಾಶ್ಚಿಮಾತ್ಯ ಜೀವನ ವಿಧಾನವನ್ನು ಟೀಕಿಸುವುದು ಈ ಲೇಖನದ ಉದ್ದೇಶವಲ್ಲ; ಅವರ ಸಮಯಪ್ರಜ್ಞೆ, ವೈಜಾನಿಕ ಮನೋಭಾವ, ಶ್ರಮಸಂಸ್ಕೃತಿ, ಪೌರಪ್ರಜ್ಞೆ, ಸಂಘಟನಾ ಕೌಶಲ್ಯ, ಮತ್ತು ಸ್ವಚ್ಛತೆ ಮುಂತಾದ ಪೂರಕ ಅಂಶಗಳನ್ನು ನಾವು ಸ್ವಾಗತಿಸಲೇಬೇಕು. ಇದರಿಂದ ಒಂದು ಸಮತೋಲನವು ಭಾರತೀಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಮಿಲನದಿಂದ ಉಂಟಾಗುವುದು. ಅಂತಹ ಅಪೂರ್ವ ಸಂಗಮಸ್ಥಾನವನ್ನು ನಾವು ಸೋದರಿ ನಿವೇದಿತಾಳ ಜೀವನದಲ್ಲಿ ಸಂಧಿಸುತ್ತೇವೆ.

ನಿವೇದಿತಾ ಹುಟ್ಟಿ ಬೆಳೆದದ್ದು ಪಶ್ಚಿಮದಲ್ಲಿ; ತನ್ನನ್ನು ಸಮರ್ಪಿಸಿಕೊಂಡು ದುಡಿದಿದ್ದು ಭಾರತದಲ್ಲಿ. ಆಕೆಯ ಜೀವನ ಮತ್ತು ಸಾಧನೆಯಿಂದ ಭಾರತದಲ್ಲಿ ಸಮೃದ್ಧವಾದ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಂಪತ್ತಿದೆ ಎಂದೂ, ಅವುಗಳಲ್ಲಿ ಜನರಿಗೆ ಅಗತ್ಯವಾಗಿರು ಸಾರ್ವತ್ರಿಕ ಅಂಶಗಳಿವೆ ಎಂದೂ ತಿಳಿದುಬರುತ್ತದೆ. ಆದ್ದರಿಂದಲೇ **'ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ'**ಯ ಮುನ್ನುಡಿಯಲ್ಲಿ ಆಕೆ ವ್ಯಕ್ತಪಡಿಸುವ ಅಭಿಪ್ರಾಯವಿದು:

''ಇನ್ನು ಮುಂದೆ ಪವಿತ್ರ ಮತ್ತು ಲೌಕಿಕ ಎಂದು ಭೇದ ಮಾಡಲಾಗದು, ದುಡಿಯುವುದೆಂದರೆ ಪ್ರಾರ್ಥಿಸುವುದು, ಜಯಿಸುವುದೆಂದರೆ ತ್ಯಜಿಸುವುದು. ಜೀವನವೇ ಒಂದು ಧರ್ಮ.''

ಇಂದಿನ ಯುವಪೀಳಿಗೆಗೆ ನಮ್ಮ ಸಂಸ್ಕೃತಿ, ಪರಂಪರೆ, ಆಧ್ಯಾತ್ಮಿಕ ಮೂಲಗಳ ಬಗ್ಗೆ ಸಾಕಷ್ಟು ತಿಳಿದಿಲ್ಲದಿರುವುದು ದುರದೃಷ್ಟಕರ. ಇದು ಅವರ ತಪ್ಪು ಎನ್ನಲಾಗುವುದಿಲ್ಲ. ನಮ್ಮ ನಾಯಕರ ದೂರದರ್ಶಿತ್ವದ ಕೊರತೆ, ಅವರ ಪೋಷಕರ ಅವಜ್ಞೆ ಮತ್ತು ಸೀಮಿತವಾದ ಶಿಕ್ಷಣ ವ್ಯವಸ್ಥೆಗಳು ತಮ್ಮ ಶ್ರೀಮಂತ ಸಂಸ್ಕೃತಿಯ ಮೂಲ ಮತ್ತು ಮಹತ್ವವನ್ನು ಜನರಿಗೆ ಮನಗಾಣಿಸುವಲ್ಲಿ ವಿಫಲವಾಗಿವೆ. ಈಗ ನಮ್ಮ ನಾಯಕರು ಮತ್ತು ನಮ್ಮ ಯುವಜನತೆ ಮನಗಾಣಬೇಕಾದ ವಿಚಾರವೆಂದರೆ ಪಾಶ್ಚಾತ್ಯ ಜಗತ್ತು ಭಾರತದ ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಸಂಪತ್ತಿನ ಕಡೆಗೆ ಕುತೂಹಲದಿಂದ ನೋಡಲಾರಂಭಿಸಿದೆ ಎಂಬುದು. ನಿದರ್ಶನವಾಗಿ ಭಾರತೀಯ ಮೂಲದ ಯೋಗ ವಿಜ್ಞಾನಕ್ಕೆ ವಿಶ್ವದೆಲ್ಲೆಡೆ ದೊರೆತಿರುವ ಪ್ರೋತ್ಸಾಹ ಮತ್ತು ಸ್ವಾಗತ. ಆದ್ದರಿಂದ ನಮ್ಮ ನೆಲದ ಮೇಲೆ ನಮ್ಮ ಸಂಸ್ಕೃತಿಯನ್ನೇ ತಿರಸ್ಕಾರ ಭಾವದಿಂದ ಕಾಣುವುದು ಜಗತ್ತಿಗೆ ಒಂದು ದೊಡ್ಡ ನಷ್ಟವಾಗಿ ಪರಿಣಮಿಸುವುದು. ಈ ವಾಸ್ತವವನ್ನು ಚೆನ್ನಾಗಿ ಅರಿತ ಸೋದರಿ ನಿವೇದಿತಾ ಕ್ಷೀಣದೆಸೆಗೆ ಬಂದು ಶಿಥಿಲವಾಗುತ್ತಿದ್ದ ಭಾರತೀಯ ಸಂಸ್ಕೃತಿಯ ಪುನರುತ್ಥಾನಕ್ಕಾಗಿ ಶ್ರಮಿಸಿದಳು.

### ಸ್ವಾಮಿ ವಿವೇಕಾನಂದರಿಂದ ಸೋದರಿ ನಿವೇದಿತಾ ಪಡೆದ ಶಿಕ್ಷಣ ಮತ್ತು ತರಬೇತಿಯ ವಿಶಿಷ್ಟತೆ

ಭಾರತೀಯ ಸಂಸ್ಕೃತಿಯ ಪುರುಜ್ಜೀವನಕ್ಕಾಗಿ ಕಾರ್ಯೋನ್ಮುಖಳಾಗುವ ಮುನ್ನ ನಿವೇದಿತಾ ಸ್ವಾಮಿ ವಿವೇಕಾನಂದರಿಂದ ಸ್ಫೂರ್ತಿ ಪಡೆದಳು. ಹಿಂದೂ ಧರ್ಮಕ್ಕೆ ಒಂದು ಸ್ಪಷ್ಟ ಅಸ್ಮಿತೆಯನ್ನು ನೀಡಿದ ಸ್ವಾಮೀಜಿ ನಿವೇದಿತಾಳ ವ್ಯಕ್ತಿತ್ವವನ್ನು ಕಡೆದು ರೂಪಿಸಿದರು. ಭಾರತೀಯರಿಗೆ ಪಾಶ್ಚಿಮಾತ್ಯವಾದುದ್ದೆಲ್ಲವೂ ಆರಾಧ್ಯವೆನಿಸಿದ ಸಂದರ್ಭದಲ್ಲಿ ಆಕೆ ಸ್ವಾಮೀಜಿಯವರ ಜ್ಞಾನಪ್ರಸಾರದಿಂದ ಪ್ರಭಾವಿತಳಾದಳು.

ನಿವೇದಿತಾಳ ಮೂಲ ಹೆಸರು ಮಾರ್ಗರೆಟ್ ಎಲಿಜಬೆತ್ ನೋಬಲ್. ಆಕೆ ಐರ್ಲೆಂಡಿನಲ್ಲಿ ೧೮೬೭ರಲ್ಲಿ ಜನಿಸಿದಳು. ಸತ್ಯಾನ್ವೇಷಕಿಯಾಗಿದ್ದ ಒಂದು ಕಠಿಣವಾಗಿದ್ದ ತನ್ನ ಜೀವನದ ಕಾಲಘಟ್ಟದಲ್ಲಿ ಆಕೆ ಸ್ವಾಮೀಜಿಯವರನ್ನು ಮೊದಲ ಬಾರಿಗೆ ಭೇಟಿ ಮಾಡಿದಳು. ಆಕೆಯೇ ಹೇಳುವಂತೆ, ''ನಾನು ದುಃಖದುಮ್ಮಾನಗಳಿಗೆ ಈಡಾಗಿದ್ದರೂ, ಸತ್ಯಾನ್ವೇಷಣೆಗೆ ಉತ್ಸುಕಳಾಗಿರುವೆ.'' ನೀರಡಿಕೆಯಂತೆ ನಶಿಸಿ ಹೋಗಬಹುದಾದ ಜೀವಕ್ಕೆ ತಂಪಾದ ಜೀವಜಲವು ದೊರೆತಂತೆ ಅವಳಿಗೆ ಸ್ವಾಮೀಜಿಯ ಮಾತುಗಳಿಂದ ಸಾಂತ್ವನ ದೊರಕಿತು. ಅಲ್ಲಿಂದಾಚೆಗೆ ಅವರನ್ನು ಅವಳು 'ಗುರುದೇವ' ಎಂದೇ ಸಂಭೋಧಿಸಲಾರಂಭಿಸಿದಳು. ಸತ್ಯಕ್ಕಾಗಿ ಮತ್ತು ಭಾರತಕ್ಕಾಗಿ ತನ್ನನ್ನು ಸಮರ್ಪಿಸಿಕೊಳ್ಳಲು ಸಿದ್ಧವೆಂದು ಅವಳು ಸ್ವಾಮೀಜಿಗೆ ತಿಳಿಸಿದಳು. ಈ ಮಾರ್ಗರೆಟ್ ನೋಬಲ್‌ಳ ಸಮರ್ಪಣಾ ವ್ಯಕ್ತಿತ್ವದಲ್ಲಿ ಭವ್ಯಭಾರತದ ಉಜ್ವಲ ಭವಿಷ್ಯವು ಇಣುಕುತ್ತಿರುವುದನ್ನು ಸ್ವಾಮೀಜಿ ಕಂಡು ಕೊಂಡರು. ಅವರು ಆಕೆಗೆ ಹೀಗೆ ಪತ್ರ ಬರೆದರು:

''ಭಾರತದ ಸೇವೆಯಲ್ಲಿ ನಿನ್ನ ಜೀವನದ ಭವಿಷ್ಯವಿದೆ ಎಂದು ನಾನು ನಂಬಿರುವೆ ಎಂದು ಸ್ಪಷ್ಟ ಹೇಳುತ್ತೇನೆ. ಇಲ್ಲಿಗೆ ನಿಜವಾಗಿ ಬೇಕಾಗಿದ್ದು ಒಬ್ಬ ಪುರುಷನಲ್ಲ, ಒಬ್ಬ ಸ್ತ್ರೀ; ಭಾರತೀಯರಿಗಾಗಿ, ಇಲ್ಲಿನ ಮಹಿಳೆಯರಿಗಾಗಿ ಕೆಲಸ ಮಾಡಲು ಒಬ್ಬ ನಿಜವಾದ ಸಿಂಹಿಣಿ ಬೇಕು. ಸದ್ಯದ ಪರಿಸ್ಥಿತಿಯಲ್ಲಿ ಮಹಾಮಹಿಳೆಯರನ್ನು ಭಾರತವು ಕೊಡಲು ಸಾಧ್ಯವಾಗಿಲ್ಲ; ಅವರನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳಬೇಕಾಗಿದೆ. ನಿನ್ನಲ್ಲಿರುವ ಶಿಕ್ಷಣ, ಪ್ರಾಮಾಣಿಕತೆ, ಪರಿಶುದ್ಧತೆ, ಅಪಾರಪ್ರೇಮ, ದೃಢನಿರ್ಧಾರ ಮತ್ತು ಎಲ್ಲಕ್ಕೂ ಮಿಗಿಲಾಗಿ ನಿನ್ನ ಕೆಲ್ಟಿಕ್ ರಕ್ತವು ನಿನ್ನನ್ನು ಈ ಕಾರ್ಯಕ್ಕೆ ಅಗತ್ಯವಾಗಿರುವ ಸೂಕ್ತ ವ್ಯಕ್ತಿಯನ್ನಾಗಿಸಿದೆ.'' *(CW., 7:511)*

ಆದರೆ ಮಾಡಬೇಕಾದ ಮಹತ್ಕಾರ್ಯದ ಬಗ್ಗೆ ಮತ್ತು ಅದಕ್ಕೆ ಅತ್ಯಗತ್ಯವಾದ ಮಹಾತ್ಯಾಗದ ಬಗ್ಗೆ ಸ್ವಾಮೀಜಿ ಆಕೆಗೆ ಎಚ್ಚರಿಕೆಯನ್ನೂ ನೀಡಿದರು. ಆದರೆ ಸತ್ಯಾನ್ವೇಷಕರಿಗೆ ಯಾವ ತ್ಯಾಗವೂ ತುಂಬಾ ದೊಡ್ಡದೆನಿಸುವುದಿಲ್ಲ. ದೃಢವಾದ ನಿರ್ಧಾರ ಮತ್ತು ಅಚಲವಾದ ಶ್ರದ್ಧೆಯಿಂದ ಹೆಜ್ಜೆ ಮುಂದಿಟ್ಟಳು ನಿವೇದಿತಾ.

ಇಂಗ್ಲೆಂಡನ್ನು ತೊರೆದು ೧೮೯೮ರಲ್ಲಿ ಭಾರತಕ್ಕೆ ಬಂದು ಸ್ವಾಮೀಜಿಯವರ ಪಾದಕ್ಕೆರಗಿದಳು. ಸ್ವಾಮೀಜಿ ಅವಳಿಗೆ ಬ್ರಹ್ಮಚರ್ಯ ದೀಕ್ಷೆ ನೀಡಿ, ಹಿಂದೂ ಧರ್ಮವನ್ನು ಪರಿಪೂರ್ಣವಾಗಿ ಅನುಸರಿಸುವಂತೆ ಹೇಳಿದರು ಮತ್ತು ಮರುನಾಮಕರಣ ಮಾಡಿದರು. ಆಗ ಅವರು ಹೇಳಿದ್ದು:

''ನಿನ್ನ ಚಿಂತನೆ, ಅಗತ್ಯಗಳು, ಪರಿಕಲ್ಪನೆಗಳು, ಅಭ್ಯಾಸಗಳು ಎಲ್ಲವೂ ಭಾರತೀಯವಾಗಲಿ. ನಿನ್ನ ಜೀವನದ ಅಂತರಂಗ ಮತ್ತು ಬಹಿರಂಗಗಳು ಒಬ್ಬ ಸಾಂಪ್ರದಾಯಿಕ ಹಿಂದೂ ಬ್ರಹ್ಮಚಾರಿಣಿಯ ಜೀವನದಂತೆಯೇ ಇರಲಿ. ಆದರೆ ನೀನು ನಿನ್ನ ಭೂತಕಾಲವನ್ನು ಮರೆಯಲೇಬೇಕು ಮತ್ತು ಅದು ಮರೆತುಹೋಗುವಂತೆ ಮಾಡಬೇಕು. ಅದರ ಕಿಂಚಿತ್ ಸ್ಮೃತಿಯೂ ನಿನ್ನ ಮನಸ್ಸಿನಿಂದ ಮರೆಯಾಗಿ ಹೋಗಲಿ.''

ಪಾಶ್ಚಿಮಾತ್ಯ ಸಂಸ್ಕೃತಿ ಮತ್ತು ನಾಗರೀಕತೆಗಳಲ್ಲಿ ಬೇರು ಬಿಟ್ಟಿದ್ದ ಒಬ್ಬ ಪ್ರತಿಭಾನ್ವಿತ ಮಹಿಳೆಯನ್ನು ಆಮೂಲಾಗ್ರವಾಗಿ ಪರಿವರ್ತಿಸಿ ಭಾರತೀಯ ಸಂಸ್ಕೃತಿಯ ಬೇರನ್ನು ಅರಿತು, ಅರಗಿಸಿಕೊಂಡು ಆರಾಧಿಸುವಂತೆ ಸ್ವಾಮೀಜಿ ಅವಳನ್ನು ಸಿದ್ಧಗೊಳಿಸಿದರು. ಆಕೆ ಕೂಡಾ ಅವಳ ಪಾಲಿನ ಅಗ್ನಿಪರೀಕ್ಷೆಯನ್ನು ಎದುರಿಸಲೇ ಬೇಕಾಯಿತು. ವಿರಕ್ತ ಸಂನ್ಯಾಸ ಜೀವನದ ತಪೋಜೀವನಕ್ಕೆ ಅಣಿಯಾದಳು ನಿವೇದಿತಾ. ಈ ರೂಪಾಂತರವು ಒಂದು ಸಾಹಸ! ಧೀರ ಹೃದಯವಿದ್ದ ಸೋದರಿ ನಿವೇದಿತಾಳು ಮಾತ್ರ ಇಂಥ ಕಠಿಣ ಪರೀಕ್ಷೆಯನ್ನು ಮುಗುಳ್ನಗುತ್ತಾ ಎದುರಿಸಬಲ್ಲವಳಾಗಿದ್ದಳು. ಸ್ವಾಮೀಜಿ ತ್ಯಾಗದ ಉನ್ನತ ಆದರ್ಶವನ್ನು ಅವಳ ಮುಂದೆ ಹೀಗೆ ಎತ್ತಿ ಹಿಡಿದರು: ''ಹಿಂದೆ ತ್ಯಾಗವೇ ಧರ್ಮವಾಗಿತ್ತು. ದಿಟವಾಗಿಯೂ ಮುಂಬರುವ ಯುಗಗಳಲ್ಲಿಯೂ ತ್ಯಾಗವೇ ನಿಜವಾದ ಧರ್ಮ.'' ತನ್ನ ಗುರುದೇವನು ತನ್ನ ಮುಂದಿಟ್ಟ ಧ್ಯೇಯವನ್ನು ನಿವೇದಿತಾ ಹೃತ್ಪೂರ್ವಕವಾಗಿ ಸ್ವೀಕರಿಸಿದಳು.

ಪಾಶ್ಚಿಮಾತ್ಯ ರಾಷ್ಟ್ರಗಳ ವಕ್ಷಸ್ಥಳದಲ್ಲಿ ಸಂಗ್ರಹಗೊಂಡಿದ್ದ ಅಗಾಧ ಶಕ್ತಿಯನ್ನು ಭಾರತೀಯ ಜೀವನದಲ್ಲಿ ತುಂಬಿಹೋಗಿದ್ದ ಯುಗಯುಗಗಳ ನಿದ್ರೆ ಮತ್ತು ಜಡತೆಯನ್ನು ತುಂಡರಿಸಲು ಬಿಡುಗಡೆ ಮಾಡಬೇಕಾದ ಅಗತ್ಯವಿತ್ತು. ಛಿದ್ರವಾಗಿ ಚದುರಿಹೋಗಿದ್ದ ಭಾರತದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳನ್ನು ಸ್ವಾತಂತ್ರ್ಯಪಥದಲ್ಲಿ ಮುಂದೆ ಕೊಂಡೊಯ್ಯಬೇಕಾಗಿತ್ತು. ಭಾರತದ ಸೇವೆಗಾಗಿ ಸೋದರಿ ನಿವೇದಿತಾಗೆ ದೀಕ್ಷೆಯನ್ನು ಅನುಗ್ರಹಿಸಿದ ಸ್ವಾಮೀಜಿ, ಅವಳ ಮನದಾಳದಲ್ಲಿ ನೆಟ್ಟಿದ್ದು ಈ ಕಾಣ್ಕೆಯನ್ನೇ. ತನ್ಮೂಲಕ ಭಾರತೀಯ ಸಂಸ್ಕೃತಿಯ ಪುನರುಜ್ಜೀವನ ಎಂಬ ಮಹತ್ಕಾರ್ಯದ ಆರಂಭಕ್ಕಾಗಿ ಸ್ವಾಮೀಜಿ ಒಂದು ಹೊಸ ಶಕ್ತಿಯನ್ನೇ ಚಾಲನೆಗೆ ತಂದರು.

ಆಳುವ ಜನಾಂಗಕ್ಕೆ ಸೇರಿದ ಆಕೆ ದಾಸ್ಯದಲ್ಲಿದ್ದ ಭಾರತೀಯರ ಸೇವೆಯನ್ನು ಮಾಡಲು ಸಿದ್ಧಳಾದಳೆ? ಈ ಸಾಧನೆಯು ಅವಳ ವ್ಯಕ್ತಿತ್ವದ ಸಂಪೂರ್ಣ ಪರಿವರ್ತನೆಯನ್ನು ಬೇಡುತ್ತದೆ. ಈ ಅಗತ್ಯವನ್ನು ಚೆನ್ನಾಗಿ ಅರಿತಿದ್ದ ಸ್ವಾಮೀಜಿಯವರು ಅವಳಿಗೆ ತಕ್ಕ ತರಬೇತಿ ನೀಡಲು ತಾವೇ ಮುಂದಾದರು. ಶಿಷ್ಯಳಾಗಿ ತಯಾರಾಗುತ್ತಿದ್ದ ನಿವೇದಿತಾಗೆ ಈ ಅವಧಿಯಲ್ಲಿ ಒಂದು ಹೊಸ ಜೀವನ ದರ್ಶನವೇ ಪ್ರಾಪ್ತವಾಯಿತು. ವಿವೇಕಾನಂದ ಎಂಬ ಸಾಗರದಲ್ಲಿ ತನ್ಮೂಲಕ ಭರತವರ್ಷದಲ್ಲಿ, ತನ್ನನ್ನು ಸಂಪೂರ್ಣವಾಗಿ ಮುಳುಗಿಸಿಕೊಂಡಳು ನಿವೇದಿತಾ. ಅವಳ ವಿಶಾಲ ದೃಷ್ಟಿಕೋನ, ಧೈರ್ಯ, ಕುತೂಹಲ, ಶಿಸ್ತು ಮತ್ತು ಉತ್ಸಾಹ ಅನುಪಮವಾಗಿದ್ದವು. ಅವಳಲ್ಲಿ ಭಾರತೀಯ ಸಂಸ್ಕೃತಿಯ ಹಿರಿಮೆಯನ್ನು ಕುರಿತು ಮೂಡಿದ ಒಳನೋಟ ಮತ್ತು ಭಾರತೀಯರ ಪ್ರಶಾಂತ ಸ್ವಭಾವವು ಭಾರತದ ಸೇವೆಗೆ ತನ್ನನ್ನು ಮುಡಿಪಾಗಿಡುವಂತೆ ಪ್ರೇರಿಸಿದವು.

### ಸೋದರಿ ನಿವೇದಿತಾಳ ಭಾರತದ ಮೇಲಿನ ಅಗಾಧಪ್ರೇಮ

ನಿವೇದಿತಾ ಭಾರತವನ್ನು ತನ್ನ ಹೃದಯಾಂತರಾಳದಿಂದ ಪ್ರೀತಿಸಿದಳು. ಆಕೆ ಭಾರತೀಯರೊಡನೆ ಒಂದಾಗಿ ಬೆರೆತಳು. ಈ ದೇಶದಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಉದ್ದೀಪಿಸಲು ಆಕೆ ದೃಢ ಸಂಕಲ್ಪಭರಿತಳಾಗಿದ್ದಳು. ಈ ಅಸೀಮ ಭಾರತಪ್ರೇಮವು ಅವಳಿಗೆ ಅವಳ ಗುರುದೇವನಿಂದ ಬಂದ ಬಳುವಳಿಯಾಗಿತ್ತು. ಭಾರತೀಯ ಸಂಸ್ಕೃತಿಯನ್ನು ಕುರಿತಂತೆ ಆಕೆಯು ಬರೆದಿರುವ ಪುಸ್ತಕಗಳಲ್ಲಿ ಅವಳ ಆತ್ಮಚೈತನ್ಯದ ಮಾಧುರ್ಯವನ್ನೂ ಮತ್ತು ತನ್ನ ಹೋರಾಟದ ಮಾರ್ಗದಲ್ಲಿ ಆಕೆಗಿದ್ದ ವಿಶ್ವಾಸ, ನಂಬುಗೆಗಳನ್ನೂ ನಾವು ಕಾಣಬಹುದು. ಭಾರತೀಯರು ಆಕೆಯನ್ನು ಒಬ್ಬ ಪ್ರಬುದ್ಧ ಹಿರಿಯಳಾಗಿ ಮತ್ತು ನಾಯಕಿಯಾಗಿ ಗುರುತಿಸಿ ಗೌರವಿಸಿದರು. ತನ್ನ ಪಾವಿತ್ರ್ಯ, ಪರಿಶುದ್ಧ ಚಾರಿತ್ರ್ಯ, ಕಷ್ಟನಷ್ಟಗಳ ನಡುವೆ ಅವಳು ಬಾಳಿದ ವೈರಾಗ್ಯದ ಜೀವನ, ಒಂದು ಶಕ್ತಿಪೂರ್ಣ ಉಪಕರಣವಾಗಲು ಅವಳು ಅಂಧಕಾರ ಶಕ್ತಿಗಳ ವಿರುದ್ಧ ಹೋರಾಡಿ ಪಡೆದ ವಿಜಯ – ಈ ಎಲ್ಲಾ ಅಂಶಗಳೂ ಅವಳನ್ನು ಒಬ್ಬ ಧೀರೋದಾತ್ತ ನಾಯಕಿಯನ್ನಾಗಿ ಮಾಡಿವೆ. ತನ್ನ ಅದ್ಭುತ ಮೇಧಾಶಕ್ತಿ ಮತ್ತು ಚಾರಿತ್ರ್ಯಗಳಿಂದ ಅನೇಕರ ಚಿಂತಕರ ಮೇಲೆ ಅವಳು ಆಳವಾದ ಪ್ರಭಾವವನ್ನು ಬೀರಿದಳು.

ಅವಳ ಜೀವನ ಮತ್ತು ಕೃತಿಗಳ ಅಧ್ಯಯನದಿಂದ ರಚನಾತ್ಮಕ ಧನಾತ್ಮಕ, ವೈಜ್ಞಾನಿಕ ಮತ್ತು ಉನ್ನತ ಆಯಾಮಗಳಿಂದ ಭಾರತೀಯ ಸಂಸ್ಕೃತಿಯನ್ನು ಅರಿಯಬಹುದು. ವಿವೇಕಪೂರ್ಣವೂ, ವೈಜ್ಞಾನಿಕ ದೃಷ್ಟಿಕೋನವೂ ಆಗಿ ಸಂವೇದನಾಶೀಲವಾಗಿರುವ ಪ್ರಾಯೋಗಿಕ ಮತ್ತು ಪ್ರಗತಿಶೀಲವಾಗಿರುವ ಮನಸ್ಸು ಮಾತ್ರವೇ ಭಾರತೀಯ ಸಂಸ್ಕೃತಿಯ ಅಮೂಲ್ಯ ಅಂಶಗಳನ್ನು ಗ್ರಹಿಸಬಲ್ಲದು. ಆ ವಿವೇಕ ಬುದ್ಧಿಯು, ಧಾನ್ಯವನ್ನು ಹೊಟ್ಟಿನಿಂದ ಬೇರ್ಪಡಿಸುವಂತೆ, ಅಗತ್ಯವಾದ ಸಾರವನ್ನು ಅನಗತ್ಯವಾದ ಜೊಳ್ಳಿನಿಂದ ಪ್ರತ್ಯೇಕಿಸಬಲ್ಲದು; ಮನುಕುಲದ ಉತ್ತಮಭವಿಷ್ಯಕ್ಕಾಗಿ ತನ್ನ ಕಾಣಿಕೆಯನ್ನು ನೀಡಬಲ್ಲದು. ಭಾರತದ ಇತಿಹಾಸದಲ್ಲಿ ನಿವೇದಿತಾಳ ಪ್ರವೇಶವು ಭಾರತೀಯ ಮೇಧಾಶಕ್ತಿಸಂಪನ್ನ ಪ್ರತಿಭೆಯನ್ನು ಉದ್ದೀಪಿಸುವ ಒಂದು ಮಹಾಸ್ಫೂರ್ತಿಯನ್ನು ಪ್ರತಿನಿಧಿಸಿ, ತ್ಯಾಗ–ರಾಷ್ಟ್ರಪ್ರೇಮಗಳೆಂಬ ಉಜ್ವಲ ಧ್ಯೇಯಗಳನ್ನು ನಮ್ಮ ಮುಂದಿಡುತ್ತದೆ.

### ಸೋದರಿ ನಿವೇದಿತಾಳ ಕೃತಿಗಳು ಮತ್ತು ನಮ್ಮ ರಾಷ್ಟ್ರನಾಯಕರ ಮೇಲೆ ಆಕೆಯ ಪ್ರಭಾವ

ಭಾರತೀಯ ಸಂಸ್ಕೃತಿಯ ಆಶೋತ್ತರಗಳೊಡನೆ ನಿವೇದಿತಾ ತಾದಾತ್ಮ್ಯ ಹೊಂದಿದ್ದಳು. ಆಕೆಯ ಕೃತಿಗಳಾದ ಹಿಂದುಸ್ತಾನದ ತೊಟ್ಟಿಲ ಕಥೆಗಳು, (Cradle Tales of Hinduism) ಭಾರತದ ಇತಿಹಾಸದ ಹೆಜ್ಜೆಗುರುತುಗಳು (Footfalls of Indian History) ಮತ್ತು ವಿಶೇಷವಾಗಿ 'ಕಾಳಿಮಾತಾ' ಮುಂತಾದವು ನಮ್ಮ ಸಂಸ್ಕೃತಿಯ ಔಚಿತ್ಯ ಮತ್ತು ಪ್ರಾಮುಖ್ಯತೆಯನ್ನು ನಿಚ್ಚಳವಾಗಿ ತಿಳಿಯಪಡಿಸುತ್ತವೆ. ಭಾರತೀಯ ಚಿಂತನೆ ಮತ್ತು ಸಂಸ್ಕೃತಿಯನ್ನು ಕುರಿತಂತೆ ದೇಶವಿದೇಶಗಳಲ್ಲಿ ಹಬ್ಬಿರುವ ಅಪಪ್ರಚಾರ ಮತ್ತು ತಪ್ಪುತಿಳುವಳಿಕೆಯ ವಿರುದ್ಧ ನಿಂತು ಸ್ಪಷ್ಟವಾಗಿ ವಿಚಾರಗಳನ್ನು ಅವಳ ಕೃತಿಗಳು ಮೂಡಿಸುತ್ತವೆ.

ಅವಳ ಅಗಾಧವಾದ ತ್ಯಾಗ ಮತ್ತು ಆಳವಾದ ಸಮರ್ಪಣಾ ಭಾವಗಳಿಗೆ ಭಾರತವು ಪ್ರತಿಯಾಗಿ ಏನನ್ನಾದರೂ ನೀಡುವುದು ನಿಜವಾಗಿಯೂ ಅಸಾಧ್ಯ. ಆಧುನಿಕ ಯುವ ಜನತೆ ಅದರಲ್ಲೂ ವಿಶೇಷವಾಗಿ ತರುಣಿಯರಿಗೆ ಸೋದರಿ ನಿವೇದಿತಾಳ ೧೫೦ ನೇ ಜನ್ಮೋತ್ಸವದ ಈ ಸಂದರ್ಭದಲ್ಲಿ ಅವಳ ಕೃತಿಗಳನ್ನೂ, ಆದರ್ಶವನ್ನೂ ಪರಿಚಯಿಸಿ ಆಪ್ತವಾಗಿಸುವ ಕೆಲಸ ತುರ್ತಾಗಿ ಆಗಬೇಕಾಗಿದೆ. ಪೂರ್ವ-ಪಶ್ಚಿಮಗಳ ಶ್ರೇಷ್ಠ ಮೌಲ್ಯಗಳ ಸಂಗಮವಾದ ಆಕೆಯ ಜೀವಂತ ನಿದರ್ಶನವನ್ನು ಭಾರತೀಯ ಮಹಿಳೆಯರಿಗಾಗಿ ಮತ್ತು ಸ್ತ್ರೀಸಬಲೀಕರಣದ ಯಶಸ್ಸಿಗಾಗಿ ಆಧುನಿಕ ಸಂದರ್ಭದಲ್ಲಿ ಬಳಸಬೇಕಾಗಿದೆ.

ನೇತಾಜಿ ಸುಭಾಷ್‌ಚಂದ್ರ ಬೋಸ್ ಆಕೆಯನ್ನು ಕುರಿತು ಹೇಳುವ ಮಾತಿದು: ''ವಿವೇಕಾನಂದರನ್ನು ಅಧ್ಯಯನ ಮಾಡಿ ನಾನು ಭಾರತವನ್ನು ಪ್ರೀತಿಸಲು ಕಲಿತೆ, ಮತ್ತು ನಿವೇದಿತಾಳ ಕೃತಿಗಳಮೂಲಕವಿವೇಕಾನಂದರನ್ನುನಿಜವಾಗಿಅರ್ಥಮಾಡಿಕೊಂಡೆ.''

ಗುರುದೇವ ರವೀಂದ್ರನಾಥ ಠಾಗೋರ್ ಬರೆಯುತ್ತಾರೆ: ''ಜನಸಾಮಾನ್ಯರ ಸೇವೆಗಾಗಿ ಹೃದಯವನ್ನೇ ಸಮರ್ಪಿಸುವುದು ಅದೆಷ್ಟು ಶ್ರೇಷ್ಠವಾದುದೆಂದು ನಿವೇದಿತಾಳಿಂದ ನಾವು ಅರಿತೆವು.''

ತತ್ತ್ವಜ್ಞಾನಿಯೂ, ವಿಜ್ಞಾನಿಯೂ ಆಗಿದ್ದ ಡಾ. ಜಗದೀಶ್ ಚಂದ್ರ ಬೋಸರನ್ನು ನಿವೇದಿತಾ ಪ್ರೋತ್ಸಾಹಿಸಿ ವೈಜ್ಞಾನಿಕ ಸಂಶೋಧನೆಯಲ್ಲಿ ತೊಡಗುವಂತೆ ಮಾಡಿ, ಆರ್ಥಿಕ ನೆರವನ್ನೂ ಸಹಾ ನೀಡಿದಳು. ಬ್ರಿಟಿಷ್ ಸರ್ಕಾರ ಇಂತಹ ಸಂಶೋಧನೆಗಳನ್ನು ಕುರಿತು ತಟಸ್ಥವಾಗಿದ್ದ ಸಂದರ್ಭದಲ್ಲಿ, ಬೋಸರ ಕಾರ್ಯಗಳೆಡೆಗೆ ಅದರ ಗಮನ ಸೆಳೆದು ಅವರಿಗೆ ಮಾನ್ಯತೆ ಸಿಗುವಂತೆ ಮಾಡಿದಳು. ಆಕೆಯ ಸಹಾಯವನ್ನು ಕುರಿತಂತೆ ರವೀಂದ್ರನಾಥ ಠಾಗೋರ್ ಹೇಳುತ್ತಾರೆ: ''ತನ್ನ ಯಶಸ್ಸಿನ ದಿನಗಳಲ್ಲಿ, ಜಗದೀಶ್ ಒಬ್ಬ ಶಕ್ತಿವಂತ ಸಹಾಯಕಿಯನ್ನು ಸೋದರಿ ನಿವೇದಿತಾಳಾಗಿ ಪಡೆದನು. ಆತನ ಬದುಕಿನ ಘಟನೆಗಳನ್ನು ದಾಖಲಿಸುವಾಗ ಆಕೆಗೆ ಒಂದು ಪ್ರಧಾನವಾದ ಗೌರವಾನ್ವಿತ ಸ್ಥಾನವನ್ನು ನೀಡಬೇಕು.'' ಜೆಮ್‌ಶೆಡ್‌ಜೀ ಟಾಟಾರವರು ಬೆಂಗಳೂರಿನಲ್ಲಿ ಭಾರತೀಯ ವಿಜ್ಞಾನ ಸಂಸ್ಥೆ (IISc) ಯನ್ನು ಸ್ಥಾಪಿಸುವಲ್ಲಿ ಮತ್ತು ಈ ಸಂಸ್ಥೆಗೆ ಬ್ರಿಟಿಷ್ ಸರ್ಕಾರದ ಮಾನ್ಯತೆಯು ದೊರಕಲು ನಿವೇದಿತಾ ಸಕ್ರಿಯವಾಗಿ ನೆರವಾದಳು.

ರಾಷ್ಟ್ರಪ್ರಜ್ಞೆಯನ್ನು ಜಾಗೃತಗೊಳಿಸಲು ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡಲು ಅರವಿಂದ ಘೋಷರು ಸ್ಥಾಪಿಸಿದ್ದ ರಾಜಕೀಯ ಸಮಿತಿಯ ಐದು ಜನ ಸದಸ್ಯರಲ್ಲಿ ಒಬ್ಬಳಾಗಿದ್ದಳು ನಿವೇದಿತಾ. ಅವನೀಂದ್ರನಾಥ ಠಾಗೋರ್, ಆನಂದ ಕುಮಾರಸ್ವಾಮಿ ಮತ್ತು ಹ್ಯಾವೆಲ್‌ರಂತಹಾ ಕಲಾವಿದರನ್ನು ಸಂಪರ್ಕಿಸಿದ ನಿವೇದಿತಾ ಭಾರತೀಯ ಕಲಾವಿಭಾಗದ ಶುದ್ಧ ಸಂಪ್ರದಾಯವನ್ನು ಮುಂದುವರೆಸುವಂತೆ ಸ್ಫೂರ್ತಿ ನೀಡಿದಳು. ನಂದಲಾಲ್ ಬೋಸ್, ಅಸಿತ್‌ಕುಮಾರ್ ಹಾಲ್ದಾರ್, ಸುರೇಂದ್ರನಾಥ ಗಂಗೋಪಾಧ್ಯಾಯ ಮುಂತಾದ ಕಲ್ಕತ್ತಾದ ಕಲಾಶಾಲೆಯ ಪ್ರತಿಭಾನ್ವಿತರಿಗೆ ಪುರಾತನ ಭಾರತೀಯ ಕಲೆಗಳ ಪುನರುಜ್ಜೀವನಕ್ಕಾಗಿ ಶ್ರಮಿಸುವಂತೆ ಮಾರ್ಗದರ್ಶನ ಮಾಡಿದಳು. ತಮಿಳುನಾಡಿನ ಹೆಸರಾಂತ ಕವಿ ಸುಬ್ರಹ್ಮಣ್ಯ ಭಾರತಿಯ ಮೇಲೆ ಆಕೆ ಆಳವಾದ ಪ್ರಭಾವ ಬೀರಿದಳು. ಭಾರತೀಯ ಸ್ತ್ರೀಯರ ವಿಮೋಚನೆಗಾಗಿ ದುಡಿಯುವಂತೆ ಸುಬ್ರಹ್ಮಣ್ಯ ಭಾರತಿಯನ್ನು ಅವಳು ಪ್ರೇರೇಪಿಸಿದಳು. ಆ ಧ್ಯೇಯಕ್ಕಾಗಿ ಇಡೀ ಜೀವನ ಹೋರಾಡಿದರು ಆ ಕವಿ.

### ರಾಷ್ಟ್ರಪ್ರಜ್ಞೆಯ ಉದ್ದೀಪಕಳಾಗಿ ಸೋದರಿ ನಿವೇದಿತಾ

''ಭಾರತದಲ್ಲಿ ಯಾವ ಬಗೆಯ ಕಾರ್ಯವನ್ನು ಮಾಡುವಿರಿ?'' ಎಂದು ಒಬ್ಬರು ನಿವೇದಿತಾಳನ್ನು ಕೇಳಿದರಂತೆ. ಅದಕ್ಕೆ ಆಕೆ ನೀಡಿದ ಉತ್ತರದಲ್ಲಿ ಅವಳ ಬಾಳಿನ ರಹಸ್ಯವೇ ಅಡಗಿರುವಂತಿದೆ:

''ನನ್ನ ಜೀವನವನ್ನು ನಾನು ಭಾರತಕ್ಕೆ ಸಮರ್ಪಿಸಿದ್ದೇನೆ. ಅವಳಿಗಾಗಿ ಬಾಳುತ್ತೇನೆ, ಅವಳಿಗಾಗಿ ಮಡಿಯುತ್ತೇನೆ. ಭರತವರ್ಷವು ಅಖಂಡವಾಗಿ ಒಂದೆಂದು ನನ್ನ ಪರಮ ವಿಶ್ವಾಸ. ರಾಷ್ಟ್ರೀಯ ಐಕ್ಯತೆಯನ್ನು ಸರ್ವರ ಒಳಿತು ಮತ್ತು ಪ್ರೇಮದ ಆಧಾರದಲ್ಲಿ ನಿರ್ಮಿಸಬೇಕು.

''ವೇದೋಪನಿಷತ್ತುಗಳಲ್ಲಿ ಅಭಿವ್ಯಕ್ತವಾಗಿರುವ, ಧರ್ಮ ಮತ್ತು ಸಾಮ್ರಾಜ್ಯಗಳನ್ನು ನಿರ್ಮಿಸಿದ, ವಿದ್ವಾಂಸರ ವಿದ್ವತ್ತು ಮತ್ತು ಸಂತರ ಧ್ಯಾನದಲ್ಲಿ ಸುಪ್ತವಾಗಿರುವ ಮಹಾಶಕ್ತಿಯೇ ಮರಳಿ ಈಗ ನಮ್ಮ ನಡುವೆ ಪ್ರಕಾಶಗೊಳ್ಳುತ್ತಿದೆ. ಇಂದು ಅದರ ಹೆಸರು ರಾಷ್ಟ್ರೀಯತೆ ಎಂಬುದಾಗಿ.''

ಭಾರತದ ವರ್ತಮಾನವು ಅವಳ ಭೂತಕಾಲದ ಹಿರಿಮೆಯಲ್ಲಿ ಪ್ರತಿಷ್ಠವಾಗಿದೆಯೆಂದೂ ಅವಳಿಗಾಗಿ ಉಜ್ವಲ ಭವಿಷ್ಯವು ಕಾಯುತ್ತಿದೆ ಎಂಬುದು ನಿವೇದಿತಾಳ ನಂಬುಗೆಯಾಗಿತ್ತು. ಭಾರತ ಮತ್ತು ಭಾರತೀಯರನ್ನು ಕುರಿತು ಮಾತನಾಡುವಾಗ ಆಕೆ, 'ನಮ್ಮ' ದೇಶ,'ನಮ್ಮ' ಜನ ಎನ್ನುತ್ತಿದ್ದಳು. ಬ್ರಿಟಿಷರನ್ನು ಕುರಿತು ಮಾತನಾಡುವಾಗ 'ಆ' ದೇಶ, 'ಆ' ಜನ ಎನ್ನುತ್ತಿದ್ದಳು. ಶ್ರೀಮಾತೆ ಶಾರದಾದೇವಿಯವರು ಹೇಳುತ್ತಾರೆ: ''ನಿವೇದಿತಾ ಈ ನಾಡಿಗೆ

ಸೇರಿದವಳು. ಶ್ರೀರಾಮಕೃಷ್ಣರ ಚಿಂತನೆ ಮತ್ತು ಸಂದೇಶಗಳನ್ನು ಪ್ರಚುರಪಡಿಸಲು ಅಲ್ಲಿ (ಪಶ್ಚಿಮದಲ್ಲಿ) ಜನ್ಮ ತಳೆದಳು.''

ಸ್ವಾಮೀಜಿಯವರು ನಿವೇದಿತಾಳಲ್ಲಿ ಮಾತೃಹೃದಯ ಮತ್ತು ಧೀರ ಸಂಕಲ್ಪವು ಸಮ್ಮಿಳಿತವಾಗಿರುವುದನ್ನು ಕಂಡು ತುಂಬು ಹೃದಯದಿಂದ ಹರಸುತ್ತಾರೆ. ಭಾರತದ ಭವಿಷ್ಯದ ಮಗನಿಗೆ ನಿವೇದಿತಾಳು ಸೇವಕಿಯೂ, ಸ್ನೇಹಿತೆಯೂ ಆಗುವಂತೆ ಭವಿತವ್ಯವನ್ನು ನುಡಿಯುತ್ತಾರೆ.

### ಸೋದರಿ ನಿವೇದಿತಾಳನ್ನು ಭಾರತೀಯರಾದ ನಾವು ಮರೆಯಬಹುದೆ?

ಭಾರತೀಯ ಸಂಸ್ಕೃತಿಯ ವಾರಸುದಾರರಾಗಿ ನಾವು ನಿವೇದಿತಾಳು ಭಾರತಕ್ಕಾಗಿ ಮಾಡಿದ ಸೇವೆ ಮತ್ತು ನೀಡಿದ ಕೊಡುಗೆಗಳನ್ನು ಗುರುತಿಸಲು ವಿಫಲರಾದರೆ ನಮ್ಮ ಕರ್ತವ್ಯದಲ್ಲಿ ಲೋಪವಾಗುವುದು. ಭಾರತವನ್ನು ಜಾಗೃತಗೊಳಿಸುವುದೇ ನನ್ನ ಪ್ರಮುಖ ಕಾರ್ಯ ಎಂದು ಆಕೆ ಒಮ್ಮೆ ಹೇಳಿದ್ದಳು. ಅವಳ ಹೆಣ್ಣುಮಕ್ಕಳ ಶಾಲೆಯಲ್ಲಿ ಪ್ರಾರ್ಥನೆಯಾಗಿ 'ವಂದೇಮಾತರಂ' ಗೀತೆಯನ್ನು ಪರಿಚಯಿಸಿದಳು. ೧೯೦೬ರಲ್ಲಿ ಆಕೆ ನಮ್ಮ ರಾಷ್ಟ್ರಧ್ವಜದ ಮಾದರಿಯನ್ನು ಪೂರ್ವಭಾವಿಯಾಗಿ ಸಿದ್ಧಪಡಿಸಿದ್ದಳು. ಅದರ ಕೇಂದ್ರಸ್ಥಾನದಲ್ಲಿ ವಜ್ರದ ಚಿತ್ರವಿತ್ತು. ಹಿಂದೂಧರ್ಮ ಮತ್ತು ಬೌದ್ಧಧರ್ಮದಲ್ಲಿ ಈ ಸಾಂಕೇತಿಕತೆಯ ಮಹತ್ವವನ್ನು ಕುರಿತು ಆಕೆ ದೀರ್ಘವಾದ ವಿವರಣೆಯನ್ನು ಬರೆದಿದ್ದಳು. ಆಕೆಗೆ ವಜ್ರಾಯುಧದ ಸಂಕೇತದಲ್ಲಿ ಒಲವಿತ್ತು. ಅದು ದಧೀಚಿ ಮುನಿಯ ತ್ಯಾಗ ಮತ್ತು ಆತ್ಮಶಕ್ತಿಯ ಸಂಕೇತವಾಗಿತ್ತು. ಸ್ವಾಮಿ ವಿವೇಕಾನಂದರ ಕೈಯಲ್ಲಿ ಅವಳೇ ಒಂದು ವಜ್ರಾಯುಧವಾಗಿ ಮಾರ್ಪಟ್ಟಳು. ಅವಿರತವಾಗಿ ನಮ್ಮ ನಾಡಿಗಾಗಿ ದುಡಿದ ಅವಳು ೪೪ ವರ್ಷ ವಯಸ್ಸಾದಾಗಲೇ ದೇಹ ಬಿಟ್ಟು ಭಾರತದ ಆತ್ಮದಲ್ಲಿ ಒಂದಾದಳು. ರಾಷ್ಟ್ರದ ಮಹಾತ್ಕಾರ್ಯದಲ್ಲಿ ನಿಃಸ್ವಾರ್ಥ ಪುರುಷನು ಒಂದು ವಜ್ರಾಯುಧದಂತೆ ಎಂದು ಆಕೆ ಭಾವಿಸಿದ್ದಳು. ಆ ನಿಃಸ್ವಾರ್ಥತೆಯೇ ಇಂದು ರಾಷ್ಟ್ರದ ವಿಮೋಚನೆಗಾಗಿ ಹೋರಾಡುವವರಲ್ಲಿ ಬೆಳೆಯಬೇಕಾಗಿದೆ ಎಂದು ಸಾರಿದಳು.

ನಮ್ಮ ದೇಶದ ಇತಿಹಾಸದ ಪ್ರಸ್ತುತ ಸಂದರ್ಭದಲ್ಲಿ ಭಾರತೀಯರು ಆತ್ಮಖಂಡನೆಯಲ್ಲಿ ತೊಡಗಿದ್ದಾರೆ. ಇಂತಹ ಉಜ್ವಲ ಸಂಸ್ಕೃತಿಯ ಮಹಿಮೆಯನ್ನು ನಾವು ತಿಳಿಯದಿದ್ದರೆ ನಮ್ಮ ಪ್ರಗತಿಯು ಕುಂಠಿತವಾಗುತ್ತದೆ ಎಂದು ನಾವು ಅರಿಯಬೇಕಾಗಿದೆ. ಈ ಸನ್ನಿವೇಶದಲ್ಲಿ ನಿವೇದಿತಾಳ ಜೀವನ ಮತ್ತು ವ್ಯಕ್ತಿತ್ವದ ಮಹತ್ಕಾರ್ಯಗಳು ನಮ್ಮನ್ನು ಅಜ್ಞಾನದ ನಿದ್ದೆಯಿಂದ ಬಡಿದೆಚ್ಚರಿಸಲಿ. ಒಮ್ಮೆ ಹಾಲು ಮಾರುವ ಒಬ್ಬ ಶ್ರೀಸಾಮಾನ್ಯ ನಿವೇದಿತಾಳಿಂದ ಧರ್ಮವೆಂದರೇನು ಎಂದು ತಿಳಿಯಲು ಅಪೇಕ್ಷಿಸಿದನು. ಆಗ ಆಕೆ ಹೇಳಿದಳು: ''ನೀವು ಪ್ರಭು ಶ್ರೀಕೃಷ್ಣನ ವಂಶಕ್ಕೆ ಸೇರಿದವರು. ನಾನು ನಿಮಗೆ ನಮಸ್ಕರಿಸುತ್ತೇನೆ. ನನ್ನಿಂದ ಕಲಿಯುವಂತಹದು ನಿಮಗೆ ಏನು ತಾನೇ ಇದೆ?'' ಕವಿ ರವೀಂದ್ರರು ಹೇಳುವಂತೆ, ''ನಾವು ಅವಳನ್ನು ಗೌರವಿಸಬೇಕಾಗಿರುವುದು ಅವಳು **ಹಿಂದು** ಎಂಬುದಕ್ಕಾಗಿ ಅಲ್ಲ, ಆಕೆ ಒಬ್ಬ ಶ್ರೇಷ್ಠ ವ್ಯಕ್ತಿ ಎಂಬ ಕಾರಣಕ್ಕಾಗಿ.'' ಅವರು ಆಕೆಯನ್ನು '**ಲೋಕಮಾತಾ**' ಎಂದು ಸಂಬೋಧಿಸಿ ಗೌರವಿಸಿದರು. ಅರವಿಂದ ಘೋಷರು ನಿವೇದಿತಾಳನ್ನು '**ಅಗ್ನಿಶಿಖಾ**' ಎಂದು ಕರೆದರು. ಭಾರತೀಯರಿಗೆ ನಿಜವಾಗಿಯೂ ಅವಳು ಆತ್ಮೀಯ 'ಸೋದರಿ', ಸ್ವಾಮಿ ವಿವೇಕಾನಂದ ನಮಗೆ ಕೊಟ್ಟ ವಿಶಿಷ್ಟ ಉಡುಗೊರೆ.

ಸನಾತನ ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯನ್ನು ಸೋದರಿ ನಿವೇದಿತಾ ಸ್ವಯಂ ತಾನೇ ಕಂಡುಕೊಂಡು ದಾಖಲಿಸಿದ ಮಾತುಗಳಿಂದ ಈ ಲೇಖನವನ್ನು ಮುಕ್ತಾಯಗೊಳಿಸಬಹುದು. ಇದರಿಂದ ಈ ಸನಾತನ ಧರ್ಮದ ನಿಜವಾದ ಮಹಿಮೆ ಮತ್ತು ಅಂತಃಸತ್ವವು ಸ್ಫುಟವಾಗಿ ತಿಳಿಯುತ್ತದೆ:

''ನಿರಂತರವಾಗಿ ಬೆಳೆಯುತ್ತಿರದಿದ್ದರೆ, ತನ್ನನ್ನು ತಾನು ವಿಸ್ತರಿಸಿಕೊಳ್ಳುತ್ತಿರದಿದ್ದರೆ, ನೂತನ ಅನುಭವದ ಕ್ಷೇತ್ರಗಳನ್ನು ತನ್ನದಾಗಿ ಜೀರ್ಣಿಸಿಕೊಳ್ಳದಿದ್ದರೆ, ಹಿಂದೂಧರ್ಮವು ಶಾಶ್ವತ ಸನಾತನ ಧರ್ಮವಾಗಿ ಉಳಿಯುವುದು ಸಾಧ್ಯವೇ ಆಗುತ್ತಿರಲಿಲ್ಲ. ತನ್ನನ್ನು ತಾನು ನವೀಕರಿಸಿಕೊಳ್ಳುತ್ತಾ ಜಗತ್ತಿಗೆ ಹೊಂದಿಕೊಳ್ಳುವ ಶಕ್ತಿಯನ್ನು ಈ ಧರ್ಮವು ಉಳಿದೆಲ್ಲಾ ಧರ್ಮಗಳಿಗಿಂತ ಹಲವು ಪಟ್ಟು ಅಧಿಕವಾಗಿ ಪಡೆದಿದೆ. ಈ ಕಾರಣದಿಂದಾಗಿಯೇ ಇದೊಂದು ಚಿರಂತನ ಶ್ರದ್ಧೆಯಾಗಿದೆ.'' ❖

## ನಿವೇದಿತಾಳ ಕಾಳೀದರ್ಶನ

ಸ್ವಾಮೀಜಿ 'Kali the Mother ' ಪದ್ಯವನ್ನು ಬರೆದಾದ ಮೇಲೆ ಸ್ವಲ್ಪ ಹೊತ್ತು ಭಾವಸಮಾಧಿಯಲ್ಲಿದ್ದು, ಅನಂತರ ಪ್ರಕೃತಿಸ್ಥರಾದ ಮೇಲೆ ಸ್ವಾಮೀಜಿ ನಿವೇದಿತಾಳನ್ನು ಕುರಿತು ಹೇಳಿದರು: ''ಕರಾಳರೂಪಿ ಕಾಳಿಯನ್ನು ಅರ್ಚಿಸು. ಸರ್ವಶಕ್ತಿಮಯಿ ಅವಳು. ಅವಳು ಕಲ್ಲಿನಿಂದಲೇ ಶತ್ರುನಾಶಕನಾದ ಮಹಾವೀರನನ್ನು ಸೃಷ್ಟಿಸಬಲ್ಲಳು.'' ಅನಂತರ ಅವರು ಕ್ಷೀರಭವಾನಿಗೆ ಹೊರಟುಹೋದ ಮೇಲೆ ಗುರುವಿನ ಮಾರ್ಗದರ್ಶನದಂತೆ ಗಾಢಧ್ಯಾನದಲ್ಲಿ ಮುಳುಗಿದ್ದಾಗ ಅವಳಿಗೆ ಕಾಳಿಯ ದಿವ್ಯದರ್ಶನವಾಯಿತು. 'ಮಹಾಕಾಳಿಯ ಕಡುಕಪ್ಪು ಬಣ್ಣದ ಉದ್ದವಾದ ಕೆದರಿದ ಕೂದಲು ಅವಳ ಹಿಂದೆ ಚಂಡಮಾರುತದಂತೆ, ಕಾಲದ ಅಥವಾ ಘಟನಾವಳಿಯ ಅಜಸ್ರ ಸ್ರೋತದಂತೆ ಹಾರಾಡುತ್ತಿದೆ. ಒಂದು ಬೃಹದಾಕಾರದ ನೆರಳಿನಂತೆ ಅವಳ ಅಂಗವು ಕಡುಕಪ್ಪು. ಜೀವನಮೃತ್ಯುವಿನ ನಗ್ನಸತ್ಯದ ಪ್ರತೀಕ ಅವಳು. ಅದರಿಂದಲೇ ಅವಳು ದಿಗಂಬರಳು. ಈ ರುದ್ರ ಭಯಂಕರ ದೃಶ್ಯವನ್ನು ಕಣ್ಣು ಮಿಟುಕಿಸದೆ ನೋಡಿದಳು ಮತ್ತು ಧ್ಯಾನದಲ್ಲಿ ಮಹಾಕಾಳಿಯ ತತ್ತ್ವವನ್ನು ಹೃದ್ಗತಮಾಡಿಕೊಂಡು 'ಮಾ' ಎಂದು ಉದ್ಗರಿಸಿದಳು.' *(ಸೋದರಿ ನಿವೇದಿತಾ', ಪು. ೯೪)*



# ‘ನಿವೇದಿತಾ’

**ಸೇವಂತಿ ಡಿ. ರೈ**

ವಿಭಿನ್ನ ಪರಿಸರದಲ್ಲಿ, ಸಂಪೂರ್ಣ ಭಿನ್ನ ಸಂಸ್ಕೃತಿಯಲ್ಲಿ ಹುಟ್ಟಿ ಬೆಳೆದ ಮಹಿಳೆಯೊಬ್ಬಳು ಬಡತನ, ಅನಕ್ಷರತೆ, ಅಸಮಾನತೆಯೇ ಮೊದಲಾದ ಅನೇಕ ಸಮಸ್ಯೆಗಳ ಆಗರವಾಗಿದ್ದ ಭಾರತಕ್ಕೆ ತನ್ನನ್ನು ತಾನು ಸಮರ್ಪಿಸಿಕೊಂಡಳು. ಇದು ಹೇಗೆ ಸಾಧ್ಯವಾಯಿತು? ಇದಕ್ಕೆ ಉತ್ತರವನ್ನು ಹುಡುಕುವ ಯತ್ನವನ್ನು ಮಾಡಿರುವ ಲೇಖಕಿ ನಿವೃತ್ತ ಉಪನ್ಯಾಸಕಿ ಹಾಗೂ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.

‘**ನಿ**ವೇದಿತಾ’ ಎಂಬ ಪದವನ್ನು ಮಾರ್ಗರೆಟ್ ನೋಬೆಲ್ ಅನೇಕ ಬಾರಿ ಉಚ್ಚರಿಸಿದಳು. ಆ ದಿನ ಶುಕ್ರವಾರ, ೧೮೯೮ರ ಮಾರ್ಚ್ ೨೫ನೇ ತಾರೀಖು. ಸ್ವಾಮಿ ವಿವೇಕಾನಂದರು ಮಾರ್ಗರೆಟಳಿಗೆ ಬ್ರಹ್ಮಚರ್ಯ ದೀಕ್ಷೆಯನ್ನಿತ್ತು ‘**ನಿವೇದಿತಾ**’ ಎಂದು ಹೆಸರಿಸಿದರು. ತನ್ನನ್ನು ತಾನು ಭಗವಂತನಿಗೆ ಅರ್ಪಿಸಿಕೊಂಡವಳು ಎಂದು ಸಂತೋಷದಿಂದ ಮಾರ್ಗರೆಟ್ ‘ನಿವೇದಿತಾ’ ಎಂಬ ಹೆಸರನ್ನು ಮತ್ತೆ ಮತ್ತೆ ಪಠಿಸಿ ಯೋಚಿಸತೊಡಗಿದಳು. ತನ್ನ ದೇಶವೆಂದು ಸ್ವೀಕರಿಸಿದ ಇಂಡಿಯಾ ದೇಶಕ್ಕೆ ತನ್ನನ್ನು ಅರ್ಪಿಸುತ್ತೇನೆ; ಎಲ್ಲರ ಹೃದಯ ದಲ್ಲಿರುವ ಪರಮಾತ್ಮನಿಗೆ ಅರ್ಪಿಸುತ್ತೇನೆ; ದೀನ ದಲಿತರ ಸೇವೆಗಾಗಿ ಅರ್ಪಿಸುತ್ತೇನೆ; ಬಡಮಹಿಳೆಯರ ವಿದ್ಯಾಭ್ಯಾಸಕ್ಕಾಗಿ ಅರ್ಪಿಸು ತ್ತೇನೆ; ನಿವೇದಿತಾ ಎಂಬ ಹೆಸರನ್ನು ಸಾರ್ಥಕಗೊಳಿಸುತ್ತೇನೆ, ಎಂದೆಲಾ ಯೋಚಿಸಿದಳು.



ಮಾರ್ಗರೆಟ್ ಚಿಕ್ಕವಳಿರುವಾಗ ಆಕೆಯ ಕುಟುಂಬ ಐರ್ಲೆಂಡಿ ನಿಂದ ಇಂಗ್ಲೆಂಡಿಗೆ ಬಂದು ನೆಲೆಸಿತು. ತಂದೆ ಚರ್ಚಿನ ಬೋಧಕ ವೃತ್ತಿಯಲ್ಲಿದ್ದ ರೆವರೆಂಡ್ ಸ್ಯಾಮುಯೆಲ್ ನೋಬಲ್, ದೀನ ದಲಿತರ ಸೇವೆ ಮಾಡುವ ಉದ್ದೇಶ ಹೊಂದಿದ್ದ. ತಂದೆಯ ಜೊತೆ ಬಡವರ ಮನೆಗೆ ಹೋಗುತ್ತಿದ್ದ ಮಾರ್ಗರೆಟ್ ಅವರ ಕಷ್ಟಕಾರ್ಪಣ್ಯ ಗಳನ್ನು ಕಣ್ಣಾರೆ ಕಂಡವಳು. ಆಕೆಯ ತಾಯಿ ಮೇರಿ ನೋಬಲ್, ತುಂಬಾ ದೈವ ಭಕ್ತೆ. ತನ್ನ ಪತಿಯ ಮರಣದ ಬಳಿಕ ಐರ್ಲೆಂಡಿಗೆ ಹಿಂದಿರುಗಿದಳು. ಮಾರ್ಗರೆಟ್ ಅಲ್ಲೇ ತನ್ನ ಶಿಕ್ಷಣ ಮುಂದು ವರೆಸಿದಳು.

ಕ್ರೈಸ್ತ ಧರ್ಮದ ವಾತಾವರಣದಲ್ಲಿ ಬೆಳೆದ ನಿವೇದಿತಾ, ಜೀಸಸ್ ಕ್ರಿಸ್ತನ ಬೋಧನೆಯಲ್ಲಿ ವಿಶ್ವಾಸ ಇಟ್ಟುಕೊಂಡಿದ್ದಳು. ಆದರೆ ಅವಳ ಸ್ವತಂತ್ರ ಯೋಚನೆಗಳಿಗೆ ಅಲ್ಲಿಯ ಚರ್ಚಿನಿಂದ ಪ್ರೋತ್ಸಾಹ ಸಿಗ ಲಿಲ್ಲ. ಆಗ ಮೂರು ವರ್ಷಗಳ ಕಾಲ ಬೌದ್ಧದರ್ಮಧ ಅಧ್ಯಯನ ಮಾಡಿದಳು. ಅದರಿಂದ ಶಾಂತಿ ದೊರೆತರೂ, ಅವಳ ಎಲ್ಲಾ ಪ್ರಶ್ನೆ ಗಳಿಗೆ ಉತ್ತರ ದೊರೆಯಲಿಲ್ಲ. ‘‘ಅತಿ ತೀವ್ರವಾದ ಆಧ್ಯಾತ್ಮಿಕ ದಾಹ, ಕಾತರ ಇದ್ದಲ್ಲಿ ಅದನ್ನು ತಣಿಸುವವರು ಸಿಕ್ಕೇ ಸಿಗುತ್ತಾರೆ ’’ ಎಂಬ ನಂಬಿಕೆ ಮಾರ್ಗರೆಟಳಲ್ಲಿತ್ತು.

೧೮೯೫ ರಲ್ಲಿ ಲಂಡನ್‌ನಗರದ ಇಸಾಬೆಲ ಮಾರ್ಗಸನ್ ಮನೆಯಲ್ಲಿ ಉಪನ್ಯಾಸ ಮಾಡಲೆಂದು ಬಂದಿದ್ದ ಸ್ವಾಮಿ ವಿವೇಕಾ ನಂದರನ್ನು ಮಾರ್ಗರೆಟ್ ಕಂಡಳು. ಕಾವಿಯ ನಿಲುವಂಗಿ ತೊಟ್ಟು, ಪ್ರಶಾಂತ ಮುಖದ ಹೊಳೆಯುವ ಕಣ್ಣುಗಳ, ಆಕರ್ಷಕ ವ್ಯಕ್ತಿತ್ವದ ಹಿಂದೂ ಯೋಗಿ ಅವರು. ಮೊದಲ ಬಾರಿ ಅವರ ಮಾತಿನ ನವೀ ನತೆ, ವಾಗ್ಝರಿ, ಅವರ ಸಿಂಹವಾಣಿಯ ಗಾಂಭೀರ್ಯ, ಅವರ ಚಿಂತನೆ, ಕೇಳುಗರ ಮನಸ್ಸನ್ನು ಬುದ್ಧಿಯನ್ನು ಅರಳಿಸುವ ಮಾತು ಗಳನ್ನು ಕೇಳಿದಳು. ದೀನದಲಿತರ ಮೇಲೆ ಅವರಿಗಿದ್ದ ಅನುಕಂಪ, ಮಾನವರ ಹಿತಕ್ಕೆ ದುಡಿಯಬೇಕೆಂಬ ಅವರ ಕರೆ, ಅವಳ ಮೇಲೆ ಪ್ರಭಾವ ಬೀರಿದವು. ಅವರ ವೀರೋಚಿತ ವ್ಯಕ್ತಿತ್ವಕ್ಕೆ ಮಾರು ಹೋದಳು. ಆಮೇಲೆ ಎಲ್ಲೆಲ್ಲಿ ಸ್ವಾಮೀಜಿಯ ಪ್ರವಚನ ಇರುತ್ತಿತ್ತೋ, ಅಲ್ಲೆಲ್ಲಾ ಮಾರ್ಗರೆಟ್ ಹೋಗುತ್ತಿದ್ದಳು. ಪ್ರವಚನದ ಬಳಿಕದ

ಸಂವಾದದಲ್ಲಿ ಭಾಗವಹಿಸುತ್ತಿದ್ದಳು. ಅವಳ 'ಏಕೆ' ಎಂಬ ಪ್ರಶ್ನೆಗಳಿಗೆ ಸ್ವಾಮೀಜಿಯಿಂದ ಉತ್ತರ ದೊರೆಯುತ್ತಿತ್ತು. ತಾನು ಅರಸುತ್ತಿದ್ದ ಮಾರ್ಗದರ್ಶಕ ಇವರೇ ಎಂದು ಆಕೆಗೆ ಅನಿಸಿತು. ಸ್ವಾಮೀಜಿಯನ್ನು ಆಕೆ 'ಗುರು' ಎಂದು ಸಂಬೋಧಿಸತೊಡಗಿದಳು.

ಒಂದು ದಿನ ಸ್ವಾಮೀಜಿ ಮಾರ್ಗರೆಟ್‌ಳೊಡನೆ ಮಾತಾಡುತ್ತಾ ಹಿಂದೂ ದೇಶದ ಜನರನ್ನು ಮೇಲೆತ್ತುವ ಕೆಲಸದಲ್ಲಿ ಸೇವಾಮನೋಭಾವ ಇರುವ ಸ್ತ್ರೀಯರು ಬೇಕಾಗಿದ್ದಾರೆ. ನೀನು ಅದಕ್ಕೆ ಸಮ್ಮತಿಸಿದರೆ ಭರತಖಂಡಕ್ಕೆ ದೊಡ್ಡ ಸಹಾಯವಾಗುವುದು ಎಂದು ಹೇಳಿ



ದರು. ಸ್ವಾಮೀಜಿಯ ಮಾತು ಆಕೆಯಲ್ಲಿ ಹೊಸ ಚೈತನ್ಯ ಮೂಡಿಸಿತು. ಆಕೆಯ ಸೇವಾಮನೋವೃತ್ತಿಗೆ ಪೂರಕವಾಯಿತು.

ಸ್ವಾಮಿ ವಿವೇಕಾನಂದರು, ತಮ್ಮ ವಿದೇಶ ಯಾತ್ರೆಯಲ್ಲಿ ಜಯಭೇರಿ ಗಳಿಸಿ ಭಾರತಕ್ಕೆ ಹಿಂದೆ ಬಂದ ಬಳಿಕವೂ, ತಮ್ಮ ಕೆಲಸದ ಒತ್ತಡಗಳ ಮಧ್ಯದಲ್ಲೂ, ಮಾರ್ಗರೆಟಳಿಗೆ ಆಶೀರ್ವದಿಸಿ ಪತ್ರ ಬರೆಯುತ್ತಿದ್ದರು. ಅದರಲ್ಲಿ ಭಾರತದ ಪರಿಸ್ಥಿತಿ, ಬಡತನ, ಉಷ್ಣ ಹವಾಮಾನ, ಕ್ಷಾಮಡಾಮರಗಳ ಬಗ್ಗೆ ತಿಳಿಸಿ, ಆಕೆ ಭಾರತಕ್ಕೆ ಬಂದರೆ ಅನೇಕ ಕಷ್ಟಗಳನ್ನು ಎದುರಿಸಬೇಕಾಗಬಹುದು ಎಂಬುದನ್ನು ತಿಳಿಸಿದ್ದರು.

ಸೇವೆಯ ಮೂಲಕ ಹೇಗೆ ಸಾರ್ಥಕತೆ ಪಡೆಯಬಹುದು ಎಂಬುದನ್ನು ಕಲಿಯಲು ತಾನು ಭಾರತಕ್ಕೆ ಬರುತ್ತೇನೆ ಎಂದು ಸ್ವಾಮೀಜಿಗೆ ಪತ್ರದ ಮೂಲಕ ತಿಳಿಸಿ, ಭಾರತಕ್ಕೆ ಹೊರಟೇಬಿಟ್ಟಳು ಮಾರ್ಗರೆಟ್ ನೋಬಲ್.

೧೮೯೮ರ ಜನವರಿ ೨೮ರಂದು ಕಲ್ಕತ್ತ ಬಂದರಿನ ಹಡಗು ನಿಲ್ದಾಣದಲ್ಲಿ ಬಂದಿಳಿದ ಮಾರ್ಗರೆಟ್ ನೋಬಲ್‌ನ್ನು ಸ್ವಾಮಿ ವಿವೇಕಾನಂದರು ಸ್ವಾಗತಿಸಿ, ಆಕೆಗೆ ತಂಗಲು ಬೇಕಾದ ವ್ಯವಸ್ಥೆಯನ್ನು ಮಾಡಿದರು. ಕೆಲವೊಮ್ಮೆ ಆಕೆ ಬೇಲೂರು ಮಠಕ್ಕೂ ಹೋಗಿ ಕೆಲವು ದಿನ ಅಲ್ಲಿರುತ್ತಿದ್ದಳು. ಆಕೆಗೆ ಸ್ವಾಮೀಜಿ, ಭಾರತದ ಇತಿಹಾಸ, ಭಾರತೀಯರ ರೀತಿ ನೀತಿ, ಧೈರ್ಯ ಸಾಹಸ, ಆದರ್ಶಗಳ ಬಗ್ಗೆ ತಿಳಿಸುತ್ತಿದ್ದರು.

ಬೇಲೂರು ಮಠದಲ್ಲಿ ಮಾರ್ಗರೆಟ್, ಅಂದಿನವರೆಗೆ ಎಲ್ಲೂ ಕಂಡಿರದ ದೈವೀಕಳೆಯನ್ನು, ಮಾಧುರ್ಯ ಮಮತೆಯ ಚಿಲುಮೆಯನ್ನು ಶ್ರೀಶಾರದಾಮಾತೆಯಲ್ಲಿ ಕಂಡು ಅವರಿಗೆ ಶರಣಾದಳು.

ಶರೀರ ಮತ್ತು ಮನಸ್ಸು ಇವೆರಡೂ ಮೂರನೆಯದಾದ ಆತ್ಮನ ಮೂಲಕ ಚೈತನ್ಯವನ್ನು ಪಡೆಯುವುದು ಎಂಬ ಹಿಂದುಗಳ ನಂಬಿಕೆಯ ಸ್ಪಷ್ಟತೆಯನ್ನು ಆಕೆ ಶ್ರೀಮಾತೆಯಲ್ಲಿ ಕಂಡಳು. ಶ್ರೀಮಾತೆಯವರು ಅವಳನ್ನು 'ಮಗಳೇ' ಎಂದು ಸಂಬೋಧಿಸಿ, ಪ್ರೀತಿಯಿಂದ ಪ್ರಸಾದವನ್ನು ಅವರೇ ತಿನ್ನಿಸಿದರು. ''ನೀನು ಬಂದಿರುವುದರಿಂದ ನನಗೆ ತುಂಬಾ ಸಂತೋಷವಾಗಿದೆ'' ಎಂದು ಹೇಳಿ ಆಕೆಯನ್ನು ಆಶೀರ್ವದಿಸಿದರು.

ಸ್ವಾಮೀಜಿಯಿಂದ ಬ್ರಹ್ಮಚರ್ಯ ದೀಕ್ಷೆ ಪಡೆದ ಮಾರ್ಗರೆಟ್, ಶಿವನ ಪೂಜೆ ಮಾಡಿದಳು. ಬುದ್ಧನ ಪಾದಕ್ಕೆ ಹೂವನ್ನು ಅರ್ಪಿಸಿದಳು. ಸ್ವಾಮೀಜಿ ಆಕೆಗೆ ವಿಶೇಷ ಶಿಕ್ಷಣ ನೀಡಿದರು. ಪುರುಷರಿಗೆ ಮತ್ತು ಸ್ತ್ರೀಯರಿಗೆ ಬೇರೆ ಬೇರೆ ಸಂಘಗಳನ್ನು ಸ್ಥಾಪಿಸುವ ತಮ್ಮ ಉದ್ದೇಶವನ್ನು ತಿಳಿಸಿದರು. ಭಾರತದ ಇತಿಹಾಸ, ಪುರಾಣ, ವೇದಾಂತ, ಧರ್ಮ ವ್ಯವಸ್ಥೆ, ಮಡಿಮೈಲಿಗೆ ಹೀಗೆ ಎಲ್ಲಾ ವಿಷಯಗಳಲ್ಲೂ ತಿಳಿವಳಿಕೆ ನೀಡಿದರು. ನಿವೇದಿತಾ ಪೂರ್ಣವಾಗಿ ಭಾರತೀಯಳಾದಳು. ತನ್ನನ್ನು ಭಾರತಮಾತೆಗೆ ಅರ್ಪಿಸಿ ನಿಜವಾದ ಅರ್ಥದಲ್ಲಿ **ನಿವೇದಿತಾ** ಆದಳು.

ತಾನು ವಿದೇಶದಲ್ಲಿದ್ದಾಗ ಸ್ವಾಮೀಜಿಯವರು ನಿವೇದಿತಾಳಿಗೆ ಒಂದು ಆಶೀರ್ವಚನವನ್ನು ಬರೆದು ಕಳುಹಿಸಿದ್ದರು. ಇಂಗ್ಲಿಷಿನಲ್ಲಿ ಅದು ಹೀಗಿದೆ:

''The mother's heart, the hero's will,
The sweetness of the southern breeze,
The scared charm and strength that dwell
On Aryan altars, flaming, free;
All these be yours and many more
No ancient soul could dream before –
Be thou to India's future son
The mistress, servent, friend in one.''

''ತಾಯಿ ಹೃದಯ, ವೀರನ ಪ್ರಚಂಡ ಇಚ್ಛಾಶಕ್ತಿ, ದಕ್ಷಿಣ ತಂಗಾಳಿಯ ಮಾಧುರ್ಯ, ಆರ್ಯರ ಯಜ್ಞಕುಂಡದಿಂದ ಏಳುವ ಜ್ಯೋತಿ ಮತ್ತು ಸ್ವಾತಂತ್ರ್ಯದಲ್ಲಿರುವ ಪವಿತ್ರ ಆಕರ್ಷಣೆ ಹಾಗೂ ಶಕ್ತಿ, ಇವುಗಳೆಲ್ಲ, ಜೊತೆಗೆ ಯಾವ ಪುರಾತನ ವ್ಯಕ್ತಿಯೂ ಕಲ್ಪಿಸಿಕೊಳ್ಳುವುದಕ್ಕೂ ಅಸಾಧ್ಯವಾದ ಸದ್ಗುಣಗಳೆಲ್ಲವೂ ನಿನ್ನ ಪಾಲಿಗೆ ಬರಲಿ. ನೀನು ಭವಿಷ್ಯ ಭರತಖಂಡದ ಪುತ್ರನಿಗೆ ಗೃಹಿಣಿ, ದಾಸಿ ಮತ್ತು ಸಖಿ ಎಲ್ಲವೂ ಆಗು.''

ಸ್ವಾಮೀಜಿ ಜೊತೆ, ಅಮರನಾಥವೂ ಸೇರಿದಂತೆ ಉತ್ತರ ಭಾರತದ ತೀರ್ಥಯಾತ್ರೆ ಮಾಡಿ ಹೆಚ್ಚಿನ ಜ್ಞಾನ ಪಡೆದಳು. ಹಿಂದೂ ಧರ್ಮಶಾಸ್ತ್ರಗಳ ಅಧ್ಯಯನವನ್ನು ಮಾಡಿದಳು. ಯಾರ ಸಹಾಯಕ್ಕೂ ಕಾಯದೆ, ಯಾವುದನ್ನೂ ಬಯಸದೆ, ಎಲ್ಲವನ್ನೂ ಇತರರಿ

ಗಾಗಿ ಮಾಡಿದಳು. ''ನಮ್ಮನ್ನು ದುಃಖಕ್ಕೆ ಒಳಪಡಿಸುವ ಎಲ್ಲ ಕಷ್ಟಗಳಿಗೂ ಆಸೆಯೇ ಕಾರಣ, ಒಳ್ಳೆಯವರಾಗಿರುವುದು, ಒಳ್ಳೆಯದನ್ನು ಮಾಡುವುದು ಇದುವೇ ಧರ್ಮದ ಸರ್ವಸ್ವ'' ಎಂಬ ಸ್ವಾಮೀಜಿಯ ಮಾತನ್ನು ಪಾಲಿಸಿದಳು. ಭಗವಂತನ ಸಾಕ್ಷಾತ್ಕಾರಕ್ಕಾಗಿ ಧ್ಯಾನ, ಜಪಗಳನ್ನು ಮಾಡಿ, ಸಕಲರ ಕ್ಷೇಮಕ್ಕಾಗಿ ತನ್ನ ಬಾಳನ್ನು ಅರ್ಪಿಸಬೇಕು. ನಿಜವಾದ ಅರ್ಥದಲ್ಲಿ 'ನಿವೇದಿತ'ಳಾಗಬೇಕು ಎಂದುಕೊಂಡು, ಭಾರತೀಯರ ಹಿತಕ್ಕಾಗಿ ತನ್ನ ಬಾಳನ್ನು ಅರ್ಪಿಸಿದಳು. ಹಿಂದೂ ಮಹಿಳೆಯರ ಸರಳ ಜೀವನ ರೀತಿಯನ್ನು ತನ್ನಲ್ಲಿ ಅಳವಡಿಸಿಕೊಂಡು ಎಲ್ಲರೊಡನೆ ಒಂದಾಗಿ ಬಾಳಿದಳು. ಕಲ್ಕತ್ತಾ ಅವಳ ಊರು, ಭಾರತ ಅವಳ ದೇಶವಾಯಿತು. ಆಕೆಯಲ್ಲಿ ಸ್ವಾರ್ಥರಹಿತ ಅರ್ಪಣ ಮನೋಭಾವ, ಸೇವಾತತ್ಪರತೆ ಇದ್ದದ್ದರಿಂದ ಆಕೆ ಭಾರತೀಯರ ಹಿತಕ್ಕಾಗಿ ತನ್ನ ಬಾಳನ್ನೇ ನಿವೇದಿಸಿದಳು. ಸ್ವಾಮೀಜಿಯ ಮಾತುಗಳು ಸದಾ ಆಕೆಯ ನೆನಪಿನಲ್ಲಿತ್ತು. ''ಇತರರಿಗೆ ಒಳ್ಳೆಯದನ್ನು ಮಾಡುವುದೇ ನಿಜವಾದ ಪೂಜೆ. ನೀವು ಯಾರಿಗೂ ಸಹಾಯ ಮಾಡಲಾರಿರಿ. ಬೇಕಾದರೆ ಸೇವೆ ಮಾಡಬಹುದು. ಮಾನವಕೋಟಿಗೆ ಸೇವೆ ಮಾಡುವುದೇ ಒಂದು ಮಹಾಭಾಗ್ಯ.''

ಪ್ಲೇಗ್ ರೋಗ ಕಲ್ಕತ್ತಾನಗರದ ಮತ್ತು ಅದರ ಸುತ್ತಮುತ್ತ ಹರಡಿದಾಗ ನಿವೇದಿತಾ ಮಾಡಿದ ಕೆಲಸ ಅಷ್ಟಿಷ್ಟಲ್ಲ. ರೋಗಿಗಳ ಸೇವೆಗೆ ತನ್ನನ್ನು ಅರ್ಪಿಸಿಕೊಂಡಳು. ರೋಗಿಗಳ ಆರೈಕೆ ಮಾಡಿದಳು. ಪ್ಲೇಗ್ ರೋಗದಿಂದ ಸತ್ತವರ ಮನೆಗಳಿಗೆ ಹೋಗಿ ಅವರ ಬಂಧುಗಳಿಗೆ ಸಾಂತ್ವನ ಹೇಳಿದಳು. ಮನೆ ಮತ್ತು ವಠಾರದ ಶುಚಿತ್ವದ ಅಗತ್ಯ ತಿಳಿಸಿದಳು. ಪ್ಲೇಗ್ ಜಾಡ್ಯ ನಿವಾರಣೆಯ ಕೆಲಸದಲ್ಲಿ ತೊಡಗಿದಳು. ಬೀದಿ ಗುಡಿಸಲು ಯಾರೂ ಇಲ್ಲದಾಗ, ತಾನೇ ಒಂದು ಪೊರಕೆ ತೆಗೆದುಕೊಂಡು ಬೀದಿ ಗುಡಿಸಿದಳು. ಇದನ್ನು ನೋಡಿದ ಕೆಲವು ಯುವಕರು ಇವಳಿಗೆ ನೆರವಾದರು. ಇಂತಹ ತುರ್ತು ಪರಿಸ್ಥಿತಿಯಲ್ಲಿ ಯುವಕರು, ವಿದ್ಯಾರ್ಥಿಗಳು ಏನು ಮಾಡಬೇಕೆಂದು ಮಾರ್ಗದರ್ಶನ ಕೊಟ್ಟಳು. ಇವಳ ಕೆಲಸ ಕಾರ್ಯಗಳಿಂದ ಜನರು ಸ್ಫೂರ್ತಿಗೊಂಡು ಅವಳ ಸೇವಾಕಾರ್ಯಗಳಲ್ಲಿ ಸಹಕರಿಸಿದರು. ರೋಗಿಗಳ ಸೇವೆ ಮಾಡಿದ ನಿವೇದಿತಾ ತನ್ನ ಹೆಸರನ್ನು ಅನ್ವರ್ಥಗೊಳಿಸಿದಳು.

ಮಹಿಳಾ ಶಿಕ್ಷಣದ ಅಗತ್ಯವನ್ನು ಕಂಡ ನಿವೇದಿತಾ ತನ್ನ ಮನೆಯಲ್ಲಿ ಹೆಣ್ಣುಮಕ್ಕಳಿಗಾಗಿ ಶಾಲೆ ಸ್ಥಾಪಿಸುವ ಯೋಜನೆ ಹಾಕಿದಳು. ಒಂದು ನಿರ್ದಿಷ್ಟ ಧರ್ಮಭಾವನೆ ಇರುವ ಶಿಕ್ಷಣವನ್ನು ನೀಡುವ ಶಾಲೆಯ ಸ್ಥಾಪನೆಗೆ ಸ್ವಾಮೀಜಿಯಿಂದ ಒಪ್ಪಿಗೆ ದೊರೆಯಿತು.

೧೮೯೮ರ ನವೆಂಬರ್ ೧೩ರಂದು ನಿವೇದಿತಾಳ ಮನೆಯಲ್ಲಿ ಶಾಲೆಯ ಪ್ರಾರಂಭೋತ್ಸವ ನಡೆಯಿತು. ಉದ್ಘಾಟನೆ ಮಾಡಿದ ಶ್ರೀಮಾತೆಯವರು ಇಲ್ಲಿ ಶಿಕ್ಷಣ ಪಡೆದ ಬಾಲಕಿಯರು ಆದರ್ಶ ಮಹಿಳೆಯರಾಗಲಿ ಎಂದು ಹರಸಿದರು. ನೆರೆಹೊರೆಯ ಕೆಲವೇ ವಿದ್ಯಾರ್ಥಿನಿಯರಿಂದ ಆರಂಭವಾದ ಈ ಶಾಲೆಯಲ್ಲಿ ಅಕ್ಷರಾಭ್ಯಾಸದ ಜತೆ, ರಾಷ್ಟ್ರೀಯತೆ, ಪ್ರೀತಿ, ಸಹಾನುಭೂತಿ ಮತ್ತು ಸೇವೆಯ ಬಗ್ಗೆಯೂ ತಿಳಿಸಲಾಗುತ್ತಿತ್ತು. ಅತಿ ಶೀಘ್ರವಾಗಿ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚಿತು. ಆ ಕಾಲದಲ್ಲಿ ಹೆಣ್ಣುಮಕ್ಕಳು ಶಾಲೆಗೆ ಹೋಗಿ ವಿದ್ಯೆ ಕಲಿಯುವುದು ನಿಷಿದ್ಧವಾಗಿತ್ತು. ಆದರೆ ನಿವೇದಿತಾ, ತಾನೇ ಕಾಲ್ನಡಿಗೆಯಲ್ಲಿ ಮನೆಮನೆಗೆ ಹೋಗಿ, ಹೆಣ್ಣುಮಕ್ಕಳ ತಾಯಿತಂದೆಯರಿಗೆ ಶಿಕ್ಷಣದ ಮಹತ್ವದ ಮನವರಿಕೆ ಮಾಡಿ, ಅವರ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸಲು ಕೇಳಿಕೊಳ್ಳುತ್ತಿದ್ದಳು. ಜಾತಿ ಭೇದ ಇಲ್ಲದ ಧರ್ಮಭೇದ ಇಲ್ಲದ ನಿವೇದಿತಾಳ ಶಾಲೆಯಲ್ಲಿ ಸ್ವತಂತ್ರ ವಾತಾವರಣದಲ್ಲಿ ಆಟಪಾಠಗಳ ನಡುವೆ ಓದು ಬರಹ ಕಲಿಸಲಾಗುತ್ತಿತ್ತು. ಪ್ರತಿದಿನ 'ವಂದೇ ಮಾತರಂ' ಗೀತೆ ಹಾಡುವುದರೊಂದಿಗೆ ಆ ದಿನ ಕಾರ್ಯಕ್ರಮ ಆರಂಭವಾಗುತ್ತಿತ್ತು. ಶ್ರೀರಾಮಕೃಷ್ಣರ ವರ್ಣಚಿತ್ರವನ್ನು ಗೋಡೆಯ ಮೇಲೆ ತೂಗುಹಾಕಲಾಗಿತ್ತು.

ಚಿತ್ರಕಲೆ, ಹೊಲಿಗೆ, ಕಸೂತಿ, ಚರಕದಿಂದ ನೂಲು ತೆಗೆಯುವುದು, ಗೊಂಬೆ ತಯಾರಿ ಮೊದಲಾದ ವಿಷಯಗಳನ್ನು ಮಕ್ಕಳಿಗೆ ತಿಳಿಸಲಾಗುತ್ತಿತ್ತು. ಹೊಲಿಗೆ, ಕಸೂತಿಗೆ ಬೇಕಾದ ಬಟ್ಟೆಗಳನ್ನು, ಚಿತ್ರ ಬಿಡಿಸಲು ಹಾಳೆ, ಬಣ್ಣದ ಪೆನ್ಸಿಲು, ಮೊದಲಾದವುಗಳನ್ನು ನಿವೇದಿತಾ ತಾನೇ ಒದಗಿಸುತ್ತಿದ್ದಳು. ಬಹಳ ಸುಲಭರೀತಿಯಲ್ಲಿ ಒಣ ಬೀಜಗಳನ್ನು ಉಪಯೋಗಿಸಿ ಗಣಿತ ಹೇಳಿಕೊಡುತ್ತಿದ್ದಳು. ಮಕ್ಕಳನ್ನು ಪ್ರವಾಸಗಳಿಗೆ ಕರೆದುಕೊಂಡು ಹೋಗಿ ಆ ಸ್ಥಳಗಳ ಮಹತ್ವವನ್ನು ವಿವರಿಸುತ್ತಿದ್ದಳು. ವಸ್ತು ಸಂಗ್ರಹಾಲಯದಲ್ಲಿ ಅಲ್ಲಿಯ ವಸ್ತುಗಳ ವಿವರ ತಿಳಿಸುತ್ತಿದ್ದಳು. ಹೀಗೆ ಶಾಲೆಯ ಬೆಳವಣಿಗೆಗೆ ತನ್ನನ್ನು ಅರ್ಪಿಸಿಕೊಂಡಳು. ಹೀಗೆ ಬೆಳೆದ 'ರಾಮಕೃಷ್ಣ ಬಾಲಿಕಾ ವಿದ್ಯಾಲಯ' ಈಗ '**ರಾಮಕೃಷ್ಣ ಮಿಷನ್ ನಿವೇದಿತಾ ಬಾಲಿಕಾ ವಿದ್ಯಾಲಯ**' ಎಂದು ಕರೆಯಲ್ಪಡುತ್ತಿದೆ. ಈಗ ಈ ಶಾಲೆಯ ಜವಾಬ್ದಾರಿಯನ್ನು ಶಾರದಾ ಮಿಷನ್ ವಹಿಸಿಕೊಂಡಿದೆ.

ಭಾರತೀಯರಿಗಾಗಿ ಯಾವ ಸೇವೆ ಮಾಡಲೂ ಸಿದ್ಧಳಿದ್ದ ನಿವೇದಿತಾ, ಇಂಗ್ಲೆಂಡ್ ಮತ್ತು ಅಮೇರಿಕಾ ದೇಶಗಳಿಗೆ ಹೋಗಿ ತನ್ನ ಶಾಲೆಗಾಗಿ ಚಂದಾ ಎತ್ತಿ ಹಣ ಸಂಗ್ರಹಿಸಿದಳು. 'ಬಾಲಕಿಯರಿಗೆ ಒಂದು ಶಾಲೆ' ಎಂಬ ಪುಸ್ತಕ ಬರೆದು, ಮಾರಾಟ ಮಾಡಿ ಹಣ ಸಂಗ್ರ



ಹಿಸಿದಳು. ಭಾರತದ ದಾನಿಗಳೂ ಕೆಲವರು ಅವಳ ಶಾಲೆಗೆ ತಮ್ಮಿಂದಾದ ಧನ ಸಹಾಯ ಮಾಡಿದರು. ಸೋದರಿ ಕ್ರಿಸ್ಟೀನ್, ಶಾಲೆ ನಡೆಸುವುದರಲ್ಲಿ ನಿವೇದಿತಾಳಿಗೆ ತುಂಬಾ ಸಹಕರಿಸಿದಳು. ವಿದ್ಯಾಲಯದ ಅಭಿವೃದ್ಧಿಯ ಕೆಲಸಕ್ಕೆ ತನ್ನನ್ನೇ ಅರ್ಪಿಸಿಕೊಂಡು, ಅದರ ಯಶಸ್ಸಿಗೆ ಕಾರಣಳಾಗಿದ್ದಾಳೆ. ದೇಶಸೇವೆಗಾಗಿ ತನ್ನನ್ನೇ ಮುಡಿಪಾಗಿಟ್ಟ ಸುಧೀರಾದೇವಿಯೂ ಈ ವಿದ್ಯಾಲಯದಲ್ಲಿ ಸೇವೆ ಸಲ್ಲಿಸಿದ್ದಳು.

ಭಾರತದ ಮಹಿಳೆಯರು ಜಾಗೃತರಾದರೆ ಮಾತ್ರ ದೇಶದ ಏಳ್ಗೆ ಎಂದು ತಿಳಿದಿದ್ದ ನಿವೇದಿತಾ ಸ್ತ್ರೀಶಿಕ್ಷಣಕ್ಕಾಗಿ ತನ್ನದೇ ಆದ ರೂಪುರೇಷೆಗಳನ್ನು ಹಾಕಿದಳು. ಭಾರತೀಯ ಮಹಿಳೆಯರ ಶ್ರದ್ದೆ, ತ್ಯಾಗ ಮನೋಭಾವ, ಪಾವಿತ್ರ್ಯ, ದೇಶಪ್ರೇಮದ ಅರಿವಿದ್ದ ನಿವೇದಿತಾ ಅವರಿಗಾಗಿ ಒಂದು ಶಾಲೆ ತೆರೆದಳು. ಶಿಕ್ಷಣದ ಮೂಲಕ ಮಹಿಳೆಯರಲ್ಲಿ ಶಕ್ತಿ ತುಂಬಿದಳು. ಮಧ್ಯಾಹ್ನದ ವೇಳೆ ತಮ್ಮ ಮನೆ ಕೆಲಸ ಮುಗಿಸಿ, ಮಹಿಳೆಯರು ಸ್ವಲ್ಪ ಬಿಡುವಾಗಿರುವ ವೇಳೆ, ಅವರು ಶಾಲೆಗೆ ಬಂದು ಕಲಿಯುವ ವ್ಯವಸ್ಥೆ ಮಾಡಿದಳು. ಈ ಮಹಿಳಾ ವಿಶೇಷ ಶಾಲೆಯಲ್ಲಿ ಸ್ತ್ರೀಯರು, ಓದು ಬರಹದ ಜತೆ ಭಾರತೀಯ ಪುರಾಣಗಳನ್ನು, ಅವುಗಳಲ್ಲಿ ಬರುವ ಸ್ತ್ರೀಪಾತ್ರಗಳ ಆದರ್ಶಗಳನ್ನು, ನಿವೇದಿತಾಳ ಮೂಲಕ ತಿಳಿದುಕೊಂಡರು. ದೇಶಕ್ಕಾಗಿ ತಮ್ಮ ನಾಡ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಧೀರ ಮಹಿಳೆಯರ ಬಗ್ಗೆಯೂ ತಿಳಿದುಕೊಂಡು ಜಾಗೃತರಾದರು.

ತನ್ನ ತಾಯಿಯಿಂದ ದೂರ ಬಂದಿರುವ ನಿವೇದಿತಾಳಿಗೆ, ಶ್ರೀಮಾತೆಯವರೇ ತಾಯಿ, ಶ್ರೀಮಾತೆಯವರ ಮುಂದೆ ನಿವೇದಿತಾ ಚಿಕ್ಕ ಮಗುವಿನಂತಾಗುತ್ತಿದ್ದಳು. ಮಗುವಿನಂತೆ ಅವರನ್ನೇ ದಿಟ್ಟಿಸಿ ನೋಡುತ್ತಿದ್ದಳು. ಯಾವುದಾದರೂ ಕಾರಣಕ್ಕೆ ಮನಸ್ಸು ಅಶಾಂತವಾದಾಗ ಶ್ರೀಮಾತೆಯ ಸಾನ್ನಿಧ್ಯದಿಂದ ಆಕೆಯ ವಿಚಲಿತ ಮನಸ್ಸು ಶಾಂತವಾಗುತ್ತಿತ್ತು. ನಿವೇದಿತಾಳ ಸಮಾಜಸೇವೆಗೆ, ಮಹಿಳಾಶಿಕ್ಷಣಕ್ಕೆ ಪ್ರೋತ್ಸಾಹ ಕೊಡುತ್ತಿದ್ದ ಶ್ರೀಮಾತೆಯವರು ಅವಳಿಗೆ ಬರೆದ ಪತ್ರ ಒಂದರಲ್ಲಿ ಹೀಗೆ ಬರೆದಿದ್ದಾರೆ: ''ಪ್ರೀತಿಯ ಮಗು ನಿವೇದಿತಾ, ಮಹಿಳೆಯರಿಗಾಗಿ ಆಶ್ರಮವನ್ನು ತೆರೆಯುವ ನಿನ್ನ ಉದ್ದೇಶವು ಸಫಲವಾಗಲಿ.. ದೇವರು ನಿನ್ನ ಮಹತ್ಕಾರ್ಯದಲ್ಲಿ ನಿನಗೆ ಸಹಾಯಮಾಡಲಿ. ನೀನು ನಿಜವಾಗಿಯೂ ಅದ್ಭುತ ಕೆಲಸ ಮಾಡುತ್ತಿರುವೆ. ನನ್ನ ಆಶೀರ್ವಾದಗಳನ್ನು ಸ್ವೀಕರಿಸು.''

ಸ್ತ್ರೀಯರೊಡನೆ ಮಾತಾಡುತ್ತ ನಿವೇದಿತಾ, ಅವರು ತಮ್ಮ ಆದರ್ಶವನ್ನು ಬಿಟ್ಟು ಇತರರನ್ನು ಅಂಧಾನುಕರಣೆ ಮಾಡಬಾರದು. ಭರತಖಂಡದ ಸ್ತ್ರೀಯರು ಜಾಗೃತರಾದರೆ ಇಡೀ ದೇಶಕ್ಕೆ ಚೈತನ್ಯ ನೀಡಬಲ್ಲರು ಎನ್ನುತ್ತಾ, ಭಾರತದ ಸ್ತ್ರೀಯರ ಏಳಿಗೆಗಾಗಿ ತನ್ನ ಸರ್ವಸ್ವವನ್ನು ಅರ್ಪಿಸಿದಳು.

ನಿವೇದಿತಾ ತಾನು ಮಾಡಿದ ಸತ್ಕಾರ್ಯಗಳ ಕುರಿತು ಎಂದೂ ಹೇಳಿಕೊಂಡವಳಲ್ಲ. ಆಕೆ ಬರೆದ ಪುಸ್ತಕಗಳಲ್ಲೆಲ್ಲಾ ತನ್ನ ಗುರುವನ್ನೇ ಮೆರೆಯಿಸಿದ್ದಾಳೆ. ಆಕೆ ಮಾಡಿದ ಕೆಲಸಗಳೆಲ್ಲಾ ಇತರರ ಮೂಲಕ ತಿಳಿದು ಬಂದಿರುವುದು. ಅವಳ ಅಮರನಾಥ ಯಾತ್ರೆಯ ಸಮಯದಲ್ಲಿ ವೃದ್ಧೆಯೊಬ್ಬಳು ದಾರಿಬದಿಯಲ್ಲಿ ಚಳಿಯಿಂದ ನಡುಗುತ್ತಿರುವುದನ್ನು ಕಂಡು, ತನ್ನ ಶಾಲನ್ನು ಅವಳಿಗೆ ಹೊದಿಸಿ ತನ್ನ ದಂಡಿಯಲ್ಲಿ ಅವಳನ್ನು ಕುಳ್ಳಿರಿಸಿ, ತಾನು ನಡೆದುಕೊಂಡು ಹೋದಳೆಂದು ಸ್ವಾಮೀಜಿ ಹೇಳುತ್ತಿದ್ದರು. ಗೋಪಾಲನ ತಾಯಿ ತನ್ನ ವೃದ್ಧಾಪ್ಯದಲ್ಲಿ ಅನಾರೋಗ್ಯದಿಂದ ನರಳುತ್ತಿದ್ದಾಗ, ನಿವೇದಿತಾ ಅವಳನ್ನು ತನ್ನ ಮನೆಯಲ್ಲಿಟ್ಟುಕೊಂಡು, ಔಷಧೋಪಚಾರ ಮಾಡಿ ಸೇವೆ ಮಾಡಿದಳು. ಅವಳ ಅಂತಿಮ ಕಾಲದಲ್ಲಿ ಅವಳ ಶುಶ್ರೂಷೆ ಮಾಡಲು ಅವಕಾಶ ದೊರೆತಿರುವುದಕ್ಕೆ ತಾನು ಧನ್ಯಳಾದೆ ಎಂದು ನಿವೇದಿತಾ ಭಾವಿಸಿದಳು. ಸ್ವಾಮಿ ಸದಾನಂದರಿಗೆ ತುಂಬಾ ಕಾಯಿಲೆ ಆದಾಗ, ತನ್ನ ಮನೆಯ ಪಕ್ಕದಲ್ಲಿ ಒಂದು ಬಾಡಿಗೆ ಮನೆ ಮಾಡಿ ಅವರನ್ನು ಅಲ್ಲಿರಿಸಿ ಅವರ ಸೇವೆ ಮಾಡಿದಳು. ರೋಗಿಗಳ, ವೃದ್ಧರ ಸೇವೆಯನ್ನು ಮಾಡುವಾಗ ಮನಃಪೂರ್ವಕವಾಗಿ ಅರ್ಪಣಾ ಮನೋಭಾವದಿಂದ ಮಾಡುತ್ತಿದ್ದಳು ನಿವೇದಿತಾ.

೧೯೦೬ರ ಜೂನ್ ಅನಾವೃಷ್ಟಿಯಿಂದಾಗಿ ಬಂಗಾಳದಲ್ಲಿ ಬಹಳ ಶೋಚನೀಯ ಪರಿಸ್ಥಿತಿ ಉಂಟಾಯಿತು. ಊಟಕ್ಕಿಲ್ಲದೆ ಜನ ಕಷ್ಟಪಡುತ್ತಿದ್ದರು. ಅದೇ ವರ್ಷ ಆಗಸ್ಟ್ ತಿಂಗಳಲ್ಲಿ ಅತಿವೃಷ್ಟಿಯಿಂದಾಗಿ ಇದ್ದ ಮನೆಗಳನ್ನು ಕಳೆದುಕೊಂಡರು. ಹಳ್ಳಿಹಳ್ಳಿಗಳು ನೀರಲ್ಲಿ ಮುಳುಗಿದವು. ಜನರು ಮನೆ ಮಠ ಕಳಕೊಂಡು, ಹೊಟ್ಟೆಗೆ ಹಿಟ್ಟಿಲ್ಲದೆ ಸಾವಿರಾರು ಸಂಖ್ಯೆಯಲ್ಲಿ ಸಾವನ್ನಪ್ಪಿದರು. ಮಕ್ಕಳನ್ನು, ಬಂಧುಗಳನ್ನು ಕಳಕೊಂಡ ಜನರ ರೋದನ ನಿವೇದಿತಾಳನ್ನು ತಲ್ಲಣಿಸಿತು. ಆಕೆ ಮೊಳಕಾಲುದ್ದ ನೆರೆ ನೀರಿನಲ್ಲಿ ನಡೆದುಕೊಂಡೇ ಹಳ್ಳಿಹಳ್ಳಿಗಳಿಗೆ ಹೋಗಿ, ಉಳಿದ ಜನರಿಗೆ ಸಾಂತ್ವನ ನೀಡಿ ತನ್ನಿಂದಾದ ಸಹಾಯ ಮಾಡಿದಳು. ಹೀಗೆ ಬಡವರ ಸೇವೆಗೆ ತನ್ನನ್ನೇ ಅರ್ಪಿಸಿಕೊಂಡಳು ನಿವೇದಿತಾ.

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ನಿವೇದಿತಾ ತನ್ನದೇ ಆದ ರೀತಿಯಲ್ಲಿ ಭಾಗವಹಿಸಿದಳು. ತನ್ನ ಶಾಲೆಯಲ್ಲಿ ರಾಷ್ಟ್ರೀಯತೆಯ ಬಗ್ಗೆ ತಿಳಿಯಹೇಳಿದ್ದಲ್ಲದೆ, ಭಾರತದ ಯುವಕರಲ್ಲಿ ರಾಷ್ಟ್ರಪ್ರೇಮವನ್ನು ಹೆಚ್ಚಿಸುವ, ಅವರು ಧೈರ್ಯದಿಂದ ಮುನ್ನುಗ್ಗುವ ಮನೋಭಾವ ಹೊಂದುವ ಭಾಷಣಗಳನ್ನು ಮಾಡಿದಳು. ಮಾತೃಭೂಮಿಗಾಗಿ ತ್ಯಾಗ ಮಾಡಬೇಕೆಂದು ಕರೆಕೊಟ್ಟಳು. **ವಂದೇ ಮಾತರಂ** ಗೀತೆಯ ಮೇಲೆ ನಿಷೇಧ ಇದ್ದರೂ, ತನ್ನ ಶಾಲೆಯ ಮಕ್ಕಳು 'ವಂದೇ ಮಾತರಂ' ಗೀತೆಯನ್ನು ಪ್ರತಿನಿತ್ಯ ಪ್ರಾರ್ಥನಾ ವೇಳೆಯಲ್ಲಿ ಹಾಡುವಂತೆ ನೋಡಿಕೊಂಡಳು. ಯುವಕರಲ್ಲಿ ಜನಜಾಗೃತಿ ಮೂಡಿಸಿ, ರಾಷ್ಟ್ರಪ್ರಜ್ಞೆ, ತ್ಯಾಗ ಮನೋಭಾವ ಬೆಳೆಸುವುದು ಆಕೆಯ ಉದ್ದೇಶವಾಗಿತ್ತು. ತನ್ನ ಭಾಷಣ, ಲೇಖನ ಸಂದರ್ಶನಗಳಿಂದ ಭಾರತೀಯರಲ್ಲಿ ವೈಚಾರಿಕ ಸ್ವಾತಂತ್ರ್ಯ ಮೂಡಿಸುವಲ್ಲಿ ಮತ್ತು ರಾಷ್ಟ್ರೀಯತೆಯನ್ನು ಕೆರಳಿಸುವಲ್ಲಿ ಆಕೆಯ ಪ್ರಯತ್ನ ಶ್ಲಾಘನೀಯ. ಭಾರತೀಯರಲ್ಲಿ ಒಂದಾಗಿರುವ ಆಕೆಯನ್ನು ಯಾರಾದರೂ 'ವಿದೇಶೀ ಮಹಿಳೆ' ಎಂದರೆ ಆಕೆಗೆ ಇಷ್ಟವಾಗುತ್ತಿರಲಿಲ್ಲ.

ಹಿಂದೂ, ಕ್ರೈಸ್ತ, ಮುಸಲ್ಮಾನ, ಬೌದ್ಧ, ಜೈನ, ಸಿಕ್ಖ, ಪಾರ್ಸಿ ಹೀಗೆ ಎಲ್ಲರೂ ರಾಷ್ಟ್ರೀಯತೆಯ ಭಾವನೆಯಲ್ಲಿ ಮುಳುಗಿ ರಾಷ್ಟ್ರ

ನಿರ್ಮಾಣ ಕಾರ್ಯದಲ್ಲಿ ಒಂದಾಗಬೇಕು ಎನ್ನುತ್ತಿದ್ದಳು. ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಕ್ರಾಂತಿಕಾರಿಗಳ ಜತೆ ಸಂಪರ್ಕ ಇಟ್ಟುಕೊಂಡಿದ್ದ ನಿವೇದಿತಾಳ ಮೇಲೆ ಆಂಗ್ಲ ಸರಕಾರಕ್ಕೆ ಸಂದೇಹ ಇತ್ತು. ಅವಳು ಕೆಲವು ಕಾಲ ತಲೆಮರೆಸಿಕೊಂಡಿದ್ದರೂ, ತನ್ನ ಚಲನವಲನ ನಿಲ್ಲಿಸಿರಲಿಲ್ಲ. ತಾನು ಭಾರತಕ್ಕೆ ಬಂದು, ದೀಕ್ಷೆ ತೆಗೆದುಕೊಂಡ ಬಳಿಕ ಧರಿಸುತ್ತಿದ್ದ ಉದ್ದನೆಯ ಬಿಳಿಯ ನಿಲುವಂಗಿ ಮತ್ತು ಸೊಂಟಕ್ಕೆ ಸುತ್ತುತ್ತಿದ್ದ ಕಾವಿ ಪಟ್ಟಿ, ಕುತ್ತಿಗೆಯಲ್ಲಿ ಧರಿಸುತ್ತಿದ್ದ ರುದ್ರಾಕ್ಷಿಮಾಲೆ ಇವುಗಳ ಬದಲು, ತಲೆಮರೆಸಿಕೊಂಡಿದ್ದಾಗ ಅತ್ಯಾಧುನಿಕ ಐರೋಪ್ಯ ಉಡಿಗೆ ಧರಿಸುತ್ತಿದ್ದಳು. ಆದುದರಿಂದ ಪೋಲಿಸರಿಗೆ, ಆಕೆಯ ಪತ್ತೆ ಸಿಗಲಿಲ್ಲ. 'ರಾಷ್ಟ್ರನಿರ್ಮಾಣವೇ ನನ್ನ ಗುರಿ' ಎನ್ನುತ್ತಿದ್ದ ನಿವೇದಿತಾಳಿಗೆ ಭಾರತವೇ ಉಸಿರು. ರಾಷ್ಟ್ರ, ರಾಷ್ಟ್ರೀಯತೆ ಶಬ್ದಗಳನ್ನು ಅವಳು ಮಂತ್ರದಂತೆ ಉಚ್ಚರಿಸುತ್ತಿದ್ದಳು. National Consciousness (ರಾಷ್ಟ್ರಪ್ರಜ್ಞೆ) ಎಂಬ ಪದ ಸಮುಚ್ಚಯವನ್ನು ನಿವೇದಿತಾಳೇ ರೂಪಿಸಿರುವುದು. ಭಾರತದ ಸಮಸ್ಯೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿರುವ ನಿವೇದಿತಾಳ ಬಗ್ಗೆ ರ್‍ಯಾಟ್ ಕ್ಲಿಫ್, ''ಬಂಗಾಳ ಯುವಕರಲ್ಲಿ ಒಂದು ಶಕ್ತಿಯುತ ಸೂಕ್ಷ್ಮ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆ ಬೆಳೆಯುವಲ್ಲಿ ನಿವೇದಿತಾಳ ವ್ಯಕ್ತಿತ್ವ ಮತ್ತು ಪ್ರಖರ ಲೇಖನಿಯ ಪ್ರಭಾವ ದೊಡ್ಡ ಪ್ರಮಾಣದ್ದು'' ಎಂದಿದ್ದಾರೆ. ಶಕ್ತಿ, ಗೌರವದ ಸಂಕೇತವಾದ ವಜ್ರದ ಚಿಹ್ನೆ ಇರುವ, 'ವಂದೇ ಮಾತರಂ' ಮಂತ್ರವನ್ನು ಬರೆದಿರುವ ರಾಷ್ಟ್ರ ಧ್ವಜವನ್ನು ನಿವೇದಿತಾ ತಯಾರಿಸಿದ್ದಳು.

ಆಂಗ್ಲ ಸರಕಾರದ ದಮನ ನೀತಿಯನ್ನು ಕಟುವಾಗಿ ಖಂಡಿಸುತ್ತಾ, ಕ್ರಾಂತಿಕಾರಕ ಭಾಷಣಗಳ ಮೂಲಕ ಯುವಕರ ಮನ ತಲುಪುತ್ತಿದ್ದಳು. ಮಹಿಳೆಯರ ಮುಂದೆ ಮಾತನಾಡುವಾಗ, ''ಭಾರತದ ಕನ್ಯೆಯರೆ, ನೀವೆಲ್ಲರೂ 'ಭರತವರ್ಷ, ಭರತವರ್ಷ, ಭರತವರ್ಷ', 'ತಾಯಿ, ತಾಯಿ, ತಾಯಿ' ಎಂದು ಜಪ ಮಾಡಬೇಕು'' ಎನ್ನುತ್ತಿದ್ದಳು. ನಿವೇದಿತಾಳ ದೇಶಪ್ರೇಮ ಅನುಕರಣೀಯವಾಗಿತ್ತು. ಅವಳ ಮಾತಿನಲ್ಲೇ ಹೇಳುವುದಾದರೆ, ''ನಾವು ಆಶಾವಾದಿಗಳೂ ಅಲ್ಲ, ನಿರಾಶಾವಾದಿಗಳೂ ಅಲ್ಲ, ನಮ್ಮದು ದೃಢ ನಿಶ್ಚಯ. ನಾವು ಅಗ್ರಗಾಮಿಗಳಾಗಿ ಪ್ರಾಣವನ್ನೊಪ್ಪಿಸುವವರು. ನಾವು ನಮ್ಮ ಶರೀರದ ಮೂಲಕ ಸೇತುವೆಯನ್ನು ಸಿದ್ಧಪಡಿಸುತ್ತೇವೆ. ಮುಂದಿನ ಸೈನಿಕರು ಆ ಸೇತುವೆ ಮೇಲೆ ಹಾದು ಹಾದುಹೋಗಿ ಸ್ವಾತಂತ್ರ್ಯದ ವಿಜಯೋತ್ಸವ ಆಚರಿಸುವರು.''

ಒಂದು ಪತ್ರಿಕೆಯಲ್ಲಿ ರಾಷ್ಟ್ರೀಯತೆಯ ಬಗ್ಗೆ ಬರೆಯುತ್ತಾ, ''ಭಾರತ ಒಂದು, ಅದು ಅವಿಭಾಜ್ಯ, ಅಖಂಡ ಎಂಬುದು ನನ್ನ ನಂಬಿಕೆ. ಸಮಾನ ನೆಲೆ, ಸಮಾನ ಆಸಕ್ತಿ, ಸಮಾನ ಪ್ರೇಮ – ಇವುಗಳ ಮೇಲೆ ರಾಷ್ಟ್ರೀಯ ಏಕತೆಯನ್ನು ಕಟ್ಟಬಹುದು. ಭಾರತದ ವರ್ತಮಾನ ಅದರ ಪ್ರಾಚೀನ ಸಂಸ್ಕೃತಿಯಲ್ಲಿ ಬೇರುಬಿಟ್ಟಿದೆ. ಅದರ ಮುಂದೆ ಭವಿಷ್ಯವು ಬೆಳಗುತ್ತಿದೆ.'' ಹೀಗೆ ತನ್ನ ತನು ಮನ ಧನ ಎಲ್ಲವನ್ನೂ ಭರತ ಮಾತೆಗೆ ನಿವೇದಿಸಿದಳು ನಿವೇದಿತಾ.

ಅನೇಕ ಹೆಸರಾಂತ ವಿಜ್ಞಾನಿಗಳು, ಕವಿಗಳು, ರಾಜನೀತಿಜ್ಞರು ಆಕೆಯ ಆಪ್ತ ಸ್ನೇಹಿತರು. ರವೀಂದ್ರನಾಥ ಠಾಕೂರರಿಗೆ ನಿವೇದಿತಾಳ ಮೇಲೆ ಅಪಾರ ಗೌರವ. ಅವರು ಆಕೆಯನ್ನು 'ಲೋಕಮಾತಾ' ಎಂದು ಕರೆದರು.

ತನ್ನ ಗುರು ಸ್ವಾಮಿ ವಿವೇಕಾನಂದರ ಮಾತುಗಳನ್ನು ಸದಾ ಯೋಚಿಸುತ್ತಾ ಅದರಂತೆ ನಡೆಯುತ್ತಿದ್ದ ನಿವೇದಿತಾ, ಅವರನ್ನು ನೋಡಲು ೧೯೦೨ ಜುಲೈ ೨ರಂದು ಬೇಲೂರು ಮಠಕ್ಕೆ ಹೋದಳು. ಆ ದಿನ ಏಕಾದಶಿ. ತಾನು ಉಪವಾಸ ಇದ್ದರೂ ಸ್ವಾಮೀಜಿ ನಿವೇದಿತಾಳಿಗೆ ಊಟ ಮಾಡಿಸಿ, ಕೈತೊಳೆಯಲು ನೀರು ಹಾಕಿದರು. ಬಳಿಕ ಒಂದು ಕರವಸ್ತ್ರದಿಂದ ಅವಳ ಕೈಯನ್ನು ಒರೆಸಿದರು. ತನ್ನ ಗುರು ತನ್ನ ಸೇವೆ ಮಾಡುವುದು ನಿವೇದಿತಾಳಿಗೆ ಇಷ್ಟವಾಗಲಿಲ್ಲ. ಆಗ ಸ್ವಾಮೀಜಿ, ಏಸುಕ್ರಿಸ್ತನು ತನ್ನ ಶಿಷ್ಯರ ಪಾದ ತೊಳೆದಿರುವುದರ ಬಗ್ಗೆ ತಿಳಿಸಿದರು. ನಿವೇದಿತಾ ಇದರಿಂದ ಇನ್ನೂ ಹೆಚ್ಚು ನೊಂದುಕೊಂಡಳು. ಏಸುಕ್ರಿಸ್ತನು ಶಿಲುಬೆಗೇರುವ ಮುನ್ನ ದಿನ ತನ್ನ ಶಿಷ್ಯರ ಪಾದಗಳನ್ನು ತೊಳೆದಿರುವ ವಿಷಯ ಅವಳ ನೆನಪಿಗೆ ಬಂದು, ಆಕೆ ಇನ್ನೂ ಹೆಚ್ಚು ಚಿಂತಿತಳಾದಳು. ಅಂತೆಯೇ ಅದರ ಮಾರನೇ ದಿನ ಸ್ವಾಮಿ ವಿವೇಕಾನಂದರು ದೇಹತ್ಯಾಗ ಮಾಡಿದರು.

ತನ್ನ ಜೀವನದ ಉದ್ದಕ್ಕೂ ಪರಹಿತಕ್ಕಾಗಿ ದುಡಿದು, ಸರ್ವಸ್ವವನ್ನೂ ಭಾರತಾಂಬೆಗೆ ಸಮರ್ಪಿಸಿದ ಪುಣ್ಯಾತ್ಮಳಾದ ನಿವೇದಿತಾ ತಾನು ಬರೆದ ಎಲ್ಲಾ ಪುಸ್ತಕಗಳ ಹಕ್ಕನ್ನು ಬೇಲೂರು ಮಠದ ಟ್ರಸ್ಟಿಗಳಿಗೆ ಕೊಟ್ಟು, ಪುಸ್ತಕ ಮಾರಾಟದಿಂದ ಬರುವ ಆದಾಯವನ್ನು ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಖರ್ಚು ಮಾಡಬೇಕೆಂದು ಬರೆದಿಟ್ಟಳು. ೧೯೧೧ರ ಅಕ್ಟೋಬರ್ ೧೩ರ ಬೆಳಿಗ್ಗೆ ಸೂರ್ಯೋದಯವನ್ನು ನೋಡುತ್ತಾ ಗಾಢ ಧ್ಯಾನದಲ್ಲಿ ಮುಳುಗಿದಳು. ಬುದ್ಧನ ವಿಶ್ವಪ್ರೇಮ ಶಾಂತಿಯ ಪ್ರಾರ್ಥನೆಯನ್ನು ಓದಿದಳು. ರುದ್ರಸ್ತುತಿ, 'ಅಸತ್ಯದಿಂದ ಸತ್ಯದೆಡೆಗೆ, ಅಜ್ಞಾನದಿಂದ ಜ್ಞಾನದೆಡೆಗೆ, ಮೃತ್ಯುವಿನಿಂದ ಅಮೃತತ್ವದೆಡೆಗೆ ನನ್ನನ್ನು ಕರೆದುಕೊಂಡು ಹೋಗು' ಎನ್ನುತ್ತಾ ಕೊನೆಯುಸಿರೆಳೆದಳು ನಿವೇದಿತಾ. ಸೂರ್ಯಾಸ್ತದ ವೇಳೆಗೆ ಹಿಂದೂ ಪದ್ಧತಿಯಂತೆ, ರಾಮಕೃಷ್ಣ ಸಂಸ್ಥೆಯ ಗಣೇನ್ ಮಹಾರಾಜ್ ಶವ ಸಂಸ್ಕಾರ ಮಾಡಿದರು.

ಶವಸಂಸ್ಕಾರ ಮಾಡಿದ ಸ್ಥಳದಲ್ಲಿ ನಿವೇದಿತಾಳ ಸ್ಮರಣಾರ್ಥ ಒಂದು ಸಮಾಧಿಯನ್ನು ನಿರ್ಮಿಸಲಾಗಿದೆ.

''ಇಲ್ಲಿ ತನ್ನದೆಲ್ಲವನ್ನೂ ಭಾರತಕ್ಕೆ ಸಮರ್ಪಿಸಿದ ಸೋದರಿ ನಿವೇದಿತಾ ಶಾಂತಿಯಿಂದ ನಿದ್ರಿಸಿರುವರು''(Here reposes Sister Nivedita, who gave her all to India) ಎಂದು ಸಮಾಧಿಯ ಮೇಲೆ ಬರೆಯಲಾಗಿದೆ.


*ಆಧಾರ ಗ್ರಂಥಗಳು:*

*೧. **ಸೋದರಿ ನಿವೇದಿತಾ** – ಸ್ವಾಮಿ ನಿತ್ಯಸ್ಥಾನಂದ*

*೨. **ನಿವೇದಿತಾ** – ಸ್ವಾಮಿ ಸೋಮನಾಥಾನಂದ*

*೩. **ನಾ ಕಂಡಂತೆ ನನ್ನ ಗುರುದೇವ** – ನಿವೇದಿತಾ* ❖



# ಸೋದರಿ ನಿವೇದಿತಾ ಮತ್ತು ಇತರ ಪಾಶ್ಚಾತ್ಯ ಮಹಿಳೆಯರು

ಮಾತಾ ತ್ಯಾಗಮಯೀ

ಸ್ವಾಮಿ ವಿವೇಕಾನಂದರಿಂದ ಪ್ರಭಾವಿತರಾದ ಅನೇಕ ಮಂದಿ ಪಾಶ್ಚಾತ್ಯ ಮಹಿಳೆಯರ ನಿಕಟ ಸಂಪರ್ಕ ಹೊಂದಿದ್ದ ನಿವೇದಿತಾ, ಅವರೊಂದಿಗೆ ಆತ್ಮೀಯ ಸಂಬಂಧವನ್ನು ಹೊಂದಿದ್ದಳು. ಈ ಕುರಿತು ವಿವೇಚಿಸಿರುವ ಲೇಖಕಿ ಚಳ್ಳಕೆರೆ ಶ್ರೀ ಶಾರದಾಶ್ರಮದ ಮುಖ್ಯಸ್ಥರು. ಉತ್ತಮ ಬರಹಗಾರರೂ, ಅನುವಾದಕರೂ, ವಾಗ್ಮಿಯೂ ಆಗಿರುವ ಅವರು ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ.

ಸ್ವಾಮಿ ವಿವೇಕಾನಂದರನ್ನು ಪ್ರೀತಿಸುವ, ಅವರ ಧ್ಯೇಯ ಉದ್ದೇಶಗಳನ್ನು ಮೆಚ್ಚಿ ಗೌರವಿಸುವ ಹಾಗೂ ಅವರ ಪರಮಪ್ರಿಯ ಭಾರತವನ್ನು ಪ್ರೀತಿಸುವ ಪ್ರತಿಯೊಬ್ಬರೂ ನಿವೇದಿತಾಳಿಗೆ ಪ್ರೀತಿ ಪಾತ್ರರಾಗಿದ್ದರು. ಅವರೆಲ್ಲರೊಂದಿಗೆ ಅವಳು ಭಾವಸಂವಹನವನ್ನು, ಸಂಪರ್ಕವನ್ನು ಹೊಂದಿದ್ದಳು.

ನಿವೇದಿತಾ ೧೮೯೮ ಜ.೨೮ ರಂದು ಭಾರತಕ್ಕೆ ಆಗಮಿಸಿದಳು. ೧೮೯೮ ರ ಫೆಬ್ರುವರಿ ೮ ರಂದು ಸ್ವಾಮಿ ಶಾರದಾನಂದರೊಂದಿಗೆ ಶ್ರೀಮತಿ ಸಾರಾ ಬುಲ್ ಹಾಗೂ ಮಿಸ್. ಮ್ಯಾಕ್ಲಿಯಾಡ್, ಕೆಲವು ತಿಂಗಳ ಮಟ್ಟಿಗೆ ಭಾರತಕ್ಕೆ ಆಗಮಿಸಿದರು. ನಿವೇದಿತಾಳಿಗೆ ಮ್ಯಾಕ್ಲಿಯಾಡ್ ಮೊದಲಿನಿಂದ ಪರಿಚಯ. ಆದರೆ ಸಾರಾಳೊಂದಿಗೆ ಇದು ಮೊದಲ ಭೇಟಿ. ಸರ್ವಸಂಗ ಪರಿತ್ಯಾಗವನ್ನು ಮಾಡಿ ಭಾರತದೇಶಕ್ಕೆ ಆಗಮಿಸಿದ ನಿವೇದಿತಾಳಿಗೆ ಇವರೀರ್ವರ ಸಹಾಯ ಪ್ರೇಮ, ವಾತ್ಸಲ್ಯ ಕೊನೆಯವರೆಗೂ ಇದ್ದಿತು. ನಿವೇದಿತಾಳೂ ಕೊನೆಯವರೆಗೂ ಅವರಿಬ್ಬರೊಂದಿಗೆ ಆತ್ಮೀಯ ಸಂಪರ್ಕವನ್ನು ಹೊಂದಿದ್ದಳು.

ನಿವೇದಿತಾ, ಸಾರಾ ಬುಲ್ ಹಾಗೂ ಮ್ಯಾಕ್ಲಿಯಾಡ್ ಕೆಲವು ತಿಂಗಳುಗಳು ಬೇಲೂರು ಮಠದ ಹಳೆಯ ಕಟ್ಟಡದಲ್ಲಿ ಒಟ್ಟಿಗೆ ವಾಸಿಸಿದ್ದರು. ಸ್ವಾಮಿ ವಿವೇಕಾನಂದರು ಅವರಿಗೆ ಅಲ್ಲಿ ವಾಸಿಸಲು ಕಷ್ಟವಾಗಬಹುದು ಎಂದು ಊಹಿಸಿದ್ದರು. ಆದರೆ ಸ್ವಾಮೀಜಿಯವರ ದಿವ್ಯ ಸನ್ನಿಧಾನದಲ್ಲಿ ದಿನಗಳನ್ನು ಕಳೆಯುತ್ತಿದ್ದ ಅವರು ಮೂವರಿಗೂ ಅಲ್ಲಿನ ಅನಾನುಕೂಲತೆಗಳು, ಕಷ್ಟಗಳು ಯಾವ ಲೆಕ್ಕಕ್ಕೂ ಇರಲಿಲ್ಲ. ಆ ಕಟ್ಟಡದಲ್ಲಿ ಅವಳ ತಪೋಮಯ ಜೀವನದ ಬುನಾದಿ ಭದ್ರವಾಗಿ ಹಾಕಲ್ಪಟ್ಟಿತು. ಮಾರ್ಚ್ ೧೭, ೧೮೯೮ರಂದು ಅವರು ಮೂವರೂ ಗೋಪಾಲೇರ್‌ಮಾಳ ಕಾಮಾರಹಾಟಿಯ ಬಡಕುಟಿಗೆ ಭೇಟಿಯಿತ್ತು, ಪ್ರಾಚೀನ ಭಾರತದ ತಪೋನಿಷ್ಠೆಯನ್ನು ನೋಡಿ ಬೆರಗಾದರು, ಆನಂದಪಟ್ಟರು. ಮೊದಲ ಬಾರಿಗೆ ಶ್ರೀಮಾತೆಯವರನ್ನು ಭೇಟಿಯಾಗಲೂ ಇವರು ಹೋಗಿದ್ದರು. ಶ್ರೀಮಾತೆಯವರು ಈ ಮೂವರು ವಿದೇಶೀ ಮಹಿಳೆಯರೊಂದಿಗೆ ಆಹಾರವನ್ನು ಸೇವಿಸಿದುದು ಸ್ವಾಮಿ ವಿವೇಕಾನಂದರಿಗೆ ಅತೀವ ಆನಂದವನ್ನುಂಟು ಮಾಡಿತ್ತು. ಶ್ರೀಮತಿ ಸಾರಾಳ ಒತ್ತಾಸೆಯ ಮೇರೆಗೆ ಶ್ರೀಮಾತೆಯವರ ಭಾವಚಿತ್ರಗಳನ್ನು ತೆಗೆಯುವಾಗ ನಿವೇದಿತಾ ಹಾಗೂ ಮ್ಯಾಕ್ಲಿಯಾಡ್ ಅಲ್ಲಿದ್ದರು. ಮೇ ೧೮೯೮ರಲ್ಲಿ ಅವರು ಮೂವರೂ ಸ್ವಾಮೀಜಿಯವರೊಡಗೂಡಿ ಆಲ್ಮೋರ, ಕಾಶ್ಮೀರ, ಲಾಹೋರ್, ಲಕ್ನೋ ಪ್ರವಾಸಕ್ಕೆ ಹೋಗಿ ದ್ದರು.



ಸಾರಾ ಬುಲ್



ಮ್ಯಾಕ್ಲಿಯಾಡ್

ತಾನು ಎರಡು ಬಾರಿ ವಿದೇಶಕ್ಕೆ ಹೋದಾಗಲೂ ನಿವೇದಿತಾ ಬೋಸ್ಟನ್ನಿನ ಕೇಂಬ್ರಿಜ್‌ನಲ್ಲಿ ಶ್ರೀಮತಿ ಸಾರಾಳ ಮನೆಯಲ್ಲಿ ವಾಸಿಸಿದ್ದಳು. ಸಾರಾ ನಿವೇದಿತಾಳನ್ನು ತನ್ನ ಪುತ್ರಿಯಂತೆ ಪ್ರೇಮ-ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದಳು. ಅವಳು ತನ್ನ ಕೊನೆಯ ದಿನದವರೆಗೂ ನಿವೇದಿತಾಳ ಹಿತಾಕಾಂಕ್ಷಿಯಾಗಿದ್ದಳು. ನಿವೇದಿತಾ ತನ್ನ ಪ್ರತಿಯೊಂದು ಕಷ್ಟಸುಖಗಳನ್ನು, ಕನಸು ಹೋರಾಟಗಳನ್ನು, ತನ್ನ ಶಾಲೆಯ ಪ್ರಗತಿ ಹಾಗೂ ಎಲ್ಲ ಆಗುಹೋಗುಗಳನ್ನು ಸಾರಾಳೊಂದಿಗೆ ಪತ್ರಮುಖೇನ ಹಂಚಿಕೊಳ್ಳುತ್ತಿದ್ದಳು. ನಿವೇದಿತಾಳ ಪರಿಚಿತ ಪ್ರತಿಭಾನ್ವಿತ ಭಾರತೀಯರ ವಲಯಕ್ಕೆ ಸಾರಾಳ ಕೇಂಬ್ರಿಜ್‌ನ ಮನೆ ಆತಿಥೇಯ ಸ್ಥಾನವಾಗಿತ್ತು. ನಿವೇದಿತಾಳ ಶಾಲೆಯನ್ನು ಪ್ರಾರಂಭಿಸಿ ಮುನ್ನಡೆಸಲು ಪ್ರಧಾನವಾದ ಧನಸಹಾಯ ಅವಳದು. ಸರ್ ಜಗದೀಶಚಂದ್ರ ಬೋಸರ ವಿಜ್ಞಾನ ಸಂಶೋಧನೆಗಳನ್ನು ಕುರಿತು ನಿವೇದಿತಾ ಸಂಪಾದಿಸಿದ ಗ್ರಂಥವನ್ನು ಪ್ರಕಟಿಸಲು ಪ್ರಧಾನ ಸಹಾಯ ಅವಳದು. ಅವಳು ನಿವೇದಿತಾಳ ಹಲಕೆಲವು ಮುಂದಿನ ಯೋಜನೆಗಳಿಗೆ ಸಹಾಯವನ್ನು ಮಾಡಲು ಸಿದ್ಧಳಾಗಿದ್ದಳು. ಶ್ರೀಮತಿ ಸಾರಾ ತನ್ನ ಅಂತಿಮ ದಿನಗಳಲ್ಲಿ ನಿವೇದಿತಾ ತನ್ನೊಡನಿರಬೇಕೆಂದು ಬಯಸಿದಾಗ ಅವಳು ತನ್ನೆಲ್ಲ ಕಾರ್ಯಗಳನ್ನು ಮೊಟಕುಗೊಳಿಸಿ ವಿದೇಶಕ್ಕೆ

ಹೋಗಿ ಅವಳ ಅಂತಿಮ ದಿನದವರೆಗೂ ಅವಳ ಜೊತೆಯಲ್ಲಿದ್ದಳು. ನಿವೇದಿತಾಳ ಕಾರ್ಯ ಸಾರಾಳ ಸಹಾಯವನ್ನು ಆಶ್ರಯಿಸಿದ್ದರಿಂದ ೧೯೧೧ರಲ್ಲಿ ಅವಳು ಮೃತಳಾದಾಗ ನಿವೇದಿತಾಳಿಗೆ ಅದು ಆರ್ಥಿಕವಾಗಿಯೂ, ಭಾವನಾತ್ಮಕವಾಗಿಯೂ ದೊಡ್ಡ ಆಘಾತವಾಗಿತ್ತು. ತನ್ನ ಹೃದಯಾಂತರಾಳದ ಭಾವನೆಗಳನ್ನು, ತನ್ನ ಕನಸು ಹಾಗೂ ಹೋರಾಟಗಳನ್ನು ಅವಳು ವಿಶೇಷವಾಗಿ ಹಂಚಿಕೊಂಡಿದ್ದು ಸಾರಾ ಹಾಗೂ ಮ್ಯಾಕ್ಲಿಯಾಡ್ ಜೊತೆಯಲ್ಲಿ. ಶ್ರೀಮತಿ ಬುಲ್‌ಗೆ ಅವಳು ಒಂದು ಪತ್ರದಲ್ಲಿ ಬರೆಯುತ್ತಾಳೆ. ''About my books, you know they are all Swamiji's. He gave me the power and inspiration.''* – 'ನನ್ನ ಕೃತಿಗಳನ್ನು ಕುರಿತು ಹೇಳುವುದಾದರೆ ಅವೆಲ್ಲವೂ ಸ್ವಾಮೀಜಿಯವರ ಚಿಂತನೆಗಳು ಎಂಬುದನ್ನು ನೀನು ಬಲ್ಲೆ. ನನಗೆ ಶಕ್ತಿಯನ್ನು, ಸ್ಫೂರ್ತಿಯನ್ನು ತುಂಬಿದವರು ಅವರು.'

ಮ್ಯಾಕ್ಲಿಯಾಡ್ ನಿವೇದಿತಾಳ ಕಾರ್ಯದಲ್ಲಿ ಯಥೇಷ್ಟವಾಗಿ ಧನಸಹಾಯವನ್ನು ಮಾಡಿದಳು. ಮೇಲಾಗಿ ಅವಳ ಏಕಾಂಗಿ ಹೋರಾಟ, ಕಂಬನಿಯ ದಿನಗಳಲ್ಲಿ 'ಜಗವೆಲ್ಲ ಎದುರಾಗೆ' ಅವಳೊಡನಿದ್ದು ಧೈರ್ಯ-ಸಾಂತ್ವನಗಳನ್ನು ತುಂಬಿದವಳು ಮ್ಯಾಕ್ಲಿಯಾಡ್. ನಿವೇದಿತಾಳ ಉದಾತ್ತ ಧ್ಯೇಯಾದರ್ಶಗಳನ್ನು ಅರ್ಥಮಾಡಿಕೊಂಡು ಅವನ್ನು ಪ್ರೀತಿಸುವ ಹೃದಯ ಮ್ಯಾಕ್ಲಿಯಾಡ್ ಳದಾಗಿತ್ತು. ಸ್ವಾಮೀಜಿ ಯವರ ಕಾರ್ಯದಲ್ಲಿ ಇಬ್ಬರಿಗೂ ಇನ್ನಿಲ್ಲದ ಪ್ರೀತಿ-ಉತ್ಸಾಹವಿದ್ದಿತು. ಅದು ಅವರಿಬ್ಬರನ್ನು ಒಂದುಗೂಡಿಸಿತು. ನಿವೇದಿತಾ ಅವಳಿಗೆ ಬರೆದ ಪತ್ರಗಳಲ್ಲಿ ಅವರಿಬ್ಬರ ಸಂಬಂಧದ ಘನಿಷ್ಠತೆಯನ್ನು ಗಮನಿಸಬಹುದು – ನಿವೇದಿತಾ ತನ್ನ ದಿನಚರಿಯ ಪುಟಗಳನ್ನು ತೆರೆದಿಟ್ಟದ್ದು ಅವಳೊಂದಿಗೆ. ಸ್ವಾಮೀಜಿಯವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಚಿತ್ರಿಸಿದ್ದು ಅವಳೊಂದಿಗೆ. ಶ್ರೀಮಾತೆಯವರೊಂದಿಗಿನ ತನ್ನ ಭೇಟಿಗಳನ್ನು ವರ್ಣಿಸಿದ್ದು ಈ ಪತ್ರಗಳಲ್ಲಿ. ತನ್ನ ಶಾಲೆ ಯನ್ನು ಕಟ್ಟಿ ನಿಲ್ಲಿಸುವಲ್ಲಿ ತಾನು ಎದುರಿಸಿದ ಹೋರಾಟಗಳು, ಅಲ್ಲಿನ ಸ್ವಾರಸ್ಯಕರ ದೃಶ್ಯಗಳು, ಭಾರತೀಯ ಸಂಸ್ಕೃತಿಯ ಸೂಕ್ಷ್ಮಗಳು, ಭಾರತೀಯ ಹೃದಯದ ವೈಶಾಲ್ಯವನ್ನು ಬಿಡಿಸಿ ತೋರಿದ್ದು ಈ ಪತ್ರಗಳಲ್ಲಿ. ಒಂದು ಪತ್ರದಲ್ಲಿ ಅವಳು ಮ್ಯಾಕ್ಲಿಯಾಡ್‌ಗೆ ಬರೆಯು ತ್ತಾಳೆ, ''Shall I be allowed to see that I was of some use to Swamiji? I only wanted to be allowed to carry his burden for him...I don't care least about the mukti''** 'ನನಗೆ ಒಂದೇ ಬೇಕಾಗಿರುವುದು, ನಾನು ಸ್ವಾಮೀಜಿಯವರ ಉಪಯೋಗಕ್ಕೆ ಬರುವಂತಾಗಲಿ. ಅವರ ಭಾರವನ್ನು ನಾನು ಹೊರುವಂತಾಗಬೇಕು. ಅದೊಂದೇ ನನಗೆ ಬೇಕು.. ಮುಕ್ತಿಯೂ ನನಗೆ ಬೇಡ.' ಇದು ಅವಳ ನಿಲುವು.

ನಿವೇದಿತಾ ಭಾರತದ ತನ್ನ ಶಾಲೆಗೆ ಧನಸಂಗ್ರಹಕ್ಕೆ ಅಮೆರಿಕ-ಯುರೋಪಿಗೆ ಹೋದಾಗ ಡೆಟ್ರಾಯಿಟ್‌ನಲ್ಲಿ ಅವಳಿಗೆ ನೆರವಾದವಳು ಸ್ವಾಮೀಜಿಯವರ ಶಿಷ್ಯೆಯಾದ ಕ್ರಿಸ್ಟೀನ್ ಗ್ರೀನ್‌ಸ್ಟೈಡಲ್. ೧೯೦೨ ಎಪ್ರಿಲ್‌ನಲ್ಲಿ ಅವಳು ನಿವೇದಿತಾಳ ಶಾಲಾಕಾರ್ಯದಲ್ಲಿ ನೆರವಾಗಲು ಸ್ವಾಮೀಜಿಯವರ ಅನುಜ್ಞೆ ಹಾಗೂ ಆಶೀರ್ವಾದದೊಂದಿಗೆ ಭಾರತಕ್ಕೆ ಆಗಮಿಸಿದಳು. ಅವಳ ತ್ಯಾಗ ಮತ್ತು ಸೇವಾ ಪ್ರವೃತ್ತಿಯನ್ನು ಸ್ವಾಮೀಜಿಯವರು ಮೆಚ್ಚಿದ್ದರು. ಅವಳ ಆಗಮನದ ತರುವಾಯ ನಿವೇದಿತಾಳ ಶಾಲೆಯ ಹೆಚ್ಚಿನ ಜವಾಬ್ದಾರಿಯನ್ನು ಅವಳು ತೆಗೆದುಕೊಂಡಳು. ಕ್ರಿಸ್ಟೀನಾಳದು ಶಾಂತ, ಸಹನಶೀಲ ಸ್ವಭಾವ, ನಿವೇದಿತಾಳದು ದಿಟ್ಟ, ರಜೋಗುಣಪೂರ್ಣ ಕರ್ಮಶೀಲ ಸ್ವಭಾವ. ಆದರೂ ಇಬ್ಬರೂ ಉತ್ತಮ ಸ್ನೇಹಿತೆಯರಾದರು. ಬಾಗಬಜಾರಿನಲ್ಲಿದ್ದ ಅವರ ಪುಟ್ಟ ಬಾಡಿಗೆ ಮನೆ – house of sisters ಎಂದು ಕರೆಯಲ್ಪಟ್ಟಿತು. ಭಾರತದ ಸ್ವಾತಂತ್ರ್ಯಕ್ಕಾಗಿ ಶ್ರಮಿಸಿದ ಪ್ರತಿಯೊಬ್ಬ ಸಮಕಾಲೀನ ಕ್ರಾಂತಿಕಾರಿಗಳು, ದೇಶಭಕ್ತರು ಹಾಗೂ ಕೆಲವು ವಿಜ್ಞಾನಿಗಳು, ಚಿತ್ರಕಲಾವಿದರು ಈ ಮನೆಗೆ ಭೇಟಿನೀಡಿ ನಿವೇದಿತಾಳ ಸ್ಫೂರ್ತಿಯನ್ನು ಬೆಂಬಲವನ್ನು ಪಡೆಯುವಂತಾಯಿತು. ನಿವೇದಿತಾ ಈ ಎಲ್ಲ ಚಟುವಟಿಕೆಗಳಲ್ಲಿ ಭಾಗವಹಿಸಲು ಕ್ರಿಸ್ಟೀನಾಳ ಸಹಕಾರ ದೊಡ್ಡದು.


ಕ್ರಿಸ್ಟೀನ್ ಗ್ರೀನ್‌ಸ್ಟೈಡಲ್

ಶೈಕ್ಷಣಿಕ ಕ್ಷೇತ್ರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುವಲ್ಲಿ ಇಬ್ಬರೂ ಸಮಾನ ಆಸಕ್ತಿ ಹಾಗೂ ಅರಿವನ್ನು ಹೊಂದಿದವರಾಗಿದ್ದರು. ಬಾಲಕಿಯರ ಶಾಲೆಯನ್ನು ಆರಂಭಿಸಿದ ತರುವಾಯ ನಿವೇದಿತಾ ಅದೇ ಮನೆಯಲ್ಲಿ ಪ್ರೌಢ ಮಹಿಳೆಯರಿಗಾಗಿ ಒಂದು ಶಾಲೆಯನ್ನು ಆರಂಭಿಸಿದಳು. ಆ ಶಾಲೆಯನ್ನು ಆರಂಭಿಸಿ ನಡೆಸಿಕೊಂಡು ಹೋಗುವಲ್ಲಿ ಕ್ರಿಸ್ಟೀನಾಳ ಪರಿಶ್ರಮ ವಿಶೇಷ ಮಟ್ಟದ್ದಾಗಿತ್ತು. ಕ್ರಿಸ್ಟೀನಾ ಅಲ್ಲಿ ವಾರದಲ್ಲಿ ಎರಡು ದಿನ ಹೊಲಿಗೆ ಹಾಗೂ ಕಸೂತಿಯನ್ನು ಕಲಿಸಿಕೊಡುತ್ತಿದ್ದಳು. ಭಾರತೀಯ ತಾಯಂದಿರು ಅಕ್ಷರವಿದ್ಯೆ, ಭಾರತೀಯ ಸಂಸ್ಕೃತಿಯ ಮೌಲ್ಯಗಳ ಜೊತೆಯಲ್ಲಿ ಸ್ವಾವಲಂಬಿಯಾಗುವುದನ್ನೂ ಕಲಿಯಬೇಕು ಎಂಬುದು ಅವರಿಬ್ಬರ ಉದ್ದೇಶವಾಗಿತ್ತು. ಈ ಕಾರ್ಯದಲ್ಲಿ ತನ್ನನ್ನು ಪೂರ್ಣವಾಗಿ ತೊಡಗಿಸಿಕೊಂಡ ಕ್ರಿಸ್ಟೀನಾಳ ಯೋಗದಾನವನ್ನು ನಿವೇದಿತಾ ಹೃತ್ಪೂರ್ವಕವಾಗಿ ಕೊಂಡಾಡುತ್ತಾಳೆ. ೧೯೦೭ ರಿಂದ ಎರಡು ವರ್ಷ ನಿವೇದಿತಾ ವಿದೇಶಕ್ಕೆ ಹೋದಾಗ ಶಾಲೆಯನ್ನು ಜವಾಬ್ದಾರಿಯಿಂದ ಹಾಗೂ ಮುತುವರ್ಜಿಯಿಂದ ನೋಡಿಕೊಂಡವಳು ಕ್ರಿಸ್ಟೀನಾ. ಕ್ರಿಸ್ಟೀನಾ ಕುರಿತು ನಿವೇದಿತಾ ಆದರದಿಂದ ಮ್ಯಾಕ್ಲಿಯಾಡ್‌ಗೆ ಪತ್ರದಲ್ಲಿ ಬರೆಯುತ್ತಾಳೆ: ''ಸ್ವಾಮೀಜಿ ನನ್ನ ಕುರಿತು ಕಂಡ ಕನಸುಗಳನ್ನೆಲ್ಲ ಅವಳು ಪೂರ್ಣಗೊಳಿಸುತ್ತಿದ್ದಾಳೆ. ಶಾಲೆಯ ಕುರಿತಾಗಿಯೂ.. ಅದು ನನಗೆ ಸೇರಬೇಕಾದುದಲ್ಲ, ಅವಳಿಗೆ ಸೇರಬೇಕಾದುದು.''

ಸೋದರಿ ದೇವಮಾತಾ – ಸ್ವಾಮಿ ವಿವೇಕಾನಂದರ ಶಿಷ್ಯೆ, ಅವಳು ಮದ್ರಾಸಿನಲ್ಲಿ ವಾಸಿಸುತ್ತಿದ್ದಳು. ಅವಳು ೧೯೦೯ರಲ್ಲಿ

* 'Sister Nivedita' : *Pravrajika Atmaprana, Page 94*

** 'Sister Nivedita': *Pravrajika Atmaprana, Page 286*

ಕಲ್ಕತ್ತೆಗೆ ಬಂದಾಗ, ನಿವೇದಿತಾಳ ಮನೆಯಲ್ಲಿ ವಾಸಿಸುತ್ತಿದ್ದಳು. ಅವಳು ತನ್ನ 'Days in an Indian Monastery' ಕೃತಿಯಲ್ಲಿ ನಿವೇದಿತಾಳ ಬಿಡುವಿಲ್ಲದ ಬರವಣಿಗೆಗಳ ಕುರಿತು ಸ್ತುತ್ಯವಾಗಿ ಬರೆದಿದ್ದಾಳೆ.

೧೯೦೭ರಲ್ಲಿ ಶ್ರೀಮತಿ ಚಾರ್ಲಟ್ ಸೇವಿಯರ್ ಕಲ್ಕತ್ತೆಗೆ ಬಂದಾಗ ನಿವೇದಿತಾಳ ಮನೆಯಲ್ಲಿ ವಾಸಿಸಿದ್ದಳು. ನಿವೇದಿತಾ ಹಾಗೂ ಕ್ರಿಸ್ಟೀನಾ ಅವಳ ಆಮಂತ್ರಣದ ಮೇರೆಗೆ ಎರಡು ಬಾರಿ ಮಾಯಾವತಿಯ ಮೌನ ಅದ್ವಯ ಸಾಮ್ರಾಜ್ಯಕ್ಕೆ ಭೇಟಿ ನೀಡಿ ಅಲ್ಲಿನ ಸಂಪದವನ್ನು ಧರಿಸಿಕೊಂಡು ಬಂದಿದ್ದರು. ಸ್ವಾಮಿ ಸ್ವರೂಪಾನಂದರ The Gita ಗ್ರಂಥದ ಕರಡು ಪ್ರತಿಯನ್ನು ಶ್ರೀಮತಿ ಸೇವಿಯರ್ ಹಾಗೂ ನಿವೇದಿತಾ ಸೇರಿ ತಿದ್ದುಪಡಿಯನ್ನು ಮಾಡಿದರು.



ದೇವಮಾತಾ

ನಿವೇದಿತಾ ವಿದೇಶಕ್ಕೆ ಹೋಗಿದ್ದಾಗ ಬೇಲೂರು ಮಠದ ಆದೇಶದಂತೆ ಸ್ವಾಮಿ ವಿವೇಕಾನಂದರು ಬರೆದ ಪತ್ರಗಳನ್ನು ದೇವಮಾತಾ ಸಂಗ್ರಹಿಸುತ್ತಿದ್ದಳು. ಮೇರಿ ಹೇಲ್, ತನಗೆ ಹಾಗೂ ತನ್ನ ಕುಟುಂಬದವರಿಗೆ ಸ್ವಾಮೀಜಿಯವರಿಂದ ಬಂದಂತಹ ಎಲ್ಲ ಪತ್ರಗಳನ್ನು ನಿವೇದಿತಾಳಿಗೆ ನೀಡಿ ಸ್ವಾಮಿ ವಿವೇಕಾನಂದರ ಪತ್ರಮಾಲೆಯನ್ನು ಹೊರತರಲು ಸಹಕರಿಸಿದಳು.

ಶ್ರೀಮತಿ ಲೆಗೆಟ್, ನಿವೇದಿತಾ ಅಮೆರಿಕಕ್ಕೆ ಬಂದಿದ್ದಾಗ, ಅವಳಿಗೆ ೧೦೦೦ ಡಾಲರ್‌ಗಳನ್ನು ನೀಡಿ ಶಾಲೆಯನ್ನು ಪ್ರಾರಂಭಿಸಲು ಸಹಾಯ ಮಾಡಿದಳು. ನಿವೇದಿತಾ ಶಾಲೆಯ ಯಶಸ್ಸಿನ ದಿನಗಳನ್ನು ಕುರಿತು ಶ್ರೀಮತಿ ಲೆಗೆಟ್‌ಗೆ ಪತ್ರವನ್ನು ಬರೆದಿರುತ್ತಾಳೆ. ತಾನು ಎರಡು ಬಾರಿ ಪ್ಯಾರಿಸಿಗೆ ಹೋದಾಗಲೂ ಶ್ರೀಮತಿ ಲೆಗೆಟ್‌ನ್ನು ಭೇಟಿಯಾಗಿ ಬಂದಿರುತ್ತಾಳೆ.

ನಿವೇದಿತಾ ಅಮೆರಿಕದ ಶ್ರೀಮತಿ ಸಾರಾ ಫಾರ್ಮರ್, ಮೇರಿ ಫಂಕೆ, ಎಮ್ಮಾ ಥರ್ಸಬಿ, ಮೇಡಮ್ ಕಾಲ್ವೆ ಮತ್ತು ಸ್ವಾಮೀಜಿಯವರನ್ನು ಭೇಟಿಯಾದ ಇತರ ಮಹಿಳೆಯರೊಂದಿಗೆ ಪರಿಚಯವನ್ನು ಹೊಂದಿದ್ದಳು. ಹಲವು ಸಂದರ್ಭಗಳಲ್ಲಿ ಅವರನ್ನು ಭೇಟಿಯಾಗಿದ್ದಳು ಕೂಡ.

ಶ್ರೀಮತಿ ನೆಲ್ ಹ್ಯಾಮಂಡ್‌ಳಿಗೆ ನಿವೇದಿತಾ ಹಲವು ಪತ್ರಗಳನ್ನು ಬರೆದಿದ್ದಳು. ಸ್ವಾಮೀಜಿಯವರ ಮುಖ್ಯ ಉದ್ದೇಶ ಶಿಕ್ಷಣ ಎಂದು ಆಕೆ ಆ ಪತ್ರದಲ್ಲಿ ತಿಳಿಸಿದ್ದಳು. ಅಂತೆಯೇ ತಾನು ಶ್ರೀಮಾತೆಯವರನ್ನು ಭೇಟಿಯಾದ ಘಟನೆಯನ್ನು ಅವಳಿಗೆ ವರ್ಣಿಸಿ ಬರೆದಿದ್ದಳು.

ಕುಮಾರಿ ಹೆನ್ರಿಟಾ ಮುಲ್ಲರ್ ನಿವೇದಿತಾಳಿಗೆ ಲಂಡನ್ನಿನಲ್ಲಿದ್ದಾಗಿನಿಂದಲೂ ಪರಿಚಯ. ಅವಳು ಭಾರತಕ್ಕೆ ಬಂದಾಗಲೂ ಕೆಲವು ದಿನ ನಿವೇದಿತಾ ಅವಳೊಂದಿಗೆ ವಾಸಿಸಿದ್ದಳು. ದಕ್ಷಿಣೇಶ್ವರಕ್ಕೆ ಮೊದಲ ಬಾರಿ ಅವರಿಬ್ಬರೂ ಒಟ್ಟಿಗೆ ಹೋಗಿದ್ದರು. ಹೆನ್ರಿಟಾ ಸ್ವಾಮೀಜಿಯವರ ಸಂಪರ್ಕವನ್ನು ಹಲವು ಮೂರ್ಖ ಕಾರಣಗಳಿಂದ ಬಿಟ್ಟಾಗ ನಿವೇದಿತಾಳ ಸಂಪರ್ಕವೂ ಕಡಿದು ಹೋಗಿರಬಹುದೆಂದು ನಾವು ಊಹಿಸಬಹುದು.

ಈ ವಿದೇಶೀಯ ಮಹಿಳೆಯರೆಲ್ಲ ನಿವೇದಿತಾಳಿಗೆ ಸಹಾಯ-ಸಹಕಾರ-ಪ್ರೋತ್ಸಾಹವನ್ನು ನೀಡಬೇಕಾದರೆ ನಿವೇದಿತಾಳೂ ಅವರಿಗೆ ನೀಡಿದ ಪ್ರೇಮ-ವಿಶ್ವಾಸ ಆತ್ಮೀಯತೆಯೂ ಅಷ್ಟೇ ದೊಡ್ಡದೆಂಬುದನ್ನು ನಾವು ಅರ್ಥಮಾಡಿಕೊಳ್ಳಬಹುದು. ಸ್ವಾಮೀಜಿಯವರನ್ನು ಕೇಂದ್ರೀಕರಿಸಿ ಈ ಎಲ್ಲ ಸಂಬಂಧಗಳು ಬೆಳೆದು ಸುಪುಷ್ಟವಾದವುಗಳು ಎಂಬುದು ನಿವೇದಿತಾಳ ಗುರುಭಕ್ತಿಯನ್ನು ಸೂಚಿಸುತ್ತದೆ. ❖

## ಹಿಂದೂಧರ್ಮ

ಆಧ್ಯಾತ್ಮಿಕ ಸತ್ಯದ ಆಧಾರದ ಮೇಲೆ ಹಿಂದೂಧರ್ಮ ನಿಂತಿರುವುದು. ಜೀವಾತ್ಮನಿಗೆ ತೋರುವ ಮಾರ್ಗವೇ ಆಧ್ಯಾತ್ಮಿಕ ಅನುಭವ, ಇದೇ ಹಿಂದೂ ಧರ್ಮದ ಪ್ರಮಾಣ ಎಂದು ಸ್ವಾಮೀಜಿ ಹೇಳಿದರು. ಆಧ್ಯಾತ್ಮಿಕ ಅನುಭವ, ಇದೇ ಹಿಂದೂ ಧರ್ಮದ ಪ್ರಮಾಣ ಎಂದು ಸ್ವಾಮೀಜಿ ಹೇಳಿದರು. ಆಧ್ಯಾತ್ಮಿಕ ಜೀವನದ ನಿಯಮಾವಳಿಯ ಅನುಭವವೇ ಎಲ್ಲಾ ಶಾಸ್ತ್ರಗಳಿಗೂ ಪ್ರಮಾಣ. ಇದನ್ನೇ ವೇದ ಎನ್ನುವುದು. ಇದನ್ನು ಜೈನರು ಒಪ್ಪಲಿಲ್ಲ. ಆದರೂ ಅವರೂ ಕೂಡ ಹಿಂದೂಗಳಂತೆಯೇ. ಏಕೆಂದರೆ ಸತ್ಯವಾಗಿರುವುದೆಲ್ಲ ವೇದ. ಜೈನರೂ ಕೂಡ ತಾವು ಯಾವುದನ್ನು ಸತ್ಯವೆಂದುಕೊಂಡಿರುವರೋ ಅದಕ್ಕೆ ಅಧೀನರು. ಹಿಂದೂ ಧರ್ಮದ ಸೀಮೆಯನ್ನು ಅವರು ವಿಸ್ತರಿಸಿದರು. ಹಿಂದೂಧರ್ಮ ತನ್ನ ವಿಶಾಲ ವಕ್ಷಸ್ಥಲದಲ್ಲಿ ಎಲ್ಲರಿಗೂ ಆಶ್ರಯ ನೀಡಿತು.

ಶಾಸ್ತ್ರದೃಷ್ಟಿಯಿಂದ ನೋಡಿದರೂ ಕೂಡ ಧರ್ಮದ ಇತಿಹಾಸದಲ್ಲಿ ವೇದದ ಮಹಿಮೆ ಎಣೆಯಿಲ್ಲದುದು. ಇದು ಬರೀ ಪುರಾತನವಾದುದು ಎಂದು ಮಾತ್ರ ಅಲ್ಲ. ಏಕೆಂದರೆ, ಪೃಥ್ವಿಯಲ್ಲಿರುವ ಅಧಿಕಾರಯುತವಾದ ಶಾಸ್ತ್ರದಲ್ಲೆಲ್ಲಾ ಇದೊಂದೇ ಮಾನವನು ಎಲ್ಲಾ ಧರ್ಮಗ್ರಂಥಗಳಿಗು ಅತೀತನಾಗಿ ಹೋಗಬೇಕೆಂದು ಸಾರುವುದು.

**-ಸೋದರಿ ನಿವೇದಿತಾ** *('ನಾ ಕಂಡಂತೆ ನನ್ನ ಗುರುದೇವ', ಪು. ೧೪೫)*

# ಭಾರತೀಯ ಆದರ್ಶಗಳನ್ನು ಸ್ವೀಕರಿಸುವಲ್ಲಿ ನಿವೇದಿತಾ ಹೋರಾಟಗಳು

**ಡಾ. ಇ. ವಸಂತ ಕುಮಾರ್**

ಸೋದರಿ ನಿವೇದಿತಾ ಬದುಕೇ ಒಂದು ಕೊನೆಯಿಲ್ಲದ ಹೋರಾಟವಾಗಿತ್ತು ಎನ್ನಬಹುದು. ಅವಳು ಭಾರತಕ್ಕೆ ಬರುವ ಮೊದಲೇ ಬದುಕಿನಲ್ಲಿ ಹಲವು ಬಗೆಯ ಸವಾಲುಗಳನ್ನು ಎದುರಿಸಬೇಕಾಗಿ ಬಂತು. ಸ್ವಾಮಿ ವಿವೇಕಾನಂದರ ಸಂಪರ್ಕಕ್ಕೆ ಬಂದ ನಂತರ ಅವಳ ಬದುಕಿನ ಗತಿಯೇ ಬದಲಾಯಿತು. ಹೊಸ ಆದರ್ಶ, ಹೊಸ ನಂಬಿಕೆ ಹಾಗೂ ಹೊಸ ಜೀವನಮಾರ್ಗವನ್ನು ತುಳಿಯಬೇಕಾಗಿ ಬಂದಾಗ ಸಹಜವಾಗಿ ಆಕೆ ಮಾನಸಿಕ, ಬೌದ್ಧಿಕ ಹಾಗೂ ಆಧ್ಯಾತ್ಮಿಕ ಸಂಘರ್ಷಗಳನ್ನು ಎದುರಿಸಿದಳು. ಈ ಕುರಿತು ವಿಶ್ಲೇಷಿಸುವ ಲೇಖಕರು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರು. ಶ್ರೀರಾಮಕೃಷ್ಣ ಆಶ್ರಮದ ಭಕ್ತರಾಗಿರುವ ಅವರು 'ವಿವೇಕಪ್ರಭ'ದಲ್ಲಿ ಅನೇಕ ಲೇಖನಗಳನ್ನು ಬರೆದಿದ್ದಾರೆ.

ನಿವೇದಿತಾ ಭಾರತಕ್ಕೆ ಬಂದಾಗ ಆಕೆಯ ವಯಸ್ಸು ೩೦ ವರ್ಷಗಳು. ನಂತರ ಆಕೆ ಜೀವಿಸಿದ್ದುದು ೧೪ ವರ್ಷಗಳು ಮಾತ್ರ. ಅದರಲ್ಲಿ ನಾಲ್ಕು ವರ್ಷಗಳಷ್ಟು ಕಾಲ ಭಾರತದ ಹೊರಗೆ ಮೂರು ಬಾರಿ ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಿಗೆ, ಕಲ್ಕತ್ತೆಯಲ್ಲಿ ಆಕೆ ಪ್ರಾರಂಭಿಸಿದ್ದ ಹೆಣ್ಣು ಮಕ್ಕಳ ಶಾಲೆಯನ್ನು ನಡೆಸಲು ಹಣ ಸಂಗ್ರಹಣೆಗಾಗಿ ಹೋಗಿದ್ದಳು. ಉಳಿದ ಸುಮಾರು ೧೦ ವರ್ಷಗಳಲ್ಲಿ ಆಕೆ ಸಾಧಿಸಿದ ಗುರಿಗಳು, ಮಾಡಿದ ಕಾರ್ಯಗಳು ಮತ್ತು ಹೋರಾಟಗಳು ಅನೇಕ. ಭಾರತೀಯರ ಜನಜೀವನ, ಅವರ ಧರ್ಮ, ಅದರ ಸಿದ್ಧಾಂತಗಳು, ಅವರ ನಂಬಿಕೆ, ಧರ್ಮಾಚರಣೆ, ನಿತ್ಯಜೀವನ - ಇವನ್ನೆಲ್ಲಾ ಅರ್ಥ ಮಾಡಿಕೊಳ್ಳುವುದು, ಇವಕ್ಕೆ ಸಂಬಂಧಿಸಿದ ಪುರಾಣಗಳು, ನೀತಿಕಥೆಗಳು, ಹಿಂದೂ ಧರ್ಮದ ಮುಖ್ಯ ಗ್ರಂಥಗಳೆನಿಸಿದ ಭಗವದ್ಗೀತೆ, ಉಪನಿಷತ್ತುಗಳು ಇವನ್ನೆಲ್ಲ ಆಳವಾಗಿ ಅಧ್ಯಯನ ಮಾಡುವುದು, ಇವುಗಳ ಮೇಲೆ ಪ್ರವಚನ ಮಾಡುವುದು, ಲೇಖನ ಮತ್ತು ಪುಸ್ತಕಗಳನ್ನು ಬರೆಯುವುದು, ದೇಶದಾದ್ಯಂತ ಸಂಚರಿಸಿ ಅಂದಿನ ಕಾಲದಲ್ಲಿ ಇದ್ದ ಗಣ್ಯ, ಪ್ರಭಾವಿ ವ್ಯಕ್ತಿಗಳನ್ನು ಭೇಟಿ ಮಾಡುವುದು - ಇವನ್ನೆಲ್ಲಾ ಮಾಡಿದಳು. ಇದನ್ನು ನೋಡಿದಾಗ, ಪಾಶ್ಚಾತ್ಯ ಮಹಿಳೆಯೊಬ್ಬಳು ಮೇಧಾವಿ ಭಾರತೀಯರನ್ನು ದಿಗ್ಭ್ರಮೆಗೊಳಿಸುವಷ್ಟು ವೈವಿಧ್ಯತೆಯಿರುವ ಭಾರತ ದೇಶವನ್ನು ಭಾರತೀಯರಿಗಿಂತಲೂ ಚೆನ್ನಾಗಿ ಅರ್ಥ ಮಾಡಿಕೊಳ್ಳಲು ಹೇಗೆ ಸಾಧ್ಯವಾಯಿತೆಂದು ವಿಸ್ಮಯಪಡುವಂತಾಗುವುದು. ಇವೆಲ್ಲಕ್ಕೂ ಕಿರೀಟಪ್ರಾಯವಾಗಿರುವಂತೆ ಆಕೆ ಭಾರತೀಯರಿಗೆ ಮಿಗಿಲಾದ ಭಾರತೀಯಳಾಗಿ ಭಾರತೀಯತೆಯನ್ನು ನಮ್ಮ ಜನರಿಗೆ, ಪ್ರಾಜ್ಞರಿಗೆ, ನಮ್ಮ ದೇಶದ ಹೆಣ್ಣು ಮಕ್ಕಳಿಗೆ ಕಲಿಸಿದಳು. ಇವಳಿಗೆ ಅಂದಿನ ಕಾಲದ ಸಾಂಪ್ರದಾಯಿಕ ಸಮಾಜದಲ್ಲಿ ಒಂದು ಸ್ಥಾನ ದೊರೆಯುವುದಕ್ಕೆ ಆಕೆಯ ಗುರುಗಳಾದ ಸ್ವಾಮಿ ವಿವೇಕಾನಂದರು ಮತ್ತು ಶ್ರೀಮಾತೆ ಶಾರದಾದೇವಿಯವರು ಆಧಾರಪ್ರಾಯರಾಗಿದ್ದರು. ಆಕೆ ಭಾರತಕ್ಕೆ ಬಂದ ಮೇಲೆ ಸ್ವಾಮಿ ವಿವೇಕಾನಂದರು ಒಂದು ವರ್ಷ ಆಕೆಗೆ ಅನೇಕ ವಿಧವಾದ ತರಪೇತಿ ನೀಡಿದರು. ಶ್ರೀಶಾರದಾದೇವಿಯವರು ಆಕೆಯನ್ನು ತಮ್ಮ ಮಗಳಂತೆ ಪ್ರೀತಿಸಿದರು. ಆದರೂ ನಿವೇದಿತಾ ಅನೇಕ ಸಮಸ್ಯೆಗಳೊಂದಿಗೆ ಹೋರಾಡಬೇಕಾಯಿತು.

### ಪ್ರಥಮ ಭೇಟಿ

ನಿವೇದಿತಾ ಸ್ವಾಮಿ ವಿವೇಕಾನಂದರನ್ನು ಮೊದಲ ಬಾರಿ ೧೮೯೫ರಲ್ಲಿ ಲಂಡನ್ನಿನಲ್ಲಿ ಕಂಡಳು. ಅವರು ಕೊಟ್ಟ ಮೂರು ಉಪನ್ಯಾಸಗಳನ್ನು ಕೇಳಿದಳಷ್ಟೆ. ಸ್ವಾಮೀಜಿಯವರ ವ್ಯಕ್ತಿತ್ವದಲ್ಲಿದ್ದ ಧೀರೋದಾತ್ತತೆಯನ್ನು ಅವಳು ಗುರುತಿಸಿದಳು. ಅವರಿಗೆ ತಮ್ಮ ದೇಶದ ಜನರ ಮೇಲಿದ್ದ ಅಪರಿಮಿತ ಪ್ರೀತಿಯ ದಾಸಿಯಾಗಲು ಇಚ್ಛಿಸಿದಳು. ಆದರೆ ಅವಳು ಮಣಿದುದು ಅವರ ಶೀಲಕ್ಕೆ. ಸ್ವಾಮೀಜಿಯವರ ಸಂದೇಶಗಳನ್ನು ಆಕೆ ಮನನ ಮಾಡಿದಳು: ಮೊದಲು, ಅವರ ಧಾರ್ಮಿಕ ಸ್ವಭಾವದ ಔದಾರ್ಯ; ಎರಡನೆಯದು, ಅವರು ಅವಳ ಆಲೋಚನೆಯಲ್ಲಿ ಮೂಡಿಸಿದ ಹೊಸ ದೃಷ್ಟಿ ಮತ್ತು ಸ್ವಾರಸ್ಯ ; ಮೂರನೆಯದು, ಅವರು ಪ್ರತಿ ಮಾನವನಲ್ಲಿರುವ ಶ್ರೇಷ್ಠತಮ ಭಾವನೆ ಮತ್ತು ಶಕ್ತಿಯ ನಿಲುವಿನ ಮೇಲೆ ನಿಂತು ಮಾತನಾಡುತ್ತಿದ್ದರೇ ಹೊರತು ಅವನ ಲೋಪದೋಷಗಳನ್ನು ಗಮನಕ್ಕೆ ತರುತ್ತಿರಲಿಲ್ಲ. *(ನಾ ಕಂಡಂತೆ ನನ್ನ ಗುರುದೇವ, ಪು. ೧೦)* ಅವಳೊಬ್ಬ ಶ್ರೇಷ್ಠ ವಿದ್ಯಾರ್ಥಿನಿ. ಮನವಿಟ್ಟು ಕೇಳಿಸಿಕೊಳ್ಳುತ್ತಿದ್ದಳು. ಟಿಪ್ಪಣಿ ಬರೆದಿಟ್ಟುಕೊಳ್ಳುತ್ತಿದ್ದಳು. ಕೇಳಿಸಿಕೊಂಡುದನ್ನು ಆಲೋಚಿಸಿ ವಿಮರ್ಶಿಸುತ್ತಿದ್ದಳು. ಅರ್ಥವಾಗದುದನ್ನು ಚರ್ಚಿಸುತ್ತಿದ್ದಳು. ಅರ್ಥವಾದುದನ್ನು ಅಭ್ಯಾಸ ಮಾಡುತ್ತಿದ್ದಳು. ಸ್ವಾಮೀಜಿಯವರನ್ನು ನೋಡುವುದಕ್ಕಿಂತ ಮುಂಚೆ ಅನೇಕರ ಧಾರ್ಮಿಕ ಪ್ರವಚನಗಳನ್ನು ಕೇಳಿದ್ದಳು. ಬೌದ್ಧಧರ್ಮದ ಬಗ್ಗೆ ಮೂರು ವರ್ಷಗಳ ಕಾಲ ಆಳವಾಗಿ ಅಧ್ಯಯನ ಮಾಡಿದ್ದಳು. ಇಷ್ಟಾದರೂ ಸ್ವಾಮೀಜಿಯವರ ವೈಯಕ್ತಿಕ ಜೀವನ ಮತ್ತು ಕಾರ್ಯ ಕ್ಷೇತ್ರದ ಬಗ್ಗೆ ಅವಳಿಗೆ ಏನೂ ತಿಳಿದಿರಲಿಲ್ಲ. ಅವರು ಒಬ್ಬ 'ಶ್ರೇಷ್ಠ ವಿನೂತನ ಧರ್ಮಪ್ರವಚನ

ಕಾರ'ರಾಗಿ ಕಂಡಿದ್ದರು, ಅಷ್ಟೆ. ತನ್ನ ಜೀವನವನ್ನು ಅವರ ಸ್ತ್ರೀ ವಿದ್ಯಾಭ್ಯಾಸದ ಯೋಜನೆಗೆ ಸಮರ್ಪಿಸಿಕೊಂಡು ಭಾರತಕ್ಕೆ ಹೊರಡಲು ನಿರ್ಧರಿಸಿದಳು.

## ಸಮಸ್ಯೆಗಳು

''ಭಾರತದಲ್ಲಿ ಸ್ತ್ರೀವಿದ್ಯಾಭ್ಯಾಸಕ್ಕೆ ಕೆಲಸ ಮಾಡುವುದಾದರೆ ನಿವೇದಿತಾಳಿಗೆ ಉಜ್ವಲ ಭವಿಷ್ಯವಿದೆ'' ಎಂದು ಸ್ವಾಮೀಜಿಯವರು ಹೇಳಿದ್ದರೂ, ನಿವೇದಿತಾ ಭಾರತಕ್ಕೆ ಹೊರಡಲು ಸನ್ನದ್ಧಳಾಗಿದ್ದರೂ, ಸ್ವಾಮೀಜಿಯವರು ೧೮೯೭ರಲ್ಲಿ ಭಾರತಕ್ಕೆ ಹಿಂತಿರುಗಿದ ಮೇಲೆ, ಅವಳು ಇಂಗ್ಲೆಂಡಿನಿಂದಲೇ ಭಾರತದ ಸೇವೆಯನ್ನು ಮಾಡಬಹುದೆಂದು ಪತ್ರದಲ್ಲಿ ತಿಳಿಸಿದರು. ನಿವೇದಿತಾ ಹತಾಶಳಾದಳು. ಕೆಲವು ದಿನಗಳ ನಂತರ, ಅವಳು ಭಾರತಕ್ಕೆ ಬರಲು ಬಹಳ ಉತ್ಸುಕಳಾಗಿರುವಳೆಂದು ತಿಳಿದ ಬಳಿಕ, ಸ್ವಾಮೀಜಿ ಮತ್ತೊಂದು ಪತ್ರದಲ್ಲಿ (ಜುಲೈ ೨೯, ೧೮೯೭), ಅವಳು ಭಾರತಕ್ಕೆ ಬಂದರೆ ಅವಳಿಗೆ ಎದುರಾಗುವ ಕಷ್ಟಗಳು ಮತ್ತು ಸಮಸ್ಯೆಗಳ ಬಗ್ಗೆ ನೇರವಾಗಿ ಸ್ಪಷ್ಟವಾಗಿ ತಿಳಿಸಿದರು: ''ಭಾರತಕ್ಕೆ ನೀನು ಮಾಡಬೇಕೆಂದಿರುವ ಕಾರ್ಯದಲ್ಲಿ ನಿನಗೆ ಉನ್ನತ ಭವಿಷ್ಯವಿದೆ ಎಂಬ ನಂಬಿಕೆ ನನಗೆ ಈಗ ದೃಢವಾಗಿದೆ. ನಿನ್ನ ಶಿಕ್ಷಣ, ನಿಸ್ಪೃಹತೆ, ಪಾವಿತ್ರ್ಯತೆ, ಅಪಾರ ಪ್ರೀತಿ, ದೃಢ ನಿರ್ಧಾರ, ಮತ್ತು ಎಲ್ಲಕ್ಕಿಂತ ಮೇಲಾಗಿ ನಿನ್ನಲ್ಲಿ ಹರಿಯುತ್ತಿರುವ ಕೆಲ್ಟಿಕ್ ಜನಾಂಗದ ಐರಿಷ್ ನೆತ್ತರು ಇವುಗಳಿಂದ ಈಗ ಭಾರತಕ್ಕೆ ಬೇಕಾಗಿರುವ ಮಹಿಳೆ ನೀನಾಗಿರುವೆ. ಆದರೂ ಕಷ್ಟಗಳು ಬೇಕಾದಷ್ಟಿವೆ. ಇಲ್ಲಿರುವ ದಾರಿದ್ರ್ಯ, ಮೂಢನಂಬಿಕೆಗಳು ಮತ್ತು ದಾಸ್ಯ - ಇವನ್ನು ಊಹಿಸಲಾರೆ. ಜಾತಿ ಮತ್ತು ಪ್ರತ್ಯೇಕತೆಯ ಬಗ್ಗೆ ಅವರದೇ ಆದ ವಿಚಿತ್ರ ಆಲೋಚನೆ ಇರುವ, ಅರ್ಧ ಬಟ್ಟೆ ಧರಿಸಿರುವ, ಬಿಳಿಯರನ್ನು ಭಯ ಅಥವಾ ದ್ವೇಷದಿಂದ ವರ್ಜಿಸುವ ಮತ್ತು ಬಿಳಿಯರಿಂದ ಕಟುವಾಗಿ ದ್ವೇಷಿಸಲ್ಪಡುವ ಸ್ತ್ರೀ ಪುರುಷರ ಮಧ್ಯೆ ನೀನು ಇರಬೇಕಾಗುತ್ತದೆ. ಮತ್ತೊಂದೆಡೆ, ಬಿಳಿಯರಿಂದ ನೀನು ತಲೆಕೆಟ್ಟವಳೆಂದು ನೋಡಲ್ಪಡುವೆ, ಮತ್ತು ನಿನ್ನ ಪ್ರತಿಯೊಂದು ಚಲನವಲನವೂ ಅವರಿಂದ ಅನುಮಾನದಿಂದ ಗಮನಿಸಲ್ಪಡುವುದು. ಮತ್ತೆ ಹವಾಗುಣವೊ, ಭಯಂಕರ ಧಗೆ; ನಮ್ಮ ಚಳಿಗಾಲ ಬಹುತೇಕ ಸ್ಥಳಗಳಲ್ಲಿ ನಿಮ್ಮ ಬೇಸಗೆಯಂತೆ ಇರುವುದು, ಮತ್ತು ದಕ್ಷಿಣದಲ್ಲಿ ಯಾವಾಗಲೂ ಉರಿಬಿಸಿಲು. ನಗರಗಳಿಂದ ಹೊರಗೆ ಯೂರೋಪಿನಲ್ಲಿ ಇರುವ ಯಾವ ಸೌಲಭ್ಯಗಳೂ ದೊರೆಯುವುದಿಲ್ಲ. ಇಷ್ಟೆಲ್ಲ ಕಷ್ಟಗಳಿದ್ದರೂ, ನೀನು ಕಾರ್ಯ ಸಾಹಸಕ್ಕೆ ಕೈ ಹಾಕುವುದಾದರೆ, ನಿನಗೆ ಸ್ವಾಗತ, ನೂರು ಬಾರಿ ಸ್ವಾಗತ... ಮುಳುಗುವುದಕ್ಕೆ ಮುನ್ನ ನೀನು ಚೆನ್ನಾಗಿ ಆಲೋಚಿಸಬೇಕು. ಕೆಲಸ ಮಾಡಿದ ನಂತರ ನೀನು ವಿಫಲಳಾದರೆ ಅಥವಾ ಹತಾಶಳಾದರೆ, ನನ್ನ ಮಟ್ಟಿಗೆ ನಾನು ಆಶ್ವಾಸನೆ ಕೊಡುತ್ತೇನೆ, ನೀನು ಭಾರತಕ್ಕೆ ಕೆಲಸ ಮಾಡಲಿ ಮಾಡದಿರಲಿ, ವೇದಾಂತವನ್ನು ಸ್ವೀಕರಿಸಲಿ ಅಥವಾ ನಿರಾಕರಿಸಲಿ, *ನನ್ನ ಉಸಿರು ಇರುವವರೆಗೂ ನಾನು ನಿನ್ನ ಹಿಂದೆ ಇರುತ್ತೇನೆ.* 'ಆನೆಯ ದಂತಗಳು ಹೊರಚಾಚುವುವೇ ವಿನಃ ಹಿಂದಕ್ಕೆ ಹೋಗುವುದಿಲ್ಲ.' ಅದರಂತೆಯೇ ಮನುಷ್ಯನಾದವನು ಮಾತನ್ನು ಹಿಂತೆಗೆದುಕೊಳ್ಳುವುದಿಲ್ಲ. ನಿನಗೆ ಮಾತು ಕೊಡುತ್ತೇನೆ. ಮತ್ತೆ, ನಿನಗೊಂದು ಎಚ್ಚರಿಕೆಯ ಮಾತು. ನೀನು ನಿನ್ನ ಕಾಲಿನ ಮೇಲೆ ನಿಲ್ಲಬೇಕು, ಯಾರ ಆಸರೆಗೂ ಕೈ ಚಾಚದಿರು.... ಬಹು ಜನರ ಸ್ನೇಹ, ದೂರವಿರುವವರೆಗೆ ಅತ್ಯಂತ ಚೆನ್ನಾಗಿರುವುದು. ಯಾರು ತಮ್ಮ ಕಾಲಿನ ಮೇಲೆ ನಿಲ್ಲುವರೊ ಅವರಿಗೆ ಎಲ್ಲವೂ ಸರಿಯಾಗಿ ನಡೆಯುವುದು.''

## ಸಂಘದೊಂದಿಗೆ ಸೇವೆ

ನಿವೇದಿತಾ ಜನವರಿ, ೧೮೯೮ರಲ್ಲಿ ಕಲ್ಕತ್ತೆಗೆ ಕಾಲಿಡುತ್ತಿದ್ದಂತೆಯೆ ಸಮಸ್ಯೆಗಳೊಂದಿಗೆ ಅವಳ ಹೋರಾಟ ಪ್ರಾರಂಭವಾಯಿತೆನ್ನಬಹುದು. ಸ್ವಾಮಿಜಿಯವರು, ಸಂಘವೊಂದನ್ನು ಸ್ಥಾಪಿಸಬೇಕೆ, ಬೇಡವೆ ಎಂಬುದರ ಬಗ್ಗೆ ಅನೇಕ ವರ್ಷಗಳು ಚಿಂತಿಸಿ, ಶ್ರೀರಾಮಕೃಷ್ಣರ ಹೆಸರಿನಲ್ಲಿ ಸಂನ್ಯಾಸಿಗಳ ಸಂಘವನ್ನು ಮೇ ೧೮೯೭ರಲ್ಲಿ ಸ್ಥಾಪಿಸಿದರು. ಅದರ ಧ್ಯೇಯೋದ್ದೇಶ ಕಾರ್ಯರೂಪಕ್ಕೆ ಬರಬೇಕಾದರೆ ಮತ್ತು ಸಂಘ ದೀರ್ಘಕಾಲ ನಿಲ್ಲಬೇಕಾದರೆ ಏನೆಲ್ಲವನ್ನೂ ಮಾಡಬೇಕಾಗುವುದೊ ಅದರಲ್ಲಿ ನಿರತರಾಗಿದ್ದಾಗ ನಿವೇದಿತಾಳಿಗೆ ಭಾರತಕ್ಕೆ ಬರಲು ಆಹ್ವಾನವಿತ್ತರು. ಇದು ಸಾಧಾರಣ ಘಟನೆಯಲ್ಲ. ಏಕೆಂದರೆ, ಆಕೆ ಸಂನ್ಯಾಸಿಗಳ ಮಾರ್ಗದರ್ಶನ ಮತ್ತು ನೆರವು ಹಾಗೂ ಭಕ್ತರ ಸಹಕಾರದಿಂದ ಎಲ್ಲರೊಡನಿದ್ದು ತನ್ನ ಕಾರ್ಯವನ್ನು ಮಾಡಬೇಕು; ಆದರೆ, ತಾನು ಏಕಾಂಗಿಯಾಗಿ ತನ್ನ ಆದರ್ಶದಂತೆ ಇರಬೇಕು. ಈ ಬಗೆಯ ಶಿಸ್ತಿನ ಜೀವನ ಸಾಧಾರಣ ಜೀವಿಗಳಿಗೆ ಸಾಧ್ಯವಿಲ್ಲ. ನಿವೇದಿತಾ ಲಂಡನ್ನಿನಲ್ಲಿ ನೋಡಿದ ಸ್ವಾಮಿ ವಿವೇಕಾನಂದರು, 'ಒಬ್ಬ ಧರ್ಮ ಪ್ರಚಾರಕರು, ಹಿಂದೂ ಧರ್ಮದ ಪ್ರವಾದಿಗಳು'. ಆದರೆ, ನಿವೇದಿತಾ ಕಲ್ಕತ್ತೆಗೆ ಬಂದಾಗ ಸ್ವಾಮೀಜಿಯವರು ಅಭಿನವ ಸಂನ್ಯಾಸ ಸಂಘದ ರೂಪುರೇಖೆಗಳ ರೂವಾರಿಗಳೂ ಸಂಘದ ನಾಯಕರೂ ಆಗಿದ್ದರು. ದ್ರಷ್ಟಾರರಾದ ಅವರಿಗೆ ಮಾತ್ರವೇ ಸಂಘದ ಭವಿಷ್ಯತ್ ರೂಪ ತಿಳಿದಿತ್ತು. ಎಲ್ಲಾ ಕಾರ್ಯಗಳೂ ಅವರ ನಿರ್ದೇಶನದಂತೆ ನಡೆಯುತ್ತಿದ್ದುವು. ಇದರಲ್ಲಿ ನಿವೇದಿತಾ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಅವಳಿಗೆ ಅಕ್ಟೋಬರ್ ೧, ೧೮೯೭ರ ಪತ್ರದಲ್ಲಿ ಸ್ಪಷ್ಟವಾಗಿ ತಿಳಿಸಿದರು: '' ..'ಯಾರು ಮಗುವಿನಂತೆ ಮುನ್ನಡೆಸುವರೊ' ಅವರು ಶ್ರೇಷ್ಠ ನಾಯಕರು. ಮಗು, ನೋಡಲು ಎಲ್ಲರ ಮೇಲೆಯೂ ಅವಲಂಬಿತವಾಗಿದ್ದರೂ ಅದು ಮನೆಗೆ ರಾಜ. ನನಗೆ ತಿಳಿದಂತೆ ಇದೇ (ನಾಯಕತ್ವದ) ರಹಸ್ಯ... ದೊಡ್ಡ ಕಷ್ಟ ಇದು: ಜನರು ತಮ್ಮ ಪೂರ್ಣ ಪ್ರೀತಿಯನ್ನು ನನಗೆ ಕೊಡುವುದನ್ನು ನೋಡುತ್ತಿರುವೆ. ಆದರೆ ನಾನು ನನ್ನ ಯಾವುದನ್ನೂ ಪೂರ್ಣವಾಗಿ ಕೊಡಬಾರದು, ಏಕೆಂದರೆ ಆ ದಿನ ಕೆಲಸ ಹಾಳಾಗುವುದು. ಆದರೂ ಕೆಲವರಿರುವರು, ಅವರು ಅಂತಹುದನ್ನು ನಿರೀಕ್ಷಿಸುವರು. ಅವರಿಗೆ ನಿರ್ವ್ಯಕ್ತಿತ್ವದ ವೈಶಾಲ್ಯತೆ ತಿಳಿಯದು. ಕೆಲಸಕ್ಕೆ, ಎಷ್ಟು ಸಾಧ್ಯವೊ ಅಷ್ಟು ಜನರ ಉತ್ಸಾಹಪೂರಿತ ಪ್ರೀತಿ ನನಗೆ ಅತ್ಯಂತ ಆವಶ್ಯಕ, ಆದರೆ ನಾನು ಸಂಪೂರ್ಣವಾಗಿ ವ್ಯಕ್ತಿತ್ವದೃಷ್ಟಿಗೆ ಅತೀತನಾಗಿ ಇರಬೇಕು. ಇಲ್ಲದಿದ್ದರೆ ಅಸೂಯೆ ಮತ್ತು ಕಲಹಗಳು ಎಲ್ಲವನ್ನೂ ಹಾಳು ಮಾಡುತ್ತವೆ. ನಾಯಕನಾದ

ವನು ವ್ಯಕ್ತಿತ್ವಕ್ಕೆ ಅತೀತನಾಗಿರಬೇಕು. ಇದು ನಿನಗೆ ಅರ್ಥವಾಗುತ್ತದೆ ಎಂದು ನನಗೆ ಖಾತರಿ. ಎಲ್ಲರ ನಿಷ್ಠೆಯನ್ನೂ ತನ್ನ ಗುರಿಗೆ ಬಳಸಿಕೊಂಡು, ಒಳಗೆ ನಗುತ್ತ ಅಮಾನುಷನಾಗಬೇಕೆಂದು ನಾನು ಹೇಳುತ್ತಿಲ್ಲ. ನಾನು ಹೇಳುತ್ತಿರುವುದೇನೆಂದರೆ, ನಾನು ಏನಾಗಿರುವೆನೊ ಅದು, ವ್ಯಕ್ತಿಗಳನ್ನು ನಾನು ಉತ್ಕಟವಾಗಿ ಪ್ರೀತಿಸುತ್ತೇನೆ. ಆದರೆ, ಆವಶ್ಯಕತೆ ಇದ್ದಲ್ಲಿ, ನನ್ನ ಹೃದಯವನ್ನು ನನ್ನ ಕೈಯಿಂದಲೇ ಕಿತ್ತು ಹಾಕುವ ಶಕ್ತಿ ನನಗಿದೆ. ಬುದ್ಧ ಹೇಳಿದಂತೆ, 'ಬಹುಜನರ ಒಳಿತಿಗಾಗಿ ಮತ್ತು ಬಹುಜನರ ಕ್ಷೇಮಕ್ಕಾಗಿ'. ಉನ್ಮತ್ತ ಪ್ರೀತಿ, ಆದರೂ ಅದರಲ್ಲಿ ಬಂಧನವಿಲ್ಲ...'' ಹೀಗೆ ಸ್ವಾಮೀಜಿ, ಅವರೊಡನೆ ಹೇಗೆ ನಡೆದುಕೊಳ್ಳಬೇಕು, ಅವರಿಂದ ಏನನ್ನು ನಿರೀಕ್ಷಿಸಬಹುದು ಮತ್ತು ಏನನ್ನು ನಿರೀಕ್ಷಿಸಬಾರದು ಎಂಬುದನ್ನು ನಿವೇದಿತಾಗೆ ತಿಳಿಸಿದರು. ಆಕೆ ಭಾರತಕ್ಕೆ ಬರುತ್ತಿರುವುದು ತಮ್ಮ ಕೆಲಸಕ್ಕಲ್ಲ, ಸಂಘದ, ದೇಶದ ಸೇವೆಗೆ ಎಂಬುದನ್ನು ಮನದಟ್ಟು ಮಾಡಿಸಿದರು. ಭಾರತಕ್ಕೆ ಬರುವ ಮುನ್ನವೇ ಅವಳ ಮನಃಸ್ಥಿತಿಯನ್ನು ಸಿದ್ಧಪಡಿಸಿದರು.

### ಹೋರಾಟ

ಎಲ್ಲ ಸಿದ್ಧಿಗಳಿಗೂ ಸಾಧನೆ ಆವಶ್ಯಕ. ಸಾಧನೆ ಎಂದರೆ ಹೋರಾಟ. ಹೋರಾಟಕ್ಕೆ ಮುಖ್ಯವಾಗಿ ಇರಬೇಕಾದುದು ಗುರಿ. ತತ್ತ್ವಗಳೇ ಗುರಿ ಮಾನವನಿಗೆ. ಅವನ್ನು ಸೇರುವ ದಾರಿಯನ್ನು ಗುರುಗಳು ಆದರ್ಶಗಳ ಮೂಲಕ ತೋರುವರು. ಆ ಹಾದಿಯಲ್ಲಿ ನಡೆಯುವ ಸಾಧಕರಿಗೆ ಅನೇಕ ವಿಘ್ನಗಳು ಎದುರಾಗುವುವು. ಅವುಗಳೊಂದಿಗೆ ಬಿಡದೆ ಹೋರಾಡುವುದೇ ಸಾಧಕರ ಜೀವನ. ಯಾರು ಉದಾತ್ತ ಗುರಿಗಳನ್ನು ಇಟ್ಟುಕೊಳ್ಳುವರೊ ಅವರು ಹೆಚ್ಚು ಶ್ರಮ ಪಡಬೇಕಾಗುವುದು, ಗುರಿಯನ್ನು ಸೇರಲು. ಸತ್ಯವನ್ನು ಅರಸುವವರಿಗೆ ಕಷ್ಟಗಳು ಹೆಚ್ಚು. ಉನ್ನತ ಸತ್ಯಗಳನ್ನು ಅರಸುವವರು ಹೆಚ್ಚು ಹೋರಾಟಗಳನ್ನು ಮಾಡಬೇಕಾಗುತ್ತದೆ. **'ಶ್ರೇಯಾಂಸಿ ಬಹುವಿಘ್ನಾನಿ'**. ನಿವೇದಿತಾಳ ಹೋರಾಟಗಳು ಬಹುವಿಧ – ಆಂತರಿಕ, ಧಾರ್ಮಿಕ, ಬಾಹ್ಯ, ದೈಹಿಕ, ಮಾನಸಿಕ, ಸಾಮಾಜಿಕ, ಹಾಗೂ ರಾಜಕೀಯ. ಅವಳ ಹೋರಾಟ, ಆಕೆ ಸ್ವಾಮೀಜಿಯವರನ್ನು ನೋಡುವ ಮುನ್ನವೇ ಪ್ರಾರಂಭವಾಗಿತ್ತೆಂದು ಹೇಳಬಹುದು. ಕ್ರೈಸ್ತ ಧರ್ಮವನ್ನು ಅರ್ಥಮಾಡಿಕೊಳ್ಳಲು ಅವಳು ಪ್ರಾಮಾಣಿಕ ಪ್ರಯತ್ನ ಮಾಡಿದ್ದಳು. ಬುದ್ಧನ ಜೀವನ ಹಾಗೂ ಸಂದೇಶಗಳನ್ನು ಅಧ್ಯಯನ ಮಾಡಲು ಕೆಲವು ವರ್ಷಗಳು ಶ್ರಮಿಸಿದ್ದಳು. ಸಹಜವಾಗಿ ಅವೆರಡನ್ನೂ ಹೋಲಿಸಿ ತನ್ನ ವಿಚಾರ ಶಕ್ತಿಯನ್ನು ಬೆಳೆಸಿಕೊಂಡಿದ್ದಳು.


ನಿವೇದಿತಾ – ಒಂದು ಹಳೆಯ ಚಿತ್ರದಲ್ಲಿ

ಸ್ವಾಮೀಜಿಯವರ ಪ್ರವಚನವನ್ನು ಮೊದಲ ಬಾರಿ ಕೇಳಿದಾಗ ಅವರು 'ಕೇವಲ ಉಪನ್ಯಾಸಕರಲ್ಲ'ವೆಂಬುದನ್ನು ತಿಳಿಯಲು ಅವಳಿಗೆ ಕಷ್ಟವಾಗಲಿಲ್ಲ. 'ಅದುವರೆಗೆ ಯಾವುದನ್ನು ಅತ್ಯುನ್ನತ ಮತ್ತು ಅತಿ ಶ್ರೇಷ್ಠವೆಂದು ಭಾವಿಸಿದ್ದೆನೊ ಅದನ್ನೆಲ್ಲ ಒಂದು ಗಂಟೆಯಷ್ಟು ಅಲ್ಪ ಕಾಲದಲ್ಲಿ ವ್ಯಕ್ತಪಡಿಸಿದ ಚಿಂತಕರನ್ನು ಕಾಣುವ ಭಾಗ್ಯ ಅದುವರೆಗೆ ನನ್ನದಾಗಿರಲಿಲ್ಲ' ಎಂದು ಹೇಳಿರುವಳು. ಸ್ವಾಮೀಜಿಯವರ ಪ್ರವಚನಗಳಲ್ಲಿ ಮಹೋನ್ನತ ತತ್ತ್ವಗಳು ಕಾವ್ಯದಂತೆ ಹೊರಹೊಮ್ಮುತ್ತವೆ. 'ಮಾಯೆ' ಎಂಬ ಅವರ ಪ್ರವಚನ ಇದಕ್ಕೆ ಉದಾಹರಣೆ. ಅವರ ವಿವರಣೆ ಕೇಳುಗರ ಕುಂಡಲಿನಿಯನ್ನು ಜಾಗೃತಗೊಳಿಸಬಲ್ಲವಾಗಿದ್ದುವು. ಋಷಿಗಳ ಸತ್ಯಗಳು ಬಹು ದೂರದಿಂದ ಅವರ ವಾಣಿಯ ಮೂಲಕ ಹೊರಬರುತ್ತಿರುವಂತೆ ಕೇಳುಗರಿಗೆ ಭಾಸವಾಗುತ್ತಿತ್ತು. ಕೆಲವು ವೇಳೆ ಗೂಢ ಸತ್ಯಗಳು ಹ್ರಸ್ವ ವಾಕ್ಯಗಳಲ್ಲಿ ಮಿಂಚಿನಂತೆ ಹೊರಬರುತ್ತಿದ್ದುವು. ಅವನ್ನು ಅರ್ಥ ಮಾಡಿಕೊಳ್ಳುವುದು ಎಂತಹವರಿಗಾದರೂ ಕಷ್ಟವಾಗುತ್ತಿತ್ತು. ಇದೇ ನಿವೇದಿತಾಳಿಗೆ ಎದುರಾದ ಮೊದಲ ಸಮಸ್ಯೆ, ಅವಳು ಭಾರತೀಯ ಆದರ್ಶಗಳನ್ನು ಅರ್ಥ ಮಾಡಿಕೊಳ್ಳುವ ಪ್ರಯಾಸದಲ್ಲಿ. ಆಕೆ ೧೮೯೫ರಲ್ಲಿ ಲಂಡನ್ನಿನಲ್ಲಿ ಕೇಳಿದ ಮೊದಲ ಉಪನ್ಯಾಸದಲ್ಲಿ ಸ್ವಾಮೀಜಿ, ಮಾನವ ಜೀವನದ ಗುರಿ ಆತ್ಮನ ಸ್ವಾತಂತ್ರ್ಯ, ಬಿಡುಗಡೆ ಎಂದು ಹೇಳಿದರು. ಆದರೆ ಪಾಶ್ಚಿಮಾತ್ಯರ ಆಲೋಚನೆಯ ಪ್ರಕಾರ ಮಾನವ ಸೇವೆ ಜೀವಮಾನದ ಗುರಿ ಎಂಬುದಾಗಿತ್ತು. ಇವೆರಡಕ್ಕೂ ಇರುವ ಭೇದವನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದುದು ಅವಳು ಮಾಡಿದ ಒಂದು ಮಾನಸಿಕ, ಬೌದ್ಧಿಕ ಹೋರಾಟ. ಇದೊಂದು ಮುಖ್ಯ ಸಂಗತಿ. ಏಕೆಂದರೆ, ನಿವೇದಿತಾ ಆರಿಸಿಕೊಂಡ ಆದರ್ಶ, (ಭಾರತದ) ಸೇವೆ. ಸೇವೆಯ ಆದರ್ಶವನ್ನು ಸ್ವಾಮೀಜಿಯವರು ನಿವೇದಿತಾಗೆ ಮಾತ್ರವಲ್ಲ, ಲೋಕದ ಜನರಿಗೆ ಮತ್ತು ಅವರು ಸ್ಥಾಪಿಸಿದ ಸಂನ್ಯಾಸಿಗಳ ಸಂಘಕ್ಕೆ ಅತ್ಯಂತ ಸಮರ್ಪಕವಾಗಿ ವಿವರಿಸಿದರು. ಸೇವೆಯನ್ನು ಅವರು ಆಧ್ಯಾತ್ಮಿಕ ತಳಹದಿಯ ಮೇಲೆ ಸ್ಥಾಪಿಸಿದರು. ನಮ್ಮ ಸೇವೆ ಕೇವಲ ಮಾನವರಿಗಲ್ಲ, ಅವರಲ್ಲಿರುವ ಭಗವಂತನಿಗೆ. ಈ ಸಾಧನೆಯ ಮೂಲಕ ಸೇವೆ ಮಾಡುವವರು ತಮ್ಮಲ್ಲಿರುವ ಭಗವಂತನನ್ನು ಅನುಭವಿಸಲು ಸಾಧ್ಯವಾಗುವುದು. ಹೀಗಲ್ಲದೆ, ಕೇವಲ ಸೇವೆಯನ್ನು ಮಾಡಹೊರಟರೆ ಅದೊಂದು ಪ್ರಾಪಂಚಿಕ ಕರ್ಮವಾಗಿ ಕೊನೆಗೆ ದುಃಖ ಕಾದಿರುವುದು. ನಿವೇದಿತಾಳಿಗೆ ಧರ್ಮ ಮತ್ತು ಸೇವೆಯ ಎರಡು ಆದರ್ಶಗಳೂ ಇದ್ದುವು. ಸ್ವಾಮೀಜಿಯವರು ನಿವೇದಿತಾಳ ಸೇವಾಕಾರ್ಯವನ್ನು ಆಧ್ಯಾತ್ಮಿಕ ತಳಹದಿಯ ಮೇಲೆ ಇಟ್ಟರು. ಇದು ಅವಳ ಚಿಂತನೆಯ ಹೋರಾಟದ ಸತ್ಫಲ.

ಒಮ್ಮೆ ಸಾಮಾನ್ಯ ಸಂಭಾಷಣೆಯಲ್ಲಿ, ಲಂಡನ್ ನಗರವನ್ನು ಸುಂದರವಾಗಿ ಮಾಡಬೇಕಾಗಿದೆ ಎಂದು ನಿವೇದಿತಾ ಹೇಳಿದಾಗ ಸ್ವಾಮೀಜಿ, ''ನಿಮ್ಮ ನಗರವನ್ನು ಸುಂದರವಾಗಿ ಮಾಡಲು ನೀವು ಅನೇಕ ನಗರಗಳನ್ನು ಧೂಳೀಪಟ ಮಾಡಿದಿರಿ'' ಎಂದಾಗ ಅವಳಿಗೆ ಸಿಡಿಲೆರಗಿದಂತಾಯಿತು. ಅವಳಿನ್ನೂ ಭಾರತವನ್ನು ಕಂಡಿರಲಿಲ್ಲ; ಬ್ರಿಟಿಷರು ಭಾರತದಲ್ಲಿ ಮಾಡುತ್ತಿದ್ದ ವಿನಾಶಕಾರಿ ಕೃತ್ಯಗಳ ಅರಿವು

ಅವಳಿಗಿರಲಿಲ್ಲ. ಅವಳು ಭಾರತಕ್ಕೆ ಬಂದ ನಂತರ, ಈ ವಿಷಯದಲ್ಲಿ ಅವಳ ಕಣ್ಣು ತೆರೆಯಿತು. ಅವಳು ಇತಿಹಾಸದ ಒಳ್ಳೆಯ ವಿದ್ಯಾರ್ಥಿನಿಯಾಗಿದ್ದರೂ, ಸ್ವಾಮೀಜಿಯವರಿಂದ ಅಮೂಲ್ಯ ಇತಿಹಾಸದ ಪಾಠಗಳನ್ನು ಅವಳ ತಿಳಿವಳಿಕೆಯ ಬುನಾದಿ ಕುಸಿದು ಬೀಳುವಂತೆ ಅನಿರೀಕ್ಷಿತವಾಗಿ ಕಲಿತಳು. ಅವಳ ಮನಸ್ಸಿನಲ್ಲಿ ಮಾತೃಭೂಮಿಗೆ ಇದ್ದ ಸ್ಥಾನವನ್ನು ಭಾರತಕ್ಕೆ ಕೊಟ್ಟಳು. ಇಂತಹ ಅನೇಕ ಸೂಚ್ಯವಾದ ಉಕ್ತಿಗಳು ಸ್ವಾಮಿಜಿಯವರ ವಾಣಿಯಿಂದ ಆಗಾಗ್ಗೆ ಹೊರಬೀಳುತ್ತಿದ್ದುವು. ಅವನ್ನೆಲ್ಲ ಬರೆದಿಟ್ಟುಕೊಂಡು ಮನನ ಮಾಡಿ ಚಿಂತಿಸಿ, ಸಂದೇಹ ಬಂದಾಗ ಅವರನ್ನು ಕೇಳಿ, ಅವರೊಂದಿಗೆ ಚರ್ಚಿಸಿ ತಿಳಿದುಕೊಳ್ಳುತ್ತಿದ್ದಳು. ಈ ಬೌದ್ಧಿಕ ಮಾನಸಿಕ ಹೋರಾಟ ಸತತವಾಗಿ ಅವಳ ಜೀವನದಲ್ಲಿ ನಡೆಯುತ್ತಿತ್ತು.

### ಸ್ವಾಮೀಜಿಯವರಿಂದ ತರಪೇತಿ

ನಿವೇದಿತಾ ಭಾರತಕ್ಕೆ ಬಂದ ನಂತರ ಸ್ವಾಮೀಜಿಯವರು ಸುಮಾರು ನಾಲ್ಕುವರೆ ವರ್ಷ ಬದುಕಿದ್ದರು. ಇದರಲ್ಲಿ ಸುಮಾರು ಎರಡುವರೆ ವರ್ಷಗಳ ಕಾಲ ಆಕೆ ಭಾರತದಿಂದ ಹೊರಗೆ ಹೋಗಿದ್ದಳು. ಸ್ವಾಮೀಜಿಯವರ ಶಿಕ್ಷಣ ನಿವೇದಿತೆಗೆ ದೊರೆತುದು ಎರಡು ವರ್ಷಗಳಿಗೂ ಕಡಿಮೆ ಕಾಲದಲ್ಲಿ. ಸ್ವಾಮೀಜಿ ಉತ್ತರ ಭಾರತದಲ್ಲಿ ಆಲ್ಮೋರ ಮುಂತಾದ ಸ್ಥಳಗಳಿಗೆ ಹೋದಾಗ ನಿವೇದಿತಾ ಮತ್ತು ಇನ್ನಿಬ್ಬರು ಅಮೆರಿಕಾದ ಮಹಿಳಾ ಭಕ್ತರು ಎರಡು ತಿಂಗಳು ಅವರೊಡನೆ ಮಾಡಿದ ಪ್ರವಾಸದಲ್ಲಿ ಪ್ರತಿದಿನವೂ ಭಾರತದ ಇತಿಹಾಸ ಮತ್ತು ಇತರ ವಿಷಯಗಳಲ್ಲಿ ಆಕೆಗೆ ಅಮೂಲ್ಯ ಶಿಕ್ಷಣ ದೊರೆಯಿತು. ಸ್ವಾಮೀಜಿ ಅಡಿಗಡಿಗೂ ಅವಳನ್ನು ಪರೀಕ್ಷಿಸುತ್ತಿದ್ದರು. ಇಂಗ್ಲೆಂಡಿನಲ್ಲಿ ಕಾಣಸಿಗದ ಸ್ವಾಮೀಜಿಯವರ ವ್ಯಕ್ತಿತ್ವ ಅವಳಿಗೆ ಪರಿಚಯವಾಯಿತು. ಅವಳು ವಾದ ವಿವಾದಗಳನ್ನು ಮಾಡುತ್ತಿದ್ದಳು. ಕೆಲವು ದಿನ ಅವರು ಇವಳನ್ನು ಉದಾಸೀನವಾಗಿ ಕಂಡರು. ಅವಳ ಅಹಂಕಾರಕ್ಕೆ ಪೆಟ್ಟು ಬೀಳುತ್ತಿತ್ತು. ಅವಳಿಗೆ ಒಂದು ತಿಂಗಳಿಗೂ ಹೆಚ್ಚು ಕಾಲ ಉತ್ಕಟವಾದ ಶಿಕ್ಷಣ ಮತ್ತೆ ದೊರೆತುದು ಸ್ವಾಮೀಜಿ ೧೮೯೯ರ ಜೂನ್ ತಿಂಗಳಿನಲ್ಲಿ ಹಡಗಿನಲ್ಲಿ ಸ್ವಾಮಿ ತುರೀಯಾನಂದರೊಡನೆ ಇಂಗ್ಲೆಂಡಿಗೆ ಹೋದಾಗ. ಆಗ ನಿವೇದಿತಾ ಕೂಡ ಅವರ ಜತೆ ಇದ್ದಳು. ಆಗಲೇ ಅವರು ಅವಳಿಗೆ ಯಾರ ಸಂಗವನ್ನೂ ಮಾಡದೆ ಕೆಲವು ಕಾಲ ಏಕಾಂತವಾಸ ಮಾಡಬೇಕೆಂದು ಹೇಳಿದುದು. ಇಂತಹ ಕಟ್ಟುನಿಟ್ಟಿನ ಸಾಧನೆ, ಹೋರಾಟ ಮಾಡಿದುದರಿಂದ ನೈಷ್ಠಿಕ ಬ್ರಹ್ಮಚಾರಿಣಿಯಾಗಿ ಭಾರತದ ಆಧ್ಯಾತ್ಮಿಕ ತತ್ತ್ವಗಳನ್ನು ಅನುಭವಿಸಲು ಅವಳಿಗೆ ಸಾಧ್ಯವಾದದು. ನಂತರ ಸ್ವಾಮೀಜಿಯವರೊಡನೆ ಅಮೆರಿಕಾ ಸೇರಿದ ಮೇಲೆ, ಏಕಾಂಗಿಯಾಗಿ ಕುಟೀರವೊಂದರಲ್ಲಿ ವಾಸವಿರುತ್ತ 'ಕಾಳೀಮಾತೆ' ಎಂಬ ಪುಸ್ತಕವನ್ನು ಬರೆದಳು.

ಭಾರತಕ್ಕೆ ಬಂದ ಮೇಲೆ ಅವಳ ಭಾರತೀಯ ಆಧ್ಯಾತ್ಮಿಕ ಶಿಕ್ಷಣ ಸ್ವಾಮೀಜಿಯವರಿಂದ ಬಿರುಸಾಗಿ ಪ್ರಾರಂಭವಾಯಿತು. ಅವಳ ಹೋರಾಟಗಳೂ ಬಲವಾದವು. ಅವಳಿಗೆ ಬಂಗಾಳಿ, ಸಂಸ್ಕೃತ, ಭಗವದ್ಗೀತೆ ಮುಂತಾದವುಗಳ ಪಾಠ ಪ್ರಾರಂಭವಾಯಿತು. ಜನರ ನಡೆ-ನುಡಿ, ಆಚಾರ-ವಿಚಾರಗಳನ್ನು ಸೂಕ್ಷ್ಮವಾಗಿ ಗಮನಿಸಿದಳು. ಅವರ ಪದ್ಧತಿಗಳಿಗೆ ಭಾವನೆಗಳಿಗೆ ಧಕ್ಕೆ ಬರದಂತೆ ಎಚ್ಚರ ವಹಿಸಿ ನಡೆದುಕೊಳ್ಳುತ್ತಿದ್ದಳು. ಇದಕ್ಕೆಲ್ಲ ಆಧಾರ, ಕಲ್ಕತ್ತೆಯ ನಿವಾಸದಲ್ಲಿ ಇದ್ದ ಶಾರದಾದೇವಿಯವರು ಮತ್ತು ಅವರೊಂದಿಗೆ ವಾಸವಿದ್ದ ಶ್ರೀರಾಮಕೃಷ್ಣರ ಶ್ರೇಷ್ಠ ಮಹಿಳಾ ಭಕ್ತರಾದ ಯೋಗಿನ್ ಮಾ, ಗೋಲಾಪ್ ಮಾ, ಭಗವತ್ ಸಾಕ್ಷಾತ್ಕಾರವನ್ನು ಪಡೆದುಕೊಂಡಿದ್ದ ಅಮೋಘ ಸಾಧಕಿ ಅಘೋರಮಣಿ ದೇವಿ (ಗೋಪಾಲೇರ್ ಮಾ) ಮತ್ತು ಲಕ್ಷ್ಮೀದೇವಿಯವರ ಒಡನಾಟ. ಅವರೆಲ್ಲರೂ ಅಂದಿನ ಕಾಲದ ಸಾಂಪ್ರದಾಯಿಕ ಮಹಿಳೆಯರ ಆದರ್ಶ ಪ್ರತಿನಿಧಿಗಳಂತಿದ್ದವರು. ಇವಳು ನಿಸ್ವಾರ್ಥ ಪ್ರೀತಿ, ಸರಳತೆ, ಮುಗ್ಧತೆ ಮತ್ತು ನಿಸ್ಪೃಹತೆಯಿಂದ ಅವರ ಮನಸ್ಸನ್ನು ಗೆದ್ದಳು. ಶ್ರೀಶಾರದಾದೇವಿಯವರ ಪ್ರೀತಿಗೆ ಪಾತ್ರಳಾಗಿದ್ದುದರಿಂದ ಅವಳು ಅಂದಿನ ಹಿಂದೂ ಸಮಾಜದಲ್ಲಿ ಸಾಮಾನ್ಯರ ನಡುವೆ ಇದ್ದು ಬಾಲಕಿಯರ ಶಾಲೆಯನ್ನು ಪ್ರಾರಂಭಿಸಲು ಸಾಧ್ಯವಾಯಿತು.

### ಬಾಲಕಿಯರ ಶಾಲೆ ಮತ್ತು ನಿತ್ಯ ಜೀವನ

ಆಗ ಬ್ರಿಟಿಷರ ಆಡಳಿತದ ಕಾಲ. ಹಿಂದೂಗಳಿಗೆ ಬಿಳಿಯ ಪಾಶ್ಚಾತ್ಯರು ಅಸ್ಪೃಶ್ಯ ಮ್ಲೇಚ್ಛರು. ಹೀಗಿದ್ದರೂ ಸ್ವಾಮೀಜಿಯವರ ಮತ್ತು ಭಕ್ತರ ಸಹಾಯದಿಂದ ಶ್ರೀಶಾರದಾದೇವಿಯವರ ನಿವಾಸದ ಹತ್ತಿರ ಅವಳಿಗೊಂದು ಮನೆ ಸಿಕ್ಕಿತು. ಹೇಗೋ ಒಬ್ಬ ಹಿಂದೂ ವೃದ್ಧ ಮಹಿಳೆ ಅವಳ ಮನೆಗೆಲಸಕ್ಕೂ ಸಿಕ್ಕಿದಳು. ನಿವೇದಿತಾಳನ್ನು ಅವಳು 'ಅಮ್ಮ' ಎಂದು ಸಂಬೋಧಿಸುತ್ತಿದ್ದಳು. ಅವಳ ಅರ್ಧ ವಯಸ್ಸಿನ ನಿವೇದಿತಾ ಅವಳನ್ನು 'ಮಗಳೇ' ಎಂದು ಕರೆಯಬೇಕಿತ್ತು! ಒಂದು ಷರತ್ತಿನ ಮೇಲೆ ಆಕೆ ಮನೆಗೆಲಸಕ್ಕೆ ಒಪ್ಪಿದ್ದಳು. ನಿವೇದಿತಾ ಅವಳ ಅಡಿಗೆಮನೆಯನ್ನು ಪ್ರವೇಶಿಸಕೂಡದು, ಒಲೆ ಮತ್ತು ನೀರಿನ ಪಾತ್ರೆಗಳನ್ನು ಮುಟ್ಟಕೂಡದು! ಹೆಣ್ಣುಮಕ್ಕಳನ್ನು ಶಾಲೆಗೇ ಕಳುಹಿಸದಿದ್ದ ಕಾಲದಲ್ಲಿ ಪಾಶ್ಚಾತ್ಯ ಮಹಿಳೆಯ ಶಾಲೆಗೆ ಹಿಂದೂಗಳು ತಮ್ಮ ಹೆಣ್ಣುಮಕ್ಕಳನ್ನು ಹೇಗೆ ಕಳುಹಿಸಿಯಾರು? ಸ್ವಾಮೀಜಿಯವರ ಪ್ರಭಾವದಿಂದ ಮತ್ತು ಶಾರದಾದೇವಿಯವರ ಆಶೀರ್ವಾದದಿಂದ ಒಂದು ಕಟ್ಟಡ ದೊರಕಿ, ೧೮೯೮ರ ನವೆಂಬರಿನಲ್ಲಿ ಕಾಳಿಪೂಜೆಯ ಶುಭದಿನ **ಶ್ರೀರಾಮಕೃಷ್ಣ ಬಾಲಿಕಾ ವಿದ್ಯಾಲಯ** ಎಂಬ ಹೆಸರಿನಿಂದ ಅವಳ ಶಾಲೆ ಒಂದೆರಡು ಬಾಲಕಿಯರೊಂದಿಗೆ ಶ್ರೀಮಾತೆಯವರಿಂದ ಉದ್ಘಾಟಿಸಲ್ಪಟ್ಟಿತು. ಅವಳ ಶಾಲೆಯ ಮೇಲೆ ಜಗನ್ಮಾತೆಯ ಕೃಪೆ ಇರಲೆಂದು ಶಾರದಾದೇವಿಯವರು ಪ್ರಾರ್ಥಿಸಿದರು. ಅಲ್ಲಿ ಕಲಿತ ಸರಳಾದೇವಿ ಎಂಬ ಹುಡುಗಿಯೇ ಮುಂದೆ ಶ್ರೀಶಾರದಾ ಮಠದ ಮೊದಲನೆ ಅಧ್ಯಕ್ಷರಾದ ಪ್ರವ್ರಾಜಿಕಾ ಭಾರತಿಪ್ರಾಣಾ ಆದುದು!

ಆಧುನಿಕ ವಿದ್ಯಾಭ್ಯಾಸವನ್ನು ಬಾಲಕಿಯರಿಗೆ ಕೊಡಬೇಕೆಂಬುದು ನಿವೇದಿತಾಳ ಗುರಿಯಾಗಿದ್ದರೂ ಯಾವುದನ್ನು ಅಂದಿನ ಸಮಾಜ ಅಂಗೀಕರಿಸುವುದೊ ಅದನ್ನು ಕೊಟ್ಟರೆ ಮಾತ್ರ ಅವಳ ಯೋಜನೆ ಕಾರ್ಯಗತವಾಗುತ್ತಿತ್ತು. ಆದುದರಿಂದ ಸ್ವಲ್ಪ ಓದು-ಬರಹದೊಂದಿಗೆ ವರ್ಣಚಿತ್ರ ಬಿಡಿಸುವುದು, ಜೇಡಿಮಣ್ಣಿನ ಕಲಾಕೃತಿ ರಚನೆ, ಹೊಲಿಗೆ ಮತ್ತು ಕಸೂತಿಯನ್ನೂ ಹೇಳಿಕೊಡುತ್ತಿದ್ದಳು. ಅವಳು ಸಚ್ಚಾರಿತ್ರ್ಯ, ಪ್ರೀತಿ ವಿಶ್ವಾಸಗಳಿಂದ ವಿದ್ಯಾರ್ಥಿನಿಯರ



ನಿವೇದಿತಾ ಬಾಲಿಕಾ ವಿದ್ಯಾಲಯದ ಕಟ್ಟಡ

ಮತ್ತು ಅವರ ತಂದೆತಾಯಿಗಳ ಹೃದಯವನ್ನು ಗೆದ್ದಳು. ಸೇವಕಿಯರನ್ನು ಕಳುಹಿಸಿ ವಿದ್ಯಾರ್ಥಿನಿಯರನ್ನು ಶಾಲೆಗೆ ಕರೆತರುವಂತೆ ಮಾಡಿದ್ದಳು. ಶಾಲೆ ಪ್ರಾರಂಭವಾದ ಅರೇಳು ತಿಂಗಳಲ್ಲಿಯೇ ಶಾಲೆಯನ್ನು ನಡೆಸಲು ಬೇಕಾದ ಹಣದ ಸಂಗ್ರಹಣೆಗಾಗಿ ಎರಡೂವರೆ ವರ್ಷಗಳು ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಿಗೆ ಹೋದಳು. ಆ ಸಮಯದಲ್ಲಿ ಶಾಲೆಯಲ್ಲಿ ೩೦ ವಿದ್ಯಾರ್ಥಿನಿಯರಿದ್ದರು.

## ಕಾಳಿ ಮಾತೆ

ನಿವೇದಿತಾ ಇಂಗ್ಲೆಂಡಿಗೆ ಹೋಗುವ ಮುನ್ನ, ಭಾರತಕ್ಕೆ ಬಂದ ಒಂದು ವರ್ಷದಲ್ಲೆ ಕಾಳಿಮಾತೆಯ ಮೇಲೆ ಎರಡು ಉಪನ್ಯಾಸಗಳನ್ನು ಮಾಡಬೇಕಾಯಿತು. ಇದು ಅಂದಿನ ಕಾಲದ ಸಂಪ್ರದಾಯಸ್ಥರ, ಪಂಡಿತರ ಮತ್ತು ಸಮಾಜ ಸುಧಾರಕರ ಗಮನವನ್ನು ಸೆಳೆಯಿತು ಮತ್ತು ಕೆಲವರನ್ನು ಕೆರಳಿಸಿತು. ಇದಕ್ಕೆ ನಿವೇದಿತಾ ಸಿದ್ಧಳಾಗಿದ್ದಳು. ಅವಳು ಭಾರತಕ್ಕೆ ಬಂದ ಕೆಲವು ತಿಂಗಳಿಗೆ ಸ್ವಾಮೀಜಿಯವರು ಅವಳಿಗೆ ಮಂತ್ರೋಪದೇಶ ಮತ್ತು ಬ್ರಹ್ಮಚರ್ಯ ದೀಕ್ಷೆಯನ್ನು ಕೊಟ್ಟು, 'ನಿವೇದಿತಾ' ಎಂಬ ಹೆಸರನ್ನೂ ಕೊಟ್ಟು, ಕಾಳಿಯ ಮೃತ್ಯು ಸ್ವರೂಪವನ್ನು ಧ್ಯಾನಿಸಲು ಹೇಳಿದರು. ಅದರಂತೆ ನಿವೇದಿತಾ ಕಾಳಿಯ ನಾಮಸ್ಮರಣೆ, ಅವಳ ರೂಪದ ಮೇಲೆ ಧ್ಯಾನ, ಮತ್ತು ಕಾಳಿ ತತ್ತ್ವದ ಚಿಂತನೆ, ಅನುಸಂಧಾನ, ಅಧ್ಯಯನಗಳನ್ನು ಮಾಡುತ್ತ ಸ್ವಾಮೀಜಿಯವರ ಉಪದೇಶದ ಮೇರೆಗೆ ಏಕಾಂತವಾಸವನ್ನು ಮಾಡಿ ಕಾಳಿಯ ದರ್ಶನಭಾಗ್ಯವನ್ನು ಅನುಭವಿಸಿದಳು. ಫೆಬ್ರವರಿ ೧೩ ಮತ್ತು ಮೇ ೨೮, ೧೮೯೯ ರಂದು ಕಾಳಿ ಮತ್ತು ಕಾಳಿ ಪೂಜೆ ಎಂಬ ಎರಡು ಉಪನ್ಯಾಸಗಳನ್ನು ಕೊಟ್ಟಳು ಇದಕ್ಕೆ ಬೇಕಾದ ಸಿದ್ಧತೆಯನ್ನು ಶ್ರಮವಹಿಸಿ ಮಾಡಿಕೊಂಡಿದ್ದಳು. ಸ್ವಾಮೀಜಿ ಮತ್ತು ಇತರರಿಂದ ವಿಷಯಗಳನ್ನು ಸಂಗ್ರಹಿಸಿದ್ದಳು. ಮೊದಲ ಉಪನ್ಯಾಸದಲ್ಲಿ ಕೇಳುಗರು ಮಾಡಿದ್ದ ಆಕ್ಷೇಪಣೆಗಳಿಗೆ ಉತ್ತರಗಳನ್ನು ಎರಡನೆ ಉಪನ್ಯಾಸಕ್ಕೆ ಸಿದ್ಧಪಡಿಸಿಕೊಂಡಿದ್ದಳು. ತಾನು ಬರೆದು ಸಿದ್ಧಪಡಿಸಿದ್ದ ಉಪನ್ಯಾಸವನ್ನು ಸ್ವಾಮೀಜಿಯವರಿಗೆ ತೋರಿಸಿ ಅವರ ಸಮ್ಮತಿಯನ್ನು ಪಡೆದುಕೊಂಡಿದ್ದಳು. ಇಂತಹ ಉತ್ತಮ ಭಾರತೀಯ ಧರ್ಮದ ವಿದ್ಯಾರ್ಥಿನಿಯನ್ನು ಕಾಣುವುದು ದುರ್ಲಭವೇ ಸರಿ. ಉಪನ್ಯಾಸದಲ್ಲಿ ಬಲಿ ಕೊಡುವ ಪೂಜಾ ಪದ್ಧತಿಯನ್ನೂ ವಿವರಿಸಿದಳು. ಬ್ರಹ್ಮ ಸಮಾಜದವರು, ಮೂಢನಂಬಿಕೆಗಳನ್ನು ವಿರೋಧಿಸಿ ತೊಡೆದುಹಾಕಬೇಕು, ಪ್ರೋತ್ಸಾಹಿಸಬಾರದು ಎಂದು ಆಕ್ಷೇಪವೆತ್ತಿದರು. ಬಲಿ, ನಮ್ಮ ಅಹಂಕಾರದ ನೆತ್ತರಿನಲ್ಲಿ ಅದ್ದಿದ ಪುಷ್ಪಗಳನ್ನು ಕಾಳಿ ಮಾತೆಗೆ ಅರ್ಪಿಸುವುದರ ಸಂಕೇತ ಎಂದು ಹೇಳಿದಳು. ಎರಡನೇ ಉಪನ್ಯಾಸ ನಡೆದುದು ಕಾಳೀಘಾಟಿನಲ್ಲಿ. ಅಲ್ಲಿಗೆ ಅವಳು ಬರಿಗಾಲಿನಲ್ಲಿ ಮನೆಯಿಂದ ನಡೆದು ಹೋದುದು ಭಾರತೀಯರನ್ನು ವಿಸ್ಮಯಗೊಳಿಸಿ, ಭಕ್ತರ ಶ್ರದ್ಧೆಯನ್ನು ಹೆಚ್ಚಿಸಿ, ಅವರ ಸಂಪ್ರದಾಯದ ಭಕ್ತಿಗೆ ಅವಳ ಗೌರವವನ್ನು ಸೇರಿಸಿ ಅವರ ಆರಾಧ್ಯ ದೈವಕ್ಕೆ ತನ್ನನ್ನು ಅರ್ಪಿಸಿಕೊಂಡಂತಾಯಿತು. ಅವಳ ಉಪನ್ಯಾಸ ಕೇಳಲು ಹೋದ ಸ್ವಾಮೀಜಿಯವರ ಅಮೆರಿಕಾದ ಭಕ್ತ ಮಹಿಳೆಯರೂ ಕೂಡ ಬರಿಗಾಲಿನಲ್ಲಿ ನಡೆದು ಹೋಗಿ ನೆಲದ ಮೇಲೆ ಕುಳಿತಿದ್ದರು. ಎರಡು ಉಪನ್ಯಾಸಗಳನ್ನೂ ಸ್ವಾಮೀಜಿಯವರು ಮೆಚ್ಚಿದರು. ಇವಳ ಧ್ಯಾನ ಮತ್ತು ಅಧ್ಯಯನದ ಶ್ರಮದ ಫಲವೇ ಇವಳು ನಂತರ ಬರೆದ 'ಕಾಳೀಮಾತೆ' ಎಂಬ ಪುಸ್ತಕ. ಈ ಎರಡು ಉಪನ್ಯಾಸಗಳ ನಡುವೆ ಪ್ಲೇಗ್ ಉಪದ್ರವ ಕಲ್ಕತ್ತೆಯಲ್ಲಿ ತಲೆದೋರಿತು. ಸ್ವಾಮೀಜಿಯವರ ಮಾರ್ಗದರ್ಶನದಲ್ಲಿ ಕೊಳೆಗೇರಿಗಳನ್ನು ಶುಚಿ ಮಾಡಿ, ಆರೋಗ್ಯ, ನೈರ್ಮಲ್ಯದ ಬಗ್ಗೆ ಜನರ ಗಮನವನ್ನು ಸೆಳೆದು ರಾಮಕೃಷ್ಣ ಸಂಘದ ಮೊದಲ ಪರಿಹಾರ ಕಾರ್ಯದಲ್ಲಿ ಭಾಗಿಯಾದಳು.

## ರಾಜಕೀಯ ಕ್ಷೇತ್ರದಲ್ಲಿ

ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಲ್ಲಿ ಇವಳ ಶಾಲೆಗೆ ಹಣ ಸಂಗ್ರಹಿಸುವುದು ಸುಲಭವಾದ ಕಾರ್ಯವಾಗಿರಲಿಲ್ಲ. ಇವಳು ಭಾರತವನ್ನು ಸ್ವೀಕರಿಸಿದ್ದಳು. ಭಾರತ ಇವಳನ್ನು ಸ್ವೀಕರಿಸಿತ್ತು. ಆದರೆ ಪಾಶ್ಚಿಮಾತ್ಯರು, ಅದರಲ್ಲೂ ಆಳುವ ದೇಶದವರಾದ ಇಂಗ್ಲೆಂಡಿನವರು ಇವಳನ್ನು ಸಹಾನುಭೂತಿಯಿಂದ ಕಾಣಲಿಲ್ಲ. ಅವರ ಮೂದಲಿಕೆ ಮತ್ತು ನಿಕೃಷ್ಟ ದೃಷ್ಟಿಗೆ ಪಾತ್ರಳಾದಳು. ಅಮೆರಿಕಾದಲ್ಲಿ ಸ್ವಾಮೀಜಿಯವರ ಆತ್ಮೀಯ ಭಕ್ತರಾದ ಹೇಲ್ ಸಂಸಾರದವರು ಇವಳಿಗೆ ಸಹಾಯವನ್ನು ನಿರಾಕರಿಸಿದರು. ಸ್ವಾಮೀಜಿಯವರ ನಿಷ್ಠಾವಂತ ಭಕ್ತರೂ ಇವಳ ಆಪ್ತ ಮಿತ್ರರೂ ಆದ ಮಿಸ್ ಮ್ಯಾಕ್ಲಿಯಾಡ್ ಮತ್ತು ಮಿಸೆಸ್ ಬುಲ್ ಇವಳಿಗೆ ಉದಾರವಾಗಿ ಸಹಾಯ ಮಾಡಿದರು. ಪಾಶ್ಚಿಮಾತ್ಯರು ಭಾರತೀಯರನ್ನು ಅಗೌರವದಿಂದ ಕಾಣುವುದನ್ನು ಈಕೆ ಸಹಿಸದಾದಳು. ಆದಷ್ಟು ಬೇಗ ಭಾರತ ರಾಜಕೀಯ ಸ್ವಾತಂತ್ರ್ಯವನ್ನು ಪಡೆದರೆ ಮಾತ್ರ ದೇಶದ ಸ್ಥಿತಿ ಸುಧಾರಿಸುವುದೆಂದು ದೃಢವಾಗಿ ಅರಿತಳು. ಸ್ವಾಮೀಜಿಯವರ ಕಾಲಾನಂತರ, ಸ್ತ್ರೀವಿದ್ಯಾಭ್ಯಾಸದ ಜತೆಗೆ, ಇವಳ ಗಮನ ದೇಶಭಕ್ತಿ ಮತ್ತು ಸ್ವಾತಂತ್ರ್ಯದ ಆಂದೋಳನದ ಕಡೆ ಹರಿಯಿತು. ಕಲಾವಿದರು, ವಿದ್ವಾಂಸರು, ಸಮಾಜಸುಧಾರಕರಲ್ಲದೆ ರಾಜಕೀಯ ಕ್ಷೇತ್ರದ ಧುರೀಣರೂ ಅವಳಿಗೆ ಪರಿಚಯವಿದ್ದರು. ಅವರೆಲ್ಲರೂ ಇವಳ ವ್ಯಕ್ತಿತ್ವದಿಂದ ಪ್ರಭಾವಿತರಾಗಿದ್ದರು. ಕೆಲವರು ಸ್ವಾತಂತ್ರ್ಯ

ಕ್ಕಾಗಿ ವಿಧ್ವಂಸಕ ಕೃತ್ಯದಲ್ಲಿ ತೊಡಗಿದ್ದರು. ಅವರನ್ನು ಬ್ರಿಟಿಷ್ ಸರ್ಕಾರ ನಿರ್ದಾಕ್ಷಿಣ್ಯವಾಗಿ ಶಿಕ್ಷಿಸುತ್ತಿತ್ತು. ಅವರಲ್ಲಿ ಕೆಲವರು ನಂತರ ರಾಮಕೃಷ್ಣ ಸಂಘಕ್ಕೆ ಸೇರಿದರು. ನಿವೇದಿತೆಯ ಮೇಲೂ ಸಂದೇಹದಿಂದ ಗೂಢಚಾರರನ್ನು ಸರ್ಕಾರ ನೇಮಿಸಿತು. ಇವಳಿಗೆ ಬರುತ್ತಿದ್ದ ಪತ್ರಗಳನ್ನು ಒಡೆದು ಓದಿ ಹರಿದ ರೂಪದಲ್ಲಿ ಅವಳಿಗೆ ಕಳುಹಿಸಲಾಗುತ್ತಿತ್ತು. ಇವಳನ್ನು ಬಂಧಿಸಲು ಸಮಯ ಕಾಯುತ್ತಿತ್ತು. ಶಾಲಾಕಾರ್ಯ, ಬರವಣಿಗೆ, ಸೇವೆ, ಮಿತ್ರರ ಕ್ಷೇಮ, ಕಲಾ ವಿಮರ್ಶೆ, ಪ್ರಯಾಣ ಇವುಗಳ ಜತೆಗೆ ರಾಜಕೀಯ ಹೋರಾಟವೂ ಸೇರಿ, ಅವಳ ಕಾರ್ಯಕ್ಷೇತ್ರ ವಿಸ್ತಾರವಾಗಿ, ದೇಹ ಬಳಲಿ, ಆರೋಗ್ಯ ಕೆಟ್ಟು ಅಂತ್ಯ ಕಾಲ ಬೇಗನೆ ಸಮೀಪಿಸಿತು.

### ವಿಯೋಗಗಳು

ಅವಳ ಆಯಸ್ಸಿನ ಕೊನೆಯ ವರ್ಷದಲ್ಲಿ ಅನಿವಾರ್ಯವಾಗಿ ಕೊನೆಯ ಸಲ ಅವಳು ಅಮೆರಿಕಾಕ್ಕೆ ಹೋಗಬೇಕಾಯಿತು. ಇವಳ ಸೇವಾಕಾರ್ಯಕ್ಕೆ ಸಹಾನುಭೂತಿ ಮತ್ತು ಧನಸಹಾಯ ಮಾಡುತ್ತಿದ್ದ ಮಾತೃಸಮಾನಳಾದ ಮಿಸಸ್ ಬುಲ್ ತನ್ನ ಅಂತ್ಯಕಾಲದಲ್ಲಿ ನಿವೇದಿತೆಯನ್ನು ನೋಡಬಯಸಿದಳು. ಆರು ತಿಂಗಳು ಆಕೆಯ ಸೇವೆಯನ್ನು ಮಾಡಿ ಅವಳ ನಿಧನಾನಂತರ ಭಾರವಾದ ಹೃದಯದೊಂದಿಗೆ ನಿವೇದಿತಾ ಭಾರತಕ್ಕೆ ಹಿಂತಿರುಗಿದಳು. ತನ್ನ ಅಂತ್ಯಕಾಲವೂ ಸಮೀಪಿಸುತ್ತಿದೆ ಎಂದು ಅವಳಿಗೆ ಅನ್ನಿಸುತ್ತಿತ್ತು. ಭಾರತದ ರಾಜಕೀಯ ಸ್ಥಿತಿ ಬದಲಾಗುವುದೆಂಬ ಅವಳ ನಿರೀಕ್ಷೆ ಮಂಕಾಗುತ್ತಿತ್ತು. ೧೯೧೧, ಅವಳ ಕೊನೆಯ ವರ್ಷ, ಇಳಿಯ ಮೇಲೆ. ಅದು ವಿಯೋಗಗಳ ದುಃಖದಿಂದ ಕೂಡಿತ್ತು. ಅವಳಿಗೆ ಆಸರೆಯಾಗಿದ್ದ ಮಿಸಸ್ ಬುಲ್, ಅವಳಿಗೆ ಧೈರ್ಯ, ಸ್ಥೈರ್ಯ, ಮಾರ್ಗದರ್ಶನ ನೀಡುತ್ತಿದ್ದ ಸ್ವಾಮಿ ಸದಾನಂದರು, ಸ್ವಾಮಿ ರಾಮಕೃಷ್ಣಾನಂದರು ತೀರಿಕೊಂಡರು. ಅವಳ ಗೈರುಹಾಜರಿಯಲ್ಲಿ ಶಾಲೆಯನ್ನು ನಡೆಸಿಕೊಂಡು ಹೋಗುತ್ತಿದ್ದ ಸ್ನೇಹಿತೆ ಮತ್ತು ಸ್ವಾಮೀಜಿಯವರ ನೆಚ್ಚಿನ ಅಮೆರಿಕಾ ಭಕ್ತೆ ಕ್ರಿಸ್ಟೀನ್, ಮತ್ತು ಅವಳೊಂದಿಗೆ ದುಡಿಯುತ್ತಿದ್ದ ಸುಧೀರಾ ಅವಳನ್ನು ಬಿಟ್ಟುಹೋದರು. ತಾನು ಅವರ ಕೊನೆಗಾಲದಲ್ಲಿ ಸೇವೆ ಮಾಡುತ್ತಿದ್ದ ಸ್ವಾಮಿ ವಿವೇಕಾನಂದರ ತಾಯಿ ಭುವನೇಶ್ವರೀ ದೇವಿ ಕಾಲವಾದರು.

### ಚಾರಿತ್ರಿಕ ವ್ಯಕ್ತಿತ್ವ

ಗುರುಗಳು ಹೇಳಿದ್ದನ್ನು ಸುಮ್ಮನೆ ಸ್ವೀಕರಿಸುವುದು ವಿಶೇಷವೇನಲ್ಲ. ಅವರು ಹೇಳಿದ್ದನ್ನು ಪರೀಕ್ಷಿಸಿ, ಪ್ರಮಾಣಿಸಿ ತೆಗೆದುಕೊಳ್ಳುವವರು ಅದರಲ್ಲಿ ಹೆಚ್ಚು ಸ್ಥಿತರಾಗುವರು. ಶ್ರೀರಾಮಕೃಷ್ಣರು ನರೇಂದ್ರನಿಗೆ (ಸ್ವಾಮಿ ವಿವೇಕಾನಂದರಿಗೆ) ''ನಾನು ಹೇಳಿದ್ದನ್ನು ಚೆನ್ನಾಗಿ ಪರೀಕ್ಷಿಸಿ ಸತ್ಯವಾದುದನ್ನು ಮಾತ್ರ ಸ್ವೀಕರಿಸು'' ಎಂದು ಹೇಳುತ್ತಿದ್ದರು. ವಾದ ಒಂದು ಸಾಧನ, ಸತ್ಯವನ್ನು ಅರಸುವವರಿಗೆ. ಈ ದೃಷ್ಟಿಯಿಂದ ನಿವೇದಿತಾ ಸ್ವಾಮೀಜಿಯವರೊಂದಿಗೆ ವಾದಿಸುತ್ತಿದ್ದಳು. ಇದನ್ನು ಅಸ್ವೀಕಾರ ಎಂದು ಪರಿಗಣಿಸಲಾಗದು. ಕಾಳಿಯ ರೂಪ, ಅವಳ ಪೂಜೆಯಲ್ಲಿ ಕೊಡುವ ಬಲಿ ಮುಂತಾದುವನ್ನು ಅವಳು ಮೊದಲು ಇಷ್ಟಪಡುತ್ತಿರಲಿಲ್ಲ. ನಂತರ ಅಧ್ಯಯನ, ಧ್ಯಾನ, ಉಪಾಸನೆಯಿಂದ ಕಾಳಿ ಮಾತೆಯನ್ನು ತನ್ನ ಹೃದಯದಲ್ಲಿ ಪ್ರತಿಷ್ಠಾಪಿಸಿದಳು. ಇದೊಂದು ಅಸಾಧಾರಣ ಸಾಧನೆ.

ನೂರೈವತ್ತು ವರ್ಷಗಳ ನಂತರ ಅವಳ ವ್ಯಕ್ತಿತ್ವವನ್ನು ಕುರಿತು ಚಿಂತಿಸುತ್ತಿರುವ ನಮಗೆ ಅದು ಅದ್ಭುತವೂ ಅಮೂಲ್ಯವೂ ಆಗಿರುವುದು. ಏಕೆಂದರೆ, ಆಕೆ ಶ್ರೀರಾಮಕೃಷ್ಣರ ಎಲ್ಲಾ ಶಿಷ್ಯರನ್ನೂ ಕಂಡಿದ್ದಳು. ಅವರ ಒಡನಾಟ, ಆಶೀರ್ವಾದ ಅವಳಿಗೆ ಲಭಿಸಿತ್ತು. ಶ್ರೀಶಾರದಾದೇವಿಯವರನ್ನು ನಾವು ಈಗ ನೋಡುವ ಅವರ ಭಾವಚಿತ್ರದಂತೆ ಇದ್ದಾಗಲೇ ಅವರನ್ನು ನೋಡಿದ್ದಳು. ಅವರ ಪ್ರೀತಿಯ ಮಗುವಾಗಿದ್ದಳು. ರಾಮಕೃಷ್ಣ ಸಂಘ ಬೇಲೂರು ಮಠದ ಆವರಣಕ್ಕೆ ಬರುವ ಮುಂಚೆಯೇ ಆ ಸ್ಥಳವನ್ನು ನೋಡಿದ್ದಳು, ಅಲ್ಲಿ ವಾಸವಿದ್ದಳು. ಭಗವಂತನನ್ನು ಕಂಡಿದ್ದ ಗೋಪಾಲೇರ್ ಮಾಳಂತಹ ಎಂಭತ್ತು ವಯಸ್ಸಿನ ಶ್ರೀರಾಮಕೃಷ್ಣರ ಭಕ್ತೆಯ ಸೇವೆಯನ್ನು ಮಾಡಿದ್ದಳು. ಭಾರತೀಯ ಮಹಿಳೆಯ ವ್ಯಕ್ತಿತ್ವವನ್ನು ಅವಳಷ್ಟು ಚೆನ್ನಾಗಿ ಗ್ರಹಿಸಿ ವಿವರಿಸಿದವರನ್ನು, ಸ್ವಾಮೀಜಿಯವರನ್ನು ಹೊರತು ಪಡಿಸಿ, ನಾವು ಕಾಣಲಾರೆವು. ಆಕೆ ಧೀರ ಮಹಿಳೆ; ಸ್ವಾಮೀಜಿಯವರು ಪತ್ರದಲ್ಲಿ ಬರೆದು ತಿಳಿಸಿದ್ದ ಎಲ್ಲಾ ಬಗೆಯ ಸಂಕಷ್ಟಗಳನ್ನೂ ಎದುರಿಸಿ ನಮ್ಮ ದೇಶದ ಸೇವೆ ಮಾಡಿದಳು. ಅವಳ ಜೀವನದಲ್ಲಿ ಅವ್ಯಾಹತವಾಗಿ ನಡೆದುದು ಎರಡು: ಉಪನ್ಯಾಸ ಮತ್ತು ಬರವಣಿಗೆ. ಅವಳ ಲೇಖನಿ ಕೊನೆಯ ಗಳಿಗೆಯವರೆಗೂ ಬರೆಯುವುದನ್ನು ನಿಲ್ಲಿಸಿರಲಿಲ್ಲ. ಆಕೆ ಪ್ರತಿಭಾವಂತ ಉಪನ್ಯಾಸಕಿ ಮತ್ತು ಲೇಖಕಿ. ಪುಸ್ತಕಗಳನ್ನು ಬರೆದು, ಮಾರಿ, ಬಂದ ಹಣದಿಂದ ತನ್ನ ಶಾಲೆ ಮತ್ತು ಸೇವಾಕಾರ್ಯಗಳನ್ನೆಲ್ಲಾ ಮಾಡಿದುದೇ ಒಂದು ಅಸಾಮಾನ್ಯ ಹೋರಾಟ. ಅವಳ ಜೀವನವನ್ನು ಓದಿದರೆ ನಮಗೆ ಜೀವನದಲ್ಲಿ ಕೆಚ್ಚು ಬರುವುದು, ನಾವು ಭಾರತೀಯರೆಂಬ ಹೆಮ್ಮೆ ಉಂಟಾಗುವುದು. ಅವಳ ಪ್ರಭಾವದಿಂದ ಅನೇಕ ರಾಷ್ಟ್ರನಾಯಕರು ರಾಷ್ಟ್ರಭಕ್ತಿಯ ದೀವಿಗೆಯನ್ನು ಹಚ್ಚಿಕೊಂಡರು. ಸ್ತ್ರೀವಿದ್ಯಾಭ್ಯಾಸ ಮತ್ತು ಆಕೆ ಬರೆದಿಟ್ಟಿರುವ ಸ್ವಾಮಿ ವಿವೇಕಾನಂದರ ನೆನಪುಗಳು ಭಾರತೀಯರಿಗೆ ಅವಳು ನೀಡಿದ ಅತ್ಯುತ್ತಮ ಕೊಡುಗೆಗಳು. ಅವಳ ಬರವಣಿಗೆ ಇಲ್ಲದಿದ್ದರೆ ಸ್ವಾಮಿಜಿಯವರ ವ್ಯಕ್ತಿತ್ವದ ಆ ಮುಖ ನಮಗೆಂದೂ ಸಿಕ್ಕುತ್ತಿರಲಿಲ್ಲ. ಇದಕ್ಕಾಗಿ ಭರತಖಂಡದ ಜನತೆ ಅವಳಿಗೆ ಋಣಿಯಾಗಿದೆ. ಹೋರಾಟ ಎಲ್ಲರ ಜೀವನದಲ್ಲಿಯೂ ಇದೆ. ಆದರೆ ನಿವೇದಿತಾ ಅವಳ ಹೋರಾಟದ ಮೂಲಕ ಭಾರತೀಯರ ಸೇವೆಯನ್ನು ಮಾಡಿ ಅವರಿಗೆ ಸ್ವಾಮಿ ವಿವೇಕಾನಂದರ ಶೀಲಸೌಂದರ್ಯದ ಅನರ್ಘ್ಯರತ್ನವನ್ನು ಕೊಟ್ಟು ಭಾರತದ ಚರಿತ್ರೆಯಲ್ಲಿ ಸೇರಿಹೋಗಿರುವಳು.

### ಗ್ರಂಥ ಋಣ

*ಸೋದರಿ ನಿವೇದಿತಾ: **ನಾ ಕಂಡಂತೆ ನನ್ನ ಗುರುದೇವ,** ಶ್ರೀರಾಮಕೃಷ್ಣ ಆಶ್ರಮ, ಮೈಸೂರು – ೫೭೦೦೨೦*

*ಸ್ವಾಮಿ ನಿತ್ಯಸ್ಥಾನಂದ: **ಸೋದರಿ ನಿವೇದಿತಾ,** ಶ್ರೀರಾಮಕೃಷ್ಣ ಆಶ್ರಮ, ಮೈಸೂರು – ೫೭೦೦೨೦* ❖




# ನಿವೇದಿತಾಳ ‘ನಾ ಕಂಡಂತೆ ನನ್ನ ಗುರುದೇವ’: ಒಂದು ಅವಲೋಕನ

**ಎಸ್.ಎಸ್. ರಮೇಶ್**

ಸೋದರಿ ನಿವೇದಿತಾಳ ಪ್ರಮುಖ ಕೃತಿಯಿದು. ತನ್ನ ಗುರು ಸ್ವಾಮೀಜಿ ಬಗ್ಗೆ, ಅವರಿಂದ ತಾನು ಪಡೆದ ತರಬೇತಿ, ಆಶೀರ್ವಾದ ಹಾಗೂ ಕೃಪೆ ಇವುಗಳ ಒಂದು ಸ್ಪಷ್ಟ ಚಿತ್ರಣ ಇಲ್ಲಿ ಲಭಿಸುತ್ತದೆ. ಈ ಕೃತಿಯನ್ನು ಪರಿಚಯಿಸಿ ವಿಶ್ಲೇಷಿಸುವ ಲೇಖಕರು ಮೈಸೂರು ರಾಮಕೃಷ್ಣ ವಿದ್ಯಾಶಾಲೆಯಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

ಎತ್ತಣ ಮಾಮರ? ಎತ್ತಣ ಕೋಗಿಲೆ?
ಎತ್ತಣಿಂದೆತ್ತ ಸಂಬಂಧವಯ್ಯ?
ಬೆಟ್ಟದ ನೆಲ್ಲಿಕಾಯಿ, ಸಮುದ್ರದೊಳಗಣ ಉಪ್ಪು,
ಎತ್ತಣಿಂದೆತ್ತ ಸಂಬಂಧವಯ್ಯ?
ಗುಹೇಶ್ವರ ಲಿಂಗಕ್ಕೆಯೂ ಎನಗೆಯೂ
ಎತ್ತಣಿಂದೆತ್ತ ಸಂಬಂಧವಯ್ಯ?

ಮದ್ದಳೆ ನುಡಿಸುತ್ತಿದ್ದವ ಅನುಭಾವಿಯಾಗಿ ಅನುಭವ ಮಂಟಪದ ಅಧ್ಯಕ್ಷನಾದ ಅಲ್ಲಮ ಪ್ರಭುವಿನ ವೈಯಕ್ತಿಕ ಜೀವನಕ್ಕೆ ಸಂಬಂಧಪಟ್ಟ ವಚನವಿದು. ಸಮುದ್ರದಾಚೆಯ ಇಂಗ್ಲೆಂಡಿನಲ್ಲಿ ಕ್ರೈಸ್ತ ಧರ್ಮದ ಮನೆತನದಲ್ಲಿ ಜನಿಸಿದ, ಮಾರ್ಗರೆಟ್ ಎಲಿಜಬೆತ್ ನೋಬೆಲ್, ನಿಜವಾದ ಅರ್ಥದಲ್ಲಿ ಭಾರತೀಯಳಾಗಿ ಹಿಂದೂ ಸಂಸ್ಕೃತಿಯನ್ನು ಪೂರ್ಣವಾಗಿ ಮೈಗೂಡಿಸಿಕೊಂಡಿದ್ದು ಬೆರಗಿನ ಅಭಿಮಾನ ಸಂಗತಿಯೇ ಸರಿ. ‘‘ಸ್ವಾಮಿ ವಿವೇಕಾನಂದರ ಶೀಲವನ್ನು ಕಂಡು, ಅವರ ಚಾರಿತ್ರ್ಯವನ್ನು ನೋಡಿ ಅವರಿಗಾಗಿ ಅವರ ದೇಶದ ದಾಸಾನುದಾಸಳಾದೆ ನಾನು’’ ಎಂದು ಹೇಳುವ ಸೋದರಿ ನಿವೇದಿತಾಳ ಆದರ್ಶದ, ತ್ಯಾಗದ ಹೋರಾಟದ ಬದುಕಿಗೆ ಭಾರತೀಯರಾದ ನಾವು ಗೌರವ ಪೂರ್ವಕವಾಗಿ ನಮಸ್ಕರಿಸಬೇಕು.

೧೯೧೦ ಫೆಬ್ರವರಿ ೧ ಸ್ವಾಮಿ ವಿವೇಕಾನಂದರ ಜನ್ಮದಿನ. ಅಂದು ಸೋದರಿ ನಿವೇದಿತಾ ತನ್ನ ಮಹಾತ್ವಾಕಾಂಕ್ಷೆಯ ಕೃತಿ, ‘The Master as I saw him’ ನ್ನು ಸ್ವಾಮೀಜಿಯವರ ಕೊಠಡಿಯಲ್ಲಿರಿಸಿ, ನಮಸ್ಕರಿಸಿದಳು. ೧೯೦೪ ರಿಂದ ೧೯೧೦ರ ವರೆಗಿನ ಅವಧಿಯಲ್ಲಿ ರಚಿತವಾದ ಸಾರ್ಥಕ ಕೃತಿಯಿದು. The Master as I saw him ಕೃತಿಯನ್ನು, ಕನ್ನಡಿಗರಿಗೆ ರಾಮಕೃಷ್ಣ–ವಿವೇಕಾನಂದರ ಸಾಹಿತ್ಯವನ್ನು ತಮ್ಮ ಸೊಗಸಾದ ಶೈಲಿಯಲ್ಲಿ ಮುಟ್ಟಿಸಿರುವ ಶ್ರೀರಾಮಕೃಷ್ಣಾಶ್ರಮದ ಹಿರಿಯ ಸ್ವಾಮಿಗಳಾದ ಪರಮ ಪೂಜ್ಯ ಸ್ವಾಮಿ ಸೋಮನಾಥಾನಂದರು, ಭಾವಪೂರ್ಣವಾಗಿ ಅನುವಾದಿಸಿದ್ದಾರೆ. ಈ ಕೃತಿಯೇ **‘ನಾ ಕಂಡಂತೆ ನನ್ನ ಗುರುದೇವ’**.

ಸುಯೋಗ, ಸೌಭಾಗ್ಯ, ಪುಣ್ಯ, ಈ ಸಾರ್ಥಕ ಪದಗಳನ್ನು ಸೋದರಿ ನಿವೇದಿತಾ ಬಾಳಿಗೆ ಪೂರ್ಣವಾಗಿ ಅನ್ವಯಿಸಬಹುದು. ಮೇರು ವ್ಯಕ್ತಿತ್ವದ ವೇದಾಂತ ಕೇಸರಿ, ಧೀರಸಂನ್ಯಾಸಿ, ಭಾರತಾಂಬೆಯ ವಿದ್ಯಾಶಾರದೆಯ ಹೆಮ್ಮೆಯ ಪುತ್ರ ಶ್ರೀ ಸ್ವಾಮಿ ವಿವೇಕಾನಂದರ ಎದುರಿಗೆ ಕುಳಿತು ಅವರ ಸ್ಫೂರ್ತಿವಾಣಿ ಕೇಳುವ, ಅವರೊಡನೆ ಸಾವಿರಾರು ಮೈಲಿಗಳ ಪ್ರಯಾಣ ಮಾಡುವ, ನೂರಾರು ಸಂಗತಿಗಳನ್ನು ಚರ್ಚಿಸುವ ಅವಕಾಶ ಸಿಕ್ಕಿದ್ದು ಸೋದರಿ ನಿವೇದಿತಾ ಭಾಗ್ಯವೇ ಸರಿ.

**‘ನಾ ಕಂಡಂತೆ ನನ್ನ ಗುರುದೇವ’** ದ ಮೊದಲ ಅಧ್ಯಾಯದಲ್ಲಿ ನಿವೇದಿತಾ ಹೇಳುತ್ತಾಳೆ, ‘‘ನನ್ನ ಗುರುದೇವನ ಉಪನ್ಯಾಸಗಳನ್ನು ಲಂಡನ್ನಿನಲ್ಲಿ ಕೇಳಿದ್ದೆ. ಆದರೆ ಅವರ ಬಗ್ಗೆ, ಅವರ ಜೀವನದ ಬಗ್ಗೆ ಅವರ ದೇಶದಲ್ಲಿ ತಿಳಿದಿದ್ದೆ ಒಳ್ಳೆಯದಾಯಿತು. ಪೌರಸ್ತ್ಯ ಗುರುವನ್ನು ಪೌರಸ್ತ್ಯ ದೇಶದಲ್ಲೇ ಅರಿತುದ್ದು ನನ್ನ ಅದೃಷ್ಟ ಎನ್ನುವುದು ಅವಳ ಅಭಿಪ್ರಾಯ.

**‘ನಾ ಕಂಡಂತೆ ನನ್ನ ಗುರುದೇವ’** ೨೭೬ ಪುಟಗಳ, ೨೭ ಅಧ್ಯಾಯಗಳ ಕೃತಿ. ಈ ಕೃತಿಯನ್ನು ನಿರ್ದಿಷ್ಟ ಸಾಹಿತ್ಯ ಪ್ರಕಾರಕ್ಕೆ ಸೇರಿಸಲಾಗದಿರುವುದೇ ಕೃತಿಯ ವೈಶಿಷ್ಟ್ಯ. ಸ್ವಾಮಿ ವಿವೇಕಾನಂದರೊಡನೆ ಸೋದರಿ ನಿವೇದಿತಾ ಭಾರತದ ಹಲವಾರು ಪುಣ್ಯಕ್ಷೇತ್ರಗಳಿಗೆ ಹೋಗಿ ಕೆಲದಿನಗಳು ತಂಗಿದ್ದು ಒಂದು ಕಡೆಯಾದರೆ ವಿದೇಶಗಳಿಗೆ ಮಾಡಿದ ದೀರ್ಘ ಪ್ರಯಾಣ ಮತ್ತೊಂದು ಕಡೆ.

**ನಾ ಕಂಡಂತೆ ನನ್ನ ಗುರುದೇವ** ಕೃತಿಯಲ್ಲಿ ‘ಅರ್ಧ ಪ್ರಪಂಚದ ಸುತ್ತ’ ಪಾಶ್ಚಾತ್ಯದೇಶದಲ್ಲಿ ಸ್ವಾಮೀಜಿಯವರೊಡನೆ ಕೆಲವು ದಿನಗಳು ವಿದೇಶ ಪ್ರವಾಸವಾದರೆ, ‘ಉತ್ತರ ಭಾರತದಲ್ಲಿ ಪರ್ಯಟನ’, ‘ಅಮರನಾಥ’, ‘ಕ್ಷೀರಭವಾನಿ’ ಮುಂತಾದ ಅಧ್ಯಾಯಗಳಲ್ಲಿ ನಿವೇದಿತಾ ಭಾರತದ ಪವಿತ್ರ ಕ್ಷೇತ್ರಗಳ ದರ್ಶನ ಮಾಡಿಸುತ್ತಾಳೆ. ‘‘ಸ್ವಾಮೀಜಿ ಸಂಚರಿಸುತ್ತಿದ್ದಾಗ ಭರತಖಂಡದ ಭೂತಕಾಲದಲ್ಲೇ ಬಾಳಿ ಸಂಚರಿಸುತ್ತಿದ್ದಂತೆ ಇತ್ತು, ಅದೇ ಅವರ ಜೀವನದ ಉಸಿರಿನಂತೆ ಇತ್ತು ಎಂದು ಕೆಲವು ವೇಳೆ ಅನುಭವಿಸಬೇಕಾಗಿತ್ತು. ಅವರಲ್ಲಿದ್ದ ಚಾರಿತ್ರಿಕ ದೃಷ್ಟಿ ಅದ್ಭುತವಾಗಿತ್ತು.’’ ನಿವೇದಿತಾಳ ಈ ಮಾತುಗಳಲ್ಲಿ ವಿವೇಕಾನಂದರಿಗಿದ್ದ ದೇಶಾಭಿಮಾನ, ಅವರ ಅಧ್ಯಯನ, ಭಾರತದ ಭವ್ಯ ಇತಿಹಾಸದ ಬಗ್ಗೆ ಸಹಜ ಅಭಿಮಾನ

ವ್ಯಕ್ತವಾಗಿದೆ. ಸೋದರಿ ನಿವೇದಿತಾಗೆ ವಿವೇಕಾನಂದರಿಂದ ಸಿಕ್ಕಿದ ಶಿಕ್ಷಣ ಅಪರೂಪದ್ದು. ಈ ಬೋಧನೆಯಲ್ಲಿ ನಿರ್ದಿಷ್ಟ ಪಠ್ಯ ಪರೀಕ್ಷೆಗಳಿಲ್ಲ. ವಿಶಾಲ ಭಾರತ – ಹಿಂದೂ ಸಂಸ್ಕೃತಿ ಇವನ್ನು ವಿಭಿನ್ನ ದೃಷ್ಟಿಕೋನಗಳಿಂದ ಸ್ವಾಮೀಜಿ ವಿವರಿಸುತ್ತಿದ್ದರು. ನಿವೇದಿತಾ ಸುಮ್ಮನೆ ಒಪ್ಪಿಕೊಳ್ಳುವ ಸ್ವಭಾವದವಳಲ್ಲ. ಅವಳ ವೈಚಾರಿಕತೆ ಅದನ್ನು ಸ್ಪಷ್ಟವಾಗಿ ವ್ಯಕ್ತಪಡಿಸುವ ಅಭಿವ್ಯಕ್ತಿ ಕೌಶಲ್ಯ, ಸುಮ್ಮನೆ ರಾಜಿ ಮಾಡಿಕೊಳ್ಳದ ಸತ್ಯದ ಪ್ರೀತಿ ಅವಳ ಬರಹಗಳನ್ನು ಓದಿದವರಿಗೆ ಸುಪರಿಚಿತ.

**'ಅಮರನಾಥ'** ಅಧ್ಯಾಯದಲ್ಲಿ ನಿವೇದಿತಾ ಕ್ಷೇತ್ರದ ಬಗ್ಗೆ ಹೇಳುವಾಗ ಅವರ ಗುರುವಿನ ಭಾವ, ದಿವ್ಯದೃಷ್ಟಿ ಅವರು ನಡೆದುಕೊಳ್ಳುತ್ತಿದ್ದ ರೀತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾಳೆ. ನಿವೇದಿತಾಳ ನುಡಿಚಿತ್ರವನ್ನು ನೋಡಿ: ''ಯಾತ್ರಿಕರು ಏನು ಮಾಡಬೇಕೋ ಅದನ್ನೆಲ್ಲಾ ಸ್ವಾಮೀಜಿ ನೆರವೇರಿಸಿದರು. ಜಪ ಮಾಡಿದರು, ಉಪವಾಸವಿದ್ದರು, ಹತ್ತಿರ ಹರಿಯುತ್ತಿದ್ದ ಹಿಮಝರಿಯ ಪಂಚನದಿಗಳಲ್ಲಿ ಸ್ನಾನ ಮಾಡಿದರು. ಈಗ ಗುಹೆಯನ್ನು ಪ್ರವೇಶ ಮಾಡಿದ ಮೇಲೆ ಶಿವನೇ ಅವರಿಗೆ ಕಂಡಂತೆ ಇತ್ತು... ಆ ಶಿವಲಿಂಗದ


**ಅಮರನಾಥ ಗುಹೆ**

ಪವಿತ್ರತೆ ಮತ್ತು ಅದರ ಧವಳ ಕಾಂತಿಗೆ ಇವರು ಮಾರುಹೋಗಿ ತನ್ಮಯರಾದರು. ಕೈಲಾಸದ ರಹಸ್ಯವೇ ಅವರಿಗೆ ಗುಹೆಯಲ್ಲಿ ವ್ಯಕ್ತವಾದಂತೆ ಇತ್ತು. ಅನಂತರ ತಾವು ಬದುಕಿರುವ ಪರ್ಯಂತರ ಅವರು ಆ ಬೆಟ್ಟದ ಗುಹೆಯನ್ನು ಕಂಡರು ಎಂಬುದನ್ನು ಮರೆಯಲಿಲ್ಲ.''

ಸ್ವಾಮಿ ವಿವೇಕಾನಂದರು ವೇದಿಕೆಗಳ ಮೇಲೆ ಕೊಟ್ಟಿರುವ ಉಪನ್ಯಾಸಗಳ, ವಿಭಿನ್ನ ಕ್ಷೇತ್ರದ ಜನರೊಡನೆ ಮಾಡಿದ ಚರ್ಚೆಗಳು ಹಾಗೂ ಅವರು ಬರೆದ ನೂರಾರು ಪತ್ರಗಳಲ್ಲಿ ವ್ಯಕ್ತವಾಗಿರುವ ವಿಚಾರಧಾರೆ ವ್ಯಕ್ತಪಡಿಸುವ ರೀತಿ ಪ್ರಜ್ಞಾವಂತರಿಗೆ ಸುಪರಿಚಿತ. ಸೋದರಿ ನಿವೇದಿತಾ ಅವರ ವಿಶಿಷ್ಟವಾದ ಕೃತಿ **'ನಾ ಕಂಡಂತೆ ನನ್ನ ಗುರುದೇವ'**ದಲ್ಲಿ ವಿಭಿನ್ನ ಸಂದರ್ಭಗಳಲ್ಲಿ ಪ್ರತಿಕ್ರಿಯಿಸಿರುವ ರೀತಿ ಸ್ವಾರಸ್ಯಕರವಾಗಿರುವುದಲ್ಲದೆ ಚಿಂತನಾರ್ಹವಾಗಿದೆ. ಕೆಲ ಭಾಗಗಳು ವಿವೇಕಾನಂದರ ಜೀವನ ಚರಿತ್ರೆಯೇ ಆಗಿದೆ. ಹಾಗೆಯೇ ಸೋದರಿ ನಿವೇದಿತಾಳ ಆತ್ಮಚರಿತ್ರೆಯೂ ಆಗಿದೆ.


**ಕ್ಷೀರಭವಾನಿ**

ಸೋದರಿ ನಿವೇದಿತಾ **'ಕ್ಷೀರಭವಾನಿ'** ಅಧ್ಯಾಯದಲ್ಲಿ ಸ್ವಾಮೀಜಿಯವರ ಸುಪ್ರಸಿದ್ಧ ಕವನ 'Kali The Mother' (ತಾಯಿ ಕಾಳಿ) ರಚಿತವಾದ ಹಿನ್ನಲೆಯನ್ನು ವಿವರಿಸಿದ್ದಾಳೆ: ''ಒಂದು ದಿನ ಅವರು ತಮ್ಮ ಮೆದುಳು ಆಲೋಚನೆಯಿಂದ ತುಂಬಿ ತುಳುಕಾಡುತ್ತಿದೆ. ಅದನ್ನು ಬರೆಯುವವರೆಗೆ ತಮ್ಮ ಕೈ ಸುಮ್ಮನಿರಲಾರದು ಎಂದರು. ಸಾಯಂಕಾಲ ನಾವು ಎಲ್ಲೋ ಹೊರಗೆ ಹೋಗಿದ್ದವರು ದೋಣಿ ಮನೆಗೆ ಬಂದೆವು. ಸ್ವಾಮೀಜಿಯವರು ಸ್ವಲ್ಪ ಹೊತ್ತಿಗೆ ಮುಂಚೆ ಅಲ್ಲಿಗೆ ಬಂದು 'ತಾಯಿ ಕಾಳಿ' ಎಂಬ ಪದವನ್ನು ಅಲ್ಲಿ ಬಿಟ್ಟು ಹೋಗಿದ್ದರು. ಸ್ಫೂರ್ತಿಯ ಉದ್ವೇಗದಲ್ಲಿ ಬರೆದಾದ ಮೇಲೆ ಅವರಿಗೆ ಸಾಕಾಗಿ ನೆಲದ ಮೇಲೆ ಬಿದ್ದುಬಿಟ್ಟರು.'' ಸ್ವಾಮಿ ಸೋಮನಾಥಾನಂದರು ತಮ್ಮ ಕೃತಿಯಲ್ಲಿ ಇಂಗ್ಲೀಷ್‌ನಲ್ಲಿ ಬರೆದ ಮೂಲ ಪದ್ಯ ಮತ್ತು ಅದರ ಭಾವವನ್ನು ಕನ್ನಡದಲ್ಲಿ ಸಹೃದಯರಿಗೆ ನೀಡಿದ್ದಾರೆ. 'ತಾಯಿ ಕಾಳಿ' ಪದ್ಯದ ಕೊನೆಯ ಸಾಲುಗಳು ಮೌಲಿಕವಾದ ಚಿಂತನೆಯಿಂದ ಕೂಡಿದೆ: 'ಯಾರು ದುಃಖವನ್ನು ಪ್ರೀತಿಸಬಲ್ಲರೋ. ಪ್ರಳಯತಾಂಡವನೊಂದಿಗೆ ನೃತ್ಯ ಮಾಡಬಲ್ಲರೋ, ಮೃತ್ಯುವನ್ನು ದಾಟಿ ಅಪ್ಪಬಲ್ಲರೋ ಅವರೆಡೆಗೆ ತಾಯಿ ಬರುವಳು.'

ನಿವೇದಿತಾಳ **'ನಾ ಕಂಡಂತೆ ನನ್ನ ಗುರುದೇವ'** ಕೃತಿಯ ಮತ್ತೊಂದು ಮುಖ್ಯವಾದ ವಿಶೇಷವೇನೆಂದರೆ ಶೀರಾಮಕೃಷ್ಣ ಪರಮಹಂಸರು, ಶ್ರೀಮಾತೆ ಶಾರದಾದೇವಿ, ಭಗವಾನ್ ಬುದ್ಧ, ಇವರ ಮಹಾನ್ ಚಿಂತನೆಗಳ ಬಗ್ಗೆ ವಿವೇಕಾನಂದರ ಹಾಗೂ ನಿವೇದಿತಾಳ ಪೂಜ್ಯಭಾವದ ದೃಷ್ಟಿ. ಈ ಸಾಧಕರ ವ್ಯಕ್ತಿಚಿತ್ರ ಹಾಗೂ ಚಿಂತನೆಗಳು ಬೇರೆ ಬೇರೆ ಎನ್ನಿಸುವುದೇ ಇಲ್ಲ. ಅವರು ಬಾಳಿದ ರೀತಿಯೇ ದೊಡ್ಡ ಸಂದೇಶವಾಗಿದೆ. 'ಆದರ್ಶಗಳ ಘರ್ಷಣೆ' ಅಧ್ಯಾಯದ ಮೊದಲಲ್ಲಿಯೇ ಸೋದರಿ ಹೀಗೆ ಬರೆಯುತ್ತಾಳೆ: ''ಸ್ವಾಮಿ ವಿವೇಕಾನಂದರು ತಮ್ಮ ಗುರುಗಳಾದ ಶ್ರೀರಾಮಕೃಷ್ಣ ಪರಮಹಂಸರನ್ನು ಕುರಿತು, ಅವರಿಗೆ ವೇದಾಂತವೂ ಗೊತ್ತಿರಲಿಲ್ಲ, ಯಾವ ಸಿದ್ಧಾಂತವೂ ಗೊತ್ತಿರಲಿಲ್ಲ. ತಾವು ಅತಿಶ್ರೇಷ್ಠ ಬಾಳುವೆಯನ್ನು ಬಾಳಿ ಇತರರಿಗೆ ಅದನ್ನು ವಿವರಿಸುವುದಕ್ಕೆ ಬಿಟ್ಟುಹೋದರು. ಎಂದರು. ಮಹಾಪುರುಷರಿಗೆ ತಮಗೆ ಗೊತ್ತಿಲ್ಲದ ಮಹಿಮಾಮಯ ಗುಣಗಳಿರುತ್ತವೆ ಎಂಬುದು ನನ್ನ ಗುರುದೇವನ ಜೀವನದಿಂದ ವ್ಯಕ್ತವಾಯಿತು.''



**ಕಾಶ್ಮೀರ ಪಂಡಿತರೊಂದಿಗೆ ಸ್ವಾಮೀಜಿ**

ಗಿರೀಶ್‌ಚಂದ್ರ ಘೋಷ್ ಒಮ್ಮೆ ಶ್ರೀರಾಮಕೃಷ್ಣರ ಜೀವನ ಚರಿತ್ರೆ ಬರೆಯುವಂತೆ ಸ್ವಾಮಿ ವಿವೇಕಾನಂದರನ್ನು ಕೇಳಿಕೊಂಡಾಗ, ಸ್ವಾಮೀಜಿ ಕೂಡಲೇ ಸಂಕೋಚಪಟ್ಟುಕೊಂಡು ಹೇಳಿದರಂತೆ: ''ಕಡಲನ್ನು ಒಣಗಿಸುವಂತೆ ನನಗೆ ಹೇಳಿ ಅದನ್ನು ಬೇಕಾದರೆ ಮಾಡುತ್ತೇನೆ, ಪರ್ವತಗಳನ್ನು ಪುಡಿ ಪುಡಿ ಮಾಡುವಂತೆ ಹೇಳಿ ಮಾಡುತ್ತೇನೆ. ಆದರೆ ಶ್ರೀರಾಮಕೃಷ್ಣರ ಜೀವನ ಚರಿತ್ರೆಯನ್ನು ಬರೆಯುವಂತೆ ಮಾತ್ರ ದಯವಿಟ್ಟು ಹೇಳಬೇಡಿ.'' ರಾಮಕೃಷ್ಣ – ವಿವೇಕಾನಂದರ ಭಕ್ತರಿಗೆ ಒಂದು ಸೌಭಾಗ್ಯವೆಂದರೆ, ಸೋದರಿ ನಿವೇದಿತಾ ಬರೆದಿರುವ **'ನಾ ಕಂಡಂತೆ ನನ್ನ ಗುರುದೇವ'** ಕೃತಿ ಅವರೆದುರಿಗಿರುವುದು. ಈ ಕೃತಿಯಲ್ಲಿ ಹಲವಾರು ಸಂದರ್ಭಗಳಲ್ಲಿ ವಿವೇಕಾನಂದರು ತಮ್ಮ ಗುರುಗಳ ದಿವ್ಯದೃಷ್ಟಿ ಸಾರ್ಥಕ ಬದುಕು ಅವರ ಜೀವನದಲ್ಲೇ ವ್ಯಕ್ತವಾದ ಸಂದೇಶಗಳನ್ನು ಪೂಜ್ಯ ಭಾವದಿಂದ ಹಂಚಿಕೊಂಡಿರುವುದನ್ನು ನೋಡುತ್ತೇವೆ. ಭಾರತದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಸ್ವಾಮೀಜಿ ಒತ್ತು ಕೊಟ್ಟಿದ್ದರು. ಹೆಣ್ಣು ಮಕ್ಕಳ ಜಾಗೃತಿ ಹಾಗೂ ವಿದ್ಯಾಭ್ಯಾಸಕ್ಕೆ ದೊಡ್ಡ ಮಟ್ಟದ ಸೇವೆಯನ್ನು ಸೋದರಿ ನಿವೇದಿತಾಳಿಂದ ನಿರೀಕ್ಷೆ ಮಾಡಿದ್ದರು. ಹಲವಾರು ಅಡೆತಡೆಗಳ ನಡುವೆ ನಿವೇದಿತಾ ಗುರುವಿನ ಕನಸನ್ನು ಸಾಕಾರಗೊಳಿಸಲು ತ್ರಿಕರಣಪೂರ್ವಕವಾಗಿ ದುಡಿದಳು. ಆಕೆಯದು ಆದರ್ಶದ ಬದುಕು. ನೈಜವಾದ ಆದರ್ಶದ ಬದುಕು ಆಕೆಯದು.

**'ಕಲ್ಕತ್ತ ಮತ್ತು ಸ್ತ್ರೀ ಭಕ್ತ ಪರಿವಾರ'** ಎಂಬ ಅಧ್ಯಾಯದ ಪ್ರಾರಂಭದಲ್ಲೇ ಬರುವ ಮಾತುಗಳು. ಆಪ್ತವಾಗಿವೆ, ಅರ್ಥಪೂರ್ಣವಾಗಿವೆ: ''ಸ್ವಾಮೀಜಿಯವರಲ್ಲಿ ಒಂದು ಅದ್ಭುತ ಸ್ವಭಾವವಿತ್ತು. ಅವರ ಸುತ್ತ ಮುತ್ತ ಇರುವವರೆಲ್ಲ ಮಹಾವ್ಯಕ್ತಿಗಳು ಎಂಬ ಭಾವ ಮೂಡುವಂತೆ ಮಾಡುತ್ತಿದ್ದರು ಅವರು. ನನಗೆ ಯಾವ ಹೊರಗಿನ ಐರೋಪ್ಯ ಮನೆಯವರ ಸಂಪರ್ಕವೂ ಇರಲಿಲ್ಲ. ನಾನೂ ಕೂಡ ಇವರಂತೆಯೇ ಒಬ್ಬಳಾದೆ. ಸ್ವಾಮೀಜಿಯವರ ಅದ್ಭುತ ಪ್ರತಿಭೆಯ ವಾತಾವರಣದಲ್ಲಿ ಜೀವಿಸತೊಡಗಿದೆ.''

ಎರಡು ವಿಭಿನ್ನ ಪರಿಸರದಲ್ಲಿ ಹುಟ್ಟಿ ಬೆಳೆದವರ ಮುಖಾಮುಖಿಯೆಂದರೆ ಶ್ರೀಮಾತೆ ಶಾರದಾದೇವಿಯವರು ಮತ್ತು ಸೋದರಿ ನಿವೇದಿತಾ ಅವರು ಒಟ್ಟಿಗೆ ಒಂದೆಡೆ ಇದ್ದ ಸಂದರ್ಭ. ಸಂಪ್ರದಾಯದ ಹಿನ್ನೆಲೆ ನೋಡಿದರೆ ಒಬ್ಬರದು ಉತ್ತರವಾದರೆ ಮತ್ತೊಬ್ಬರದು ದಕ್ಷಿಣ. ಶ್ರೀಮಾತೆ, ನಿವೇದಿತಾ ಹಾಗೂ ಅವಳೊಡನೆ ಇದ್ದ ವಿದೇಶಿ ಮಹಿಳೆಯರೊಡನೆ ಆಹಾರ ಸ್ವೀಕರಿಸಿದರು. ಶ್ರೀಮಾತೆ ಯವರ ಈ ಸಾತ್ವಿಕ ವರ್ತನೆ ಸೋದರಿಯರಿಗೆ ವಿಶ್ವಾಸ ಮೂಡಿಸಿತು. ತುಂಬು ಹೃದಯದಿಂದ ಶ್ರೀಮಾತೆಯವರ ಬಗ್ಗೆ ನಿವೇದಿತಾ ಆಡಿರುವ ಪ್ರೀತಿ, ಗೌರವದ ನುಡಿಗಳನ್ನು ನೋಡಿ: ''ಶ್ರೀರಾಮಕೃಷ್ಣರು ಭಾರತೀಯ ನಾರಿಯರ ವಿಚಾರವಾಗಿ ಹೇಳಿದ ಕೊನೆಯ ಮಾತು ಶ್ರೀಮಾತೆಯವರ ಜೀವನ. ನನಗಂತೂ ಅವರ ಚಾರಿತ್ರ್ಯದ ಪವಿತ್ರತೆಯಷ್ಟೇ ಮುಖ್ಯ ಅವರಲ್ಲಿರುವ ರಾಣಿಯ ಗಾಂಭೀರ್ಯ ಮತ್ತು ಅವರು ಮನಸ್ಸಿನ ಔದಾರ್ಯ... ಅವರ ಜೀವನವೇ ಒಂದು ನಿರಂತರ ನೀರವ ಧ್ಯಾನದಂತೆ ಇದೆ. ಅವರ ಅನುಭವವೆಲ್ಲ ಆಧ್ಯಾತ್ಮಿಕ ಸಂಸ್ಕೃತಿಗೆ ಸೇರಿದುದು.''

ಭಗವಾನ್ ಬುದ್ಧನ ಬಗ್ಗೆ ವಿವೇಕಾನಂದರಿಗೆ ವಿಶೇಷವಾದ ಭಕ್ತಿ ಗೌರವಗಳಿತ್ತು. ಸ್ವಾಮೀಜಿಯವರು ಗೌತಮ ಬುದ್ಧನ ಬಗ್ಗೆ ಆಡಿರುವ ಮಾತುಗಳು ಶಾಶ್ವತವಾಗಿ ಉಳಿಯುವಂಥವು. ಸೋದರಿ ನಿವೇದಿತಾ ತನ್ನ ಶ್ರೇಷ್ಠ ಕೃತಿ **'ನಾ ಕಂಡಂತೆ ನನ್ನ ಗುರುದೇವ'**ದಲ್ಲಿ ಮುಖ್ಯವಾಗಿ ಎರಡು ಅಧ್ಯಾಯಗಳಲ್ಲಿ ಬುದ್ಧನ ಎತ್ತರದ ಹಾಗೂ ಅವನ ಉದಾರತೆಯ ಚಿಂತನೆಗಳ ಬಗ್ಗೆ ವಿವೇಕಾನಂದರ ದೃಷ್ಟಿಯಲ್ಲಿ ಚರ್ಚಿಸಿದ್ದಾಳೆ. **'ಸ್ವಾಮೀಜಿ ಸಂದೇಶದ ಪೂರ್ಣ ಪರ್ಯಾಲೋಚನೆ'** ಮತ್ತು **'ಸ್ವಾಮಿ ವಿವೇಕಾನಂದರ ಕಣ್ಣಿಗೆ ಬುದ್ಧ.'** ಈ ಎರಡೂ ಅಧ್ಯಾಯಗಳಲ್ಲಿ ಸೋದರಿ ತುಲನಾತ್ಮಕವಾಗಿ ವಿಚಾರಧಾರೆಯನ್ನು ಮಂಡಿಸಿರುವ ರೀತಿಯೇ ವಿಶಿಷ್ಟವಾದುದು. ಸೋದರಿ ನಿವೇದಿತಾಳ ಮಾತು ನೋಡಿ: ''ಕೇವಲ ಐತಿಹಾಸಿಕ ಘಟನೆಗಳ ಆಧಾರಕ್ಕೆ ಸ್ವಾಮೀಜಿಯವರು ಭಾವಪೂರ್ಣವಾದ ಜೀವತುಂಬಿ ಹೇಳಿದರು.'' ಇಲ್ಲಿ ನಾವು ಗಮನಿಸಬೇಕಾದ್ದು, ಸ್ವಾಮೀಜಿಯವರು ಬುದ್ಧನ ಸತಿ ಯಶೋಧರೆಯ ಬಗ್ಗೆ ಹೇಳಿದ್ದು. ಅವರ ಮಾತುಗಳನ್ನು ನಿವೇದಿತಾ ಕಲಾತ್ಮಕವಾಗಿ ನಿರೂಪಿಸಿರುವ ರೀತಿ ಅನನ್ಯವಾದುದು. ಸೋದರಿ ನಿವೇದಿತಾ ಮುಂದೆ ಬರೆದಿರುವಂಥದ್ದು ಮರೆಯಲಾಗುವುದೇ ಇಲ್ಲ. ಯಾರೋ ಬೌದ್ಧಧರ್ಮದ ವಿಷಯವಾಗಿ ತಪ್ಪು ಅಭಿಪ್ರಾಯವನ್ನು ಕೊಟ್ಟಾಗ ಅವರಿಗೆ ಉತ್ತರ ಹೇಳುವ ಸಮಯದಲ್ಲಿ ''ನಾನು ಬುದ್ಧನ ದಾಸರ ದಾಸ, ದಾಸರ ದಾಸರ ದಾಸ'' ಎಂದರು. ನಿವೇದಿತಾ ತನ್ನ ಗುರುವಿನ ಬಗ್ಗೆ ಆಡಿರುವ ಮಾತು ಸಹ ಅಮೋಘವಾದುದು. ಇವರು ಬುದ್ಧನಲ್ಲಿ ಶ್ರೀರಾಮಕೃಷ್ಣ ಪರಮಹಂಸರನ್ನು ಕಂಡರು. ಶ್ರೀರಾಮ ಕೃಷ್ಣಪರಮಹಂಸ ರಲ್ಲಿ ಬುದ್ಧನನ್ನು ಕಂಡರು.



ನಾ ಕಂಡಂತೆ ನನ್ನ ಗುರುದೇವ ಕೃತಿಯನ್ನು ವಿಭಿನ್ನ ಶಾಸ್ತ್ರಗಳ ನೆಲೆಯಲ್ಲಿ ಅಧ್ಯಯನ ಮಾಡಲು ಖಂಡಿತವಾಗಿಯೂ ಸಾಧ್ಯವಿದೆ. ಸಮಾಜಶಾಸ್ತ್ರ, ರಾಜಕೀಯಶಾಸ್ತ್ರ, ತತ್ತ್ವಶಾಸ್ತ್ರ (ಭಾರತೀಯ ಹಾಗೂ ಪಾಶ್ಚಾತ್ಯ) ಇತಿಹಾಸ, ಶೈಕ್ಷಣಿಕ ವಿಜ್ಞಾನ ಮನಃಶಾಸ್ತ್ರ.. ಇತ್ಯಾದಿ. ಸೋದರಿ ನಿವೇದಿತಾ ತನ್ನ ಕೃತಿಯಲ್ಲಿ ಸ್ವಾಮಿ ವಿವೇಕಾನಂದರ ಭವ್ಯ ವ್ಯಕ್ತಿತ್ವಕ್ಕೆ ಕಾರಣವಾದ ಪ್ರಭಾವಗಳ ಬಗ್ಗೆ ಹೇಳಿರುವುದು ಚಿಂತನಾರ್ಹವಾದುದು: ''ಮೊದಲು ಇವರಿಗೆ ಇಂಗ್ಲಿಷ್ ಮತ್ತು ಸಂಸ್ಕೃತದಲ್ಲಿದ್ದ ಪಾಂಡಿತ್ಯ. ಎರಡನೆಯದೇ ಎಲ್ಲಾ ಶಾಸ್ತ್ರಗಳ ಸಾರದಂತೆ ಇದ್ದ ಅವಕ್ಕೆ ಜ್ವಲಂತ ಉದಾಹರಣೆಯಂತೆ ಇದ್ದ ಇವರ ಗುರುಗಳ ವ್ಯಕ್ತಿತ್ವ. ಮೂರನೆಯದೇ ಭರತಖಂಡ ಮತ್ತು ಅಲ್ಲಿಯ ಜನರ ಪ್ರತ್ಯಕ್ಷ ಅನುಭವ.''

ಸೋದರಿ ನಿವೇದಿತಾ ಭಾಷಣಕಾರಳಾಗಿ, ಬರಹಗಾರ್ತಿಯಾಗಿ ತುಂಬಾ ದೊಡ್ಡ ಹೆಸರು ಮಾಡಿದವಳು. ಪ್ಲೇಗ್‌ನಿಂದ ಕೊಲ್ಕತ್ತಾ ನಲುಗುತ್ತಿದ್ದಾಗ ನಿವೇದಿತಾ ಹಗಲು ರಾತ್ರಿಯೆನ್ನದೆ ರೋಗಿಗಳಿಗಾಗಿ ದುಡಿದಳು. ಅವಳು ಯಾವ ಪ್ರಾಂತ್ಯದಿಂದ ಬಂದಿದ್ದಳೋ ಆ ದೇಶದ ಜನ ಭಾರತೀಯರನ್ನು ಕೀಳಾಗಿ ಕಂಡು ಶೋಷಿಸುತ್ತಿದ್ದರು. ತಾಯಿಯಂತೆ ಅಕ್ಕನಂತೆ ನಮ್ಮವರನ್ನು ತ್ರಿಕರಣಪೂರ್ವಕವಾಗಿ ಸಲುಹಿದಳು. ವಿಶ್ವಕವಿ ರವೀಂದ್ರನಾಥ ಠಾಕೂರ್ ನಿವೇದಿತಾಳನ್ನು '**ಲೋಕಮಾತಾ**' ಎಂದು ಕರೆದಿದ್ದು ಸರಿಯಾಗಿಯೇ ಇದೆ.

ರಾಮಕೃಷ್ಣ-ವಿವೇಕಾನಂದರ ಭಕ್ತರು ಅವರ ಸಾಹಿತ್ಯ, ಜೀವನ ಅಧ್ಯಯನ ಮಾಡುವವರು, ಶ್ರೀರಾಮಕೃಷ್ಣ ವಚನವೇದ, ಸ್ವಾಮಿ ವಿವೇಕಾನಂದರ ಸಮಗ್ರಕೃತಿ ಶ್ರೇಣಿಗಳನ್ನು, ಶ್ರೀಶಾರದಾದೇವಿ ವಚನವೇದ ಆಧ್ಯಯನ ಮಾಡಿದಂತೆ, ಅಧ್ಯಯನ ಮಾಡಲೇಬೇಕಾದ ಶ್ರೇಷ್ಠ ಕೃತಿ ಸೋದರಿ ನಿವೇದಿತಾ ಬರೆದಿರುವ '**ನಾ ಕಂಡಂತೆ ನನ್ನ ಗುರುದೇವ.**' ಈ ಕೃತಿಯ 'ಭರತ ಖಂಡದ ಭೂತ ಮತ್ತು ಭವಿಷ್ಯತ್' ಅಧ್ಯಾಯದಲ್ಲಿ ಸೋದರಿ ನಿವೇದಿತಾ ಬರೆದಿರುವ ಕೆಲ ನುಡಿಗಳನ್ನು ಇಲ್ಲಿ ಉದ್ಧರಿಸುವ ಮೂಲಕ ಈ ಲೇಖನ ಮುಗಿಸುತ್ತೇನೆ:

''ಅವರ (ಸ್ವಾಮೀಜಿ) ಮಾತೆಲ್ಲ ಮನೋರಂಜಕವಾಗಿರಲಿಲ್ಲ. ಶಿಕ್ಷಣಪ್ರದವಾಗಿಯೂ ಇರಲಿಲ್ಲ. ಮಧ್ಯೆ ಮಧ್ಯೆ ಜೀವನದ ಉದ್ದೇಶವನ್ನು ಕುರಿತು ಉತ್ಸಾಹಪೂರಿತವಾಗಿ ಮಾತನಾಡುತ್ತಿದ್ದರು. ಅವರು ಹಾಗೆ ಮಾತನಾಡಿದಾಗಲೆಲ್ಲಾ ಅವರು ಹೇಳಿದ ಪ್ರತಿಯೊಂದನ್ನು ಅನರ್ಘ್ಯರತ್ನದಂತೆ ನನ್ನ ಹೃದಯದಲ್ಲಿ ಸಂರಕ್ಷಿಸತೊಡಗಿದೆ. ನಾನು ಸ್ವಾಮೀಜಿ ಇತ್ತದನ್ನು ಅವರ ದೇಶದವರಿಗೆ ರವಾನೆ ಮಾಡುವುದಕ್ಕೆ ಇರುವ ವ್ಯಕ್ತಿಯೆಂದೂ ಅವರಿಗೂ ದೇಶದ ಅಸಂಖ್ಯಾತ ಜನರಿಗೂ ಇರುವ ಸೇತುವೆ ಎಂದು ಭಾವಿಸಿದೆ. ಭರತಖಂಡದ ಜನರು ಜಾಗೃತರಾಗಿ ಸ್ವಾಮೀಜಿಯವರ ಕನಸುಗಳನ್ನು ಒಂದಲ್ಲ ಒಂದು ದಿನ ಕಾರ್ಯಗತ ಮಾಡುವರು.'' ❖



# ಸೋದರಿ ನಿವೇದಿತಾರ ಪ್ರವಾಸ ಕೃತಿಗಳು

**ಪ್ರೊ . ಕೆ.ಬಿ.ಪ್ರಭುಪ್ರಸಾದ್**

ಸೋದರಿ ನಿವೇದಿತಾ ಸ್ವಾಮೀಜಿ ಹಾಗೂ ಇತರರೊಡನೆ ಮಾಡಿದ ಉತ್ತರ ಭಾರತ ಪ್ರವಾಸದ ಕಥನಗಳು ಅತ್ಯಂತ ರೋಚಕವೂ ಚೇತೋಹಾರಿಯೂ ಆದ ಬರಹಗಳಾಗಿವೆ. ಈ ಕೃತಿಗಳನ್ನು ಕುರಿತು ಬರೆದಿರುವ ಲೇಖಕರು ನಿವೃತ್ತ ಪ್ರಾಧ್ಯಾಪಕರು. ಉತ್ತಮ ವಿದ್ವಾಂಸರೂ, ಲೇಖಕರೂ, ಗೀತರಚನಕಾರರೂ ಆಗಿರುವ ಅವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.

**ಸೋ**ದರಿ ನಿವೇದಿತಾ ಸ್ವಾಮಿ ವಿವೇಕಾನಂದರ ಪರಮ ಶಿಷ್ಯೆ, ಮತ್ತು ಅವರ ಮಾತು ವ್ಯಕ್ತಿತ್ವಗಳಿಂದ ಸ್ಫೂರ್ತಿ ಪಡೆದು ತನ್ನ ಸಂಸ್ಕೃತಿ ಮತ್ತು ಸ್ವದೇಶಗಳ ಜೀವನ ಶೈಲಿಯನ್ನು ತ್ಯಾಗ ಮಾಡಿ ದೂರದ ಭಾರತಕ್ಕೆ ಬಂದು ಮಹಿಳೆಯರ ಮತ್ತು ದೀನ ದಲಿತರ ಏಳಿಗೆಗಾಗಿ ಜೀವಮಾನ ಪರ್ಯಂತ ಸೇವೆ ಮಾಡಿದವರು, ಸಂಪೂರ್ಣವಾಗಿ ಭಾರತೀಯ ಮಹಿಳೆಯೇ ಆಗಿ ಶ್ರೀಶಾರದಾ ಮಾತೆಯ ಪ್ರೀತಿ-ವಾತ್ಸಲ್ಯಗಳನ್ನು ಪಡೆದವರು, ಒಳ್ಳೆಯ ಶಿಕ್ಷಕಿ, ಒಳ್ಳೆಯ ಸಮಾಜ ಸೇವಕಿ, ಎಂಬುದು ಎಲ್ಲರಿಗೂ ಗೊತ್ತು. ಅವರೊಬ್ಬ ಒಳ್ಳೆಯ ಬರಹಗಾರ್ತಿ ಎಂಬುದೂ ಗೊತ್ತು. ಆದರೆ ಅವರು ಎಂಥ ಸೊಗಸಾದ ಪ್ರವಾಸ ಕಥನಗಳನ್ನು ಬರೆದಿದ್ದಾರೆ ಎಂಬುದು ಬಹು ಜನರಿಗೆ ಗೊತ್ತಿಲ್ಲ. ಈ ಪುಸ್ತಕಗಳೂ ಅಷ್ಟು ಪ್ರಚಲಿತವಾಗಿಲ್ಲ.

ಕಲ್ಕತ್ತಾದ ಉದ್ಬೋಧನ ಕಾರ್ಯಾಲಯ ಅವುಗಳನ್ನು ಪ್ರಕಟಿಸಿತು. ೧೯೬೦ರಲ್ಲಿ 'Notes of Some Wanderings with the Swami Vivekananda' ಎಂಬ ಶೀರ್ಷಿಕೆಯ ಐದನೆ ಆವೃತ್ತಿ ಹೊರಬಂದಿತು. ಇನ್ನೊಂದು ಪ್ರವಾಸ ಕಥನ 'Kedarnath and Badri Narayan' ಇದನ್ನೂ ಉದ್ಬೋಧನ ಕಾರ್ಯಾಲಯದಿಂದ ಪುನರ್ಮುದ್ರಿಸಿದರು. ಅದನ್ನು A Piligrim's Dairy ಎಂಬ ಶೀರ್ಷಿಕೆಯಡಿ ಪ್ರಕಟಿಸಿದ್ದರು.

ಮೊದಲು ಸ್ವಾಮಿ ವಿವೇಕಾನಂದರೊಡನೆ ಮಾಡಿದ ಸುತ್ತಾಟಗಳ ಬಗ್ಗೆ ಅಂದರೆ ಅಮರನಾಥ ಯಾತ್ರೆಯ ಕಥನವನ್ನು ಅವಲೋಕಿಸೋಣ. ಸ್ವಾಮೀಜಿಯ ಜೊತೆಗೆ ಯಾತ್ರೆ ಹೊರಟ ತಂಡದಲ್ಲಿ ಕೆಲವು ಐರೋಪ್ಯ ಅತಿಥಿಗಳು, ಶಿಷ್ಯರಲ್ಲಿ ಧೀರಮಾತಾ, ಜಯಾ ಎಂಬ ಹೆಸರಿನವರು, ಸೋದರಿ ನಿವೇದಿತಾ ಇದ್ದರು.

ಇದು ಒಳ್ಳೆಯ ಪ್ರವಾಸ ಕಥನವಷ್ಟೇ ಅಲ್ಲ, ಸ್ವಾಮಿ ವಿವೇಕಾನಂದರ ವಿಶಿಷ್ಟ ಮಹಾನ್ ವ್ಯಕ್ತಿತ್ವದ ಚಿತ್ರಣವಾಗಿದೆ. ಅವರ ಭಕ್ತಿ, ಬಹುಶ್ರುತತ್ವ, ವಿಚಾರ ದೃಷ್ಟಿಕೋನ, ಮಾನವೀಯ ಅಂತಃಕರಣಗಳ ಮೇಲೆ ಬೆಳಕು ಚೆಲ್ಲುವ ಐತಿಹಾಸಿಕ ದಾಖಲೆ ಸಹ ಆಗಿದೆ. ''ಎಲ್ಲರ ಮಾತುಗಳನ್ನೂ ಆಲಿಸುವ, ಎಲ್ಲರ ಭಾವನೆಗಳಿಗೂ ಸ್ಪಂದಿಸುವ, ಯಾರನ್ನೂ ನಿರಾಕರಿಸದ, ಕಡೆಗಣಿಸದ ಮಹಾನ್ ವ್ಯಕ್ತಿಯ ಕಣ್ಣುಗಳಿಂದ ಲೋಕವನ್ನು ನೋಡುವ ಸೌಭಾಗ್ಯ ನಮ್ಮದಾಗಿತ್ತು'' ಎನ್ನುತ್ತಾರೆ ಲೇಖಕಿ ನಿವೇದಿತಾ.

ಶ್ರೀಗುರು ಮಹಾರಾಜರ ಕೃಪೆಯಿಂದ ನರೇಂದ್ರ ನಿರ್ವಿಕಲ್ಪ ಸಮಾಧಿಯ ಆನಂದದ ಅನುಭವವನ್ನು ಪಡೆದು ಅದೇ ಸ್ಥಿತಿಯಲ್ಲಿದ್ದುಬಿಡುವ ಆಸೆಯನ್ನು ವ್ಯಕ್ತಪಡಿಸಿದಾಗ ಶ್ರೀರಾಮಕೃಷ್ಣರು, ''ನೀನು ಮಹಾವೃಕ್ಷವಾಗಿ ಬೆಳೆದು ಲೋಕಕಲ್ಯಾಣಕ್ಕಾಗಿ ಸೇವೆ ಮಾಡುತ್ತೀಯಾ ಎಂದು ಭಾವಿಸಿದರೆ, ಇದೇನು ಸ್ವಾರ್ಥಿಯಾಗಿ ನಿನ್ನ ಆನಂದವನ್ನೇ ಬಯಸುತ್ತೀಯಲ್ಲ, ಕಿಂಚಿತ್ ಅನುಭವವನ್ನು ಕೊಟ್ಟು ಅದರ ಕೀಲಿ ಹಾಕಿ, ಕೀಲಿ ಕೈಯನ್ನು ನಾನಿಟ್ಟುಕೊಂಡಿದ್ದೇನೆ'' ಎಂದುಬಿಟ್ಟರು. ಸ್ವಾಮೀಜಿ ಇದನ್ನೆಲ್ಲ ನೆನಪಿಸಿಕೊಂಡು ಹೇಳುತ್ತಾರೆ.

ಸ್ವಾಮೀಜಿಯ ಭಕ್ತಿ, ಮೇಧಾಶಕ್ತಿ, ಸೌಂದರ್ಯಪ್ರಜ್ಞೆ, ಸಂದರ್ಭೋಚಿತವಾಗಿ ಪ್ರಕಟವಾಗುತ್ತಾ ಅವರ ಸಹಜವಾದ ಪ್ರೀತಿ,

ಕರುಣೆ, ಶಿಷ್ಯವಾತ್ಸಲ್ಯಗಳು ಸದಾ ವ್ಯಕ್ತವಾಗಿದ್ದವು ಎಂಬುದರ ಚಿತ್ರಣವೂ ಈ ಪ್ರವಾಸ ಕಥನದಲ್ಲಿ ಸುಂದರವಾಗಿ ಮೂಡಿದೆ. ಪ್ರವಾಸ ಮಾಡಿದ ಕಾಲ ೧೮೯೮ ಮಾರ್ಚ್‌ನಿಂದ ಸೆಪ್ಟೆಂಬರ್‌ವರೆಗೆ. ಪ್ರವಾಸ ಮಾಡಿದುದು ಬೇಲೂರು, ನೈನಿತಾಲ್, ಆಲ್ಮೋರಾ, ಕಡೆಯಲ್ಲಿ ಕಾಶ್ಮೀರದ ಬೇರೆ ಬೇರೆ ಸ್ಥಳಗಳು ಮತ್ತು ಅಮರನಾಥ ಗುಹೆ. ಸ್ವಾಮೀಜಿಯೊಂದಿಗೆ ಅಮರನಾಥ ಗುಹೆಗೆ ಹೋಗಿ ಹಿಮ ಸ್ತಂಭರೂಪಿ ಶಿವನ ದರ್ಶನ ಮಾಡಿದ್ದು ಪ್ರವಾಸ ಕಥನಕ್ಕೆ ಒತ್ತು ಕೊಟ್ಟಂತೆ ನಿರೂಪಿತವಾಗಿದ್ದರೂ ಉಳಿದುದೆಲ್ಲ ಬೇರೆ ಬೇರೆ ಸ್ಥಳಗಳಲ್ಲಿ ತಂಗಿದಾಗ ಸ್ವಾಮೀಜಿ ಆಡಿದ ಮಾತು, ಮಾಡಿದ ಉಪನ್ಯಾಸಗಳು, ಮತ್ತು ಹೇಳಿದ ಹಳೆಯ ನೆನಪುಗಳು, ಮುಖ್ಯವಾಗಿ ನಮ್ಮ ಗಮನಕ್ಕೆ ಸೆಳೆಯುವುದು ಸ್ವಾಮಿ ವಿವೇಕಾನಂದರ ವಿಶಿಷ್ಟ ಹಾಗೂ ಅಸಾಧಾರಣ ವ್ಯಕ್ತಿತ್ವ. ಕೆಲವೊಮ್ಮೆ ಗಂಭೀರವಾಗಿ, ಕೆಲವೊಮ್ಮೆ ವಿನೋದವಾಗಿ, ಹಾಸ್ಯಭರಿತ ಸಲ್ಲಾಪವಾಗಿ, ದೃಢವಾದ ಅಧಿಕಾರವಾಣಿಯ ನಿಲುವಾಗಿ, ತಮ್ಮ ಅನಿಸಿಕೆ, ವಿಚಾರಗಳನ್ನು ಮಂಡಿಸುತ್ತಿದ್ದುದು. ನಮಗೆ ತಿಳಿಯದ ಸ್ವಾಮೀಜಿಯ ಬೇರೊಂದು ಆಯಾಮದ ಮೇಲೆ ಬೆಳಕು ಚೆಲ್ಲುವ ಐತಿಹಾಸಿಕ ದಾಖಲೆಯಾಗಿ ಈ ಪುಸ್ತಕ ಮೌಲಿಕವಾಗಿದೆ.

ಸಾಂದರ್ಭಿಕವಾಗಿ ಬರುವ ಹೊಸ ವಿಚಾರಗಳನ್ನು ಹೇಳುವುದಲ್ಲದೆ ಹಳೆಯ ಕೆಲವು ನೆನಪುಗಳನ್ನು ಸ್ವಾಮೀಜಿ ಹೇಳುತ್ತಾರೆ. ತಾವು ಪರಿವ್ರಾಜಕರಾಗಿ ಭಾರತದ ಪರ್ಯಟನ ಮಾಡುತ್ತಿದ್ದಾಗ ಭೇಟಿಯಾದ ಖೇತ್ರಿ ಮಹಾರಾಜರ ಅರಮನೆಯಲ್ಲಿ ತಾವು ಅತಿಥಿಯಾಗಿದ್ದಾಗ, ರಾಜದರ್ಬಾರಿನಲ್ಲಿದ್ದ ನರ್ತನ ಕಾರ್ಯಕ್ರಮಕ್ಕೆ ತಾವು ಹೋಗದಿದ್ದಾಗ ನರ್ತಕಿ ಹಾಡಿದ, '**ಪ್ರಭು ಮೇರಿ ಅವಗುಣ ಚಿತ್ ನ ಧರೋ**' ಎಂಬ ಹೃದಯದ ಅನುಕಂಪವನ್ನು ತಟ್ಟುವ ಹಾಡಿಗೆ ತಾವು ಮಿಡಿದುದನ್ನು ನೆನಪು ಮಾಡಿಕೊಂಡು ಹೇಳುತ್ತಾರೆ. ಸ್ವಾಮೀಜಿ ಶುಷ್ಕ ವೇದಾಂತಿಯಾಗಿರಲಿಲ್ಲ. ಮಾನವೀಯ ಅಂತಃಕರಣದ, ಕರುಣೆಯ ಮೂರ್ತಿ ಆಗಿದ್ದರು.

ಇನ್ನೊಂದು ಸಂದರ್ಭದಲ್ಲಿ, ''ನನ್ನ ಗುರು ಶ್ರೀರಾಮಕೃಷ್ಣರು ನಿಸ್ಸೀಮ ಭಕ್ತರು, ನಾನು ಜ್ಞಾನ ಮಾರ್ಗಪಥಿಕ ಎಂದು ನೀವೆಲ್ಲ ತಿಳಿದಿರುವಿರಿ. ನಿಜದಲ್ಲಿ ಅವರು ಮಹಾಜ್ಞಾನಿ. ನಾನು ಭಕ್ತ ಮಾತ್ರ'' ಎಂದು ಸ್ಪಷ್ಟಪಡಿಸುತ್ತಾರೆ.

ಬೇಲೂರಿನಲ್ಲಿ ಗಂಗಾತೀರದಲ್ಲೊಂದು ಕುಟೀರ. ಸ್ವಾಮೀಜಿ, ''ಇದು ಧೀರಮಾತಾರ ಮನೆ. ಈ ಪುಟ್ಟ ಮನೆ ನಿಜಕ್ಕೂ ಸ್ವರ್ಗ. ಏಕೆಂದರೆ ಇಲ್ಲಿ ತುಂಬಿರೋದು ಪ್ರೀತಿ ಒಂದೇ'' ಎಂದು ಹೇಳಿದರು. ಇಲ್ಲಿಗೆ ದಕ್ಷಿಣೇಶ್ವರ ಕಾಣುತ್ತದೆ. ಇಲ್ಲಿ ತಂಗಿದಾಗ ಸ್ವಾಮೀಜಿ ತಮ್ಮ ಪರಿವ್ರಾಜಕ ಪರ್ಯಟನದ ಬಗ್ಗೆ ಹೇಳುತ್ತಾರೆ. ಊರಿಂದೂರಿಗೆ ಅವರ ಹೆಸರು ಬದಲಾಗುತ್ತಿತ್ತಂತೆ. ಯಾರಿಗೂ ಅವರ ನಿಜವಾದ ಹೆಸರು ಗೊತ್ತಾಗಲಿಲ್ಲ. ಇನ್ನೊಂದು ದಿನ ಉಮಾ-ಶಿವ, ರಾಧಾ-ಕೃಷ್ಣರನ್ನು ಕುರಿತು ಮಾತಾಡುತ್ತ ಸಂಬಂಧಿಸಿದ ಹಾಡುಗಳನ್ನು ತಮ್ಮ ಮಧುರ ಕಂಠದಿಂದ ಹಾಡುತ್ತಾರೆ. ನಿತ್ಯ ಒಂದೊಂದು ವಿಷಯ. ಒಮ್ಮೆ ಭಾರತದ ಧರ್ಮಗಳ ಬಗ್ಗೆ, ಇನ್ನೊಮ್ಮೆ ಇತಿಹಾಸದ ಬಗ್ಗೆ, ಮಗದೊಮ್ಮೆ ಜಾನಪದದ ಬಗ್ಗೆ, ಒಟ್ಟಿನಲ್ಲಿ ಭಾರತ ಭೂಮಿಯೇ ಒಂದು ಉತ್ಕೃಷ್ಟ ಪುಣ್ಯಕಥೆ ಎನಿಸುವಂತೆ ತಿಳಿಸುವರು. ''ಸ್ವಾಮೀಜಿ ಹಾಡಿದ ಅರ್ಧನಾರೀಶ್ವರ ಸ್ತೋತ್ರವನ್ನಂತೂ ಮರೆಯಲಾರೆವು'' ಎನ್ನುತ್ತಾರೆ ನಿವೇದಿತಾ. ವಿಷಯ ಯಾವುದನ್ನೇ ಎತ್ತಿಕೊಳ್ಳಲಿ ಕೊನೆಯಾಗುತ್ತಿದ್ದುದು ಅದ್ವೈತ, ಅನಂತತೆಯ ವಿಷಯಕ್ಕೆ. ಲೌಕಿಕ ಎಂಬುದು ತ್ಯಾಗ, ಸೇವೆ ಅನುಷ್ಠಾನ ವೇದಾಂತಗಳಲ್ಲಿ ಮಾತ್ರ ಒಂದು ಸಲ ಐರೋಪ್ಯ ಅತಿಥಿಗಳನ್ನು ಸ್ವಾಗತಿಸುತ್ತಾ ಮಾತು ಪರ್ಶಿಯನ್ ಕಾವ್ಯದ ಕಡೆ ತಿರುಗಿತು. ಸ್ವಾಮೀಜಿ ಇದ್ದಕ್ಕಿದ್ದಂತೆ ಪಾರ್ಸೀಭಾಷೆಯ ಒಂದು ಪ್ರೇಮಗೀತೆಯನ್ನು ಉಲ್ಲೇಖಿಸಿ, ''ಪ್ರೇಮಿಗೆ ತನ್ನ ಪ್ರಿಯತಮೆಯ ಮುಖದ ಮೇಲಿನ ಮಚ್ಚೆ ಸಮರ್‌ಖಂಡದ ಸಮಸ್ತ ಸಂಪದಕ್ಕೂ ಮಿಗಿಲಾದುದು'' ಎನ್ನುತ್ತಾನೆ. ಇಂಥ ಪ್ರೇಮಗೀತೆಯನ್ನು ಮೆಚ್ಚಲಾರದವನನ್ನು ನಾನೆಂದೂ ಗೌರವಿಸುವುದಿಲ್ಲ ಎಂದರು. ಹೀಗೆ ಎಷ್ಟೋ ವಿಷಯಗಳ ಬಗ್ಗೆ ಸ್ವಾಮೀಜಿ ಅಧಿಕಾರವಾಣಿಯಿಂದ ಹೇಳಬಲ್ಲವರಾಗಿದ್ದರು. ಅಷ್ಟೇ ಅಲ್ಲ, ಅನೇಕ ಮಹತ್ವದ ವಿಚಾರಗಳನ್ನು ಪ್ರಾಸಂಗಿಕವಾಗಿ ಸಹಜ ಸಂಭಾಷಣೆಯಲ್ಲಿ ಹೇಳುತ್ತಿದ್ದುದು ಈ ಕಥನದಿಂದ ತಿಳಿಯುತ್ತದೆ.

ಹೀಗೆ ಪುಸ್ತಕದ ಶೀರ್ಷಿಕೆಗೆ ಸರಿಯಾಗಿ ಇದು ಗುರುವಿನೊಂದಿಗೆ ಸೋದರಿ ನಿವೇದಿತಾ ಮಾಡಿದ ಕೆಲವು ಅಲೆದಾಟಗಳ ನಿರೂಪಣೆ. ಈ ಯಾತ್ರಾತಂಡ ನೈನಿತಾಲ್, ಆಲ್ಮೋರಾ, ಬರೇಲಿ, ಬಾರಾಮುಲ್ಲಾ, ಕಾಶ್ಮೀರದ ಕಣಿವೆ, ಶ್ರೀನಗರ, ಝೀಲಮ್‌ನ ನದೀತೀರ, ಮುಂತಾದ ಕಡೆ ತಂಗುತ್ತ, ಮುನ್ನಡೆಯುತ್ತ ಪ್ರವಾಸದ ಉದ್ದಕ್ಕೂ ಚೆಲುವಿನ ಕಾಶ್ಮೀರದ ನಿಸರ್ಗವನ್ನು ಹಿಮಾಲಯ ಪರ್ವತಶ್ರೇಣಿಯ ಭವ್ಯತೆಯನ್ನು ಸ್ವಾಮೀಜಿಯವರ ಅಮೂಲ್ಯವಾದ ಮಾತುಗಳನ್ನು ತಮ್ಮ ಹೃನ್ಮನಗಳಲ್ಲಿ ತುಂಬಿಕೊಳ್ಳುತ್ತಿದ್ದರು.

ಒಂದು ದಿನ ಒಬ್ಬ ಮುಸಲ್ಮಾನ್ ಶಿಷ್ಯ ಹೇಳಿದ್ದು ಅವಿಸ್ಮರಣೀಯ. ''ಸ್ವಾಮೀಜಿ, ಮುಂದೆ ಯಾರಾದರೂ ನಿಮ್ಮನ್ನು ದೈವೀ ಅವತಾರವೆಂದು ಹೇಳಿದರೆ ಅವರಲ್ಲಿ ನಾನೇ ಮೊದಲು, ತಿಳಿಯಿರಿ.'' ಒಂದು ಬೆಳಗು ಸ್ವಾಮೀಜಿ ರಾಜಾ ರಾಮಮೋಹನ ರಾಯರನ್ನು ಕುರಿತು ದೀರ್ಘ ಉಪನ್ಯಾಸ ನೀಡುತ್ತಾರೆ. ಆಧುನಿಕ ಚಿಂತನೆಯ ಹರಿಕಾರರಾದ ಅವರ ಸಂದೇಶದಲ್ಲಿ ಮೂರು ಮುಖ್ಯ ಅಂಶಗಳನ್ನು ಎತ್ತಿ ಹೇಳುತ್ತಾರೆ. ಒಂದನೆಯದು ಆತ ವೇದಾಂತವನ್ನೊಪ್ಪಿಕೊಂಡುದು, ಎರಡನೆಯದು ರಾಷ್ಟ್ರಭಕ್ತಿ, ಮೂರನೆಯದು ಹಿಂದೂ-ಮುಸ್ಲಿಮ್ ಸೋದರತ್ವ. ರಾಮಮೋಹನರಾಯರ ವಿಶಾಲ ದೃಷ್ಟಿ, ದೂರದರ್ಶಿತ್ವಗಳನ್ನು ಸ್ವಾಮೀಜಿ ಮೆಚ್ಚಿಕೊಂಡಿದ್ದರು.

ಒಂದು ದಿನ, ಪಶ್ಚಿಮದ ಸಂಸ್ಕೃತಿ ಸತ್ಯವನ್ನೂ ಪೂರ್ವದ ಸಂಸ್ಕೃತಿ ಶೀಲವನ್ನು ಎತ್ತಿ ಹಿಡಿದ ವಿಚಾರವನ್ನು ಹೇಳುತ್ತ ಹಿಂದೂ ವೈವಾಹಿಕ ಪದ್ಧತಿಯ ಉದಾಹರಣೆ ಕೊಟ್ಟರು. ಪಾಶ್ಚಾತ್ಯರ ವ್ಯಾಪಾರ ವಹಿವಾಟಿನಲ್ಲಿ ನಂಬಿಕೆ-ವಿಶ್ವಾಸ-ಪ್ರಾಮಾಣಿಕತೆ, ಪೌರ್ವಾತ್ಯ (ಭಾರತೀಯ)ರಲ್ಲಿ ಶೀಲ-ಚಾರಿತ್ರ್ಯ, ಮುಖ್ಯವಾಗಿರುವುದಕ್ಕೆ ಇದೇ ಕಾರಣ. ವರ್ಣಾಶ್ರಮವನ್ನು ರಾಷ್ಟ್ರಗಳಿಗೆ ಅನ್ವಯಿಸಿ ಹಿಂದೂಗಳು ಬ್ರಾಹ್ಮಣ ವರ್ಣವನ್ನೂ ರೋಮನ್ ಸಾಮ್ರಾಜ್ಯ ಕ್ಷತ್ರಿಯ ವರ್ಣ

ವನ್ನೂ ಇಂಗ್ಲಿಷ್ ವೈಶ್ಯಧರ್ಮವನ್ನೂ ಪ್ರತಿನಿಧಿಸುವುದನ್ನು ಹೇಳಿದರು.

ಕಾವ್ಯಮಯವಾಗಿ ಆರಂಭವಾದ ಪ್ರವಾಸ ಕಥನ ಸರಳವಾದ ಸುಂದರವಾದ ಭಾಷೆಯಲ್ಲಿ (ಇಂಗ್ಲಿಷಿನಲ್ಲಿ) ಮುನ್ನಡೆಯುತ್ತದೆ. ಮೊದಲು ಬೇಲೂರಿನ ಗಂಗಾತಟ, ನಂತರ ಹಿಮಾಲಯದ ಮಡಿಲು, ನೈನಿತಾಲ್, ಆಲ್ಮೋರಾ, ಕಾಶ್ಮೀರದ ಕಣಿವೆ, ಎಲ್ಲ ಕಡೆ ಮರೆಯಲಾಗದ ಕ್ಷಣಗಳು. ಕಥನ ಉದ್ದಕ್ಕೂ ಕಾವ್ಯಮಯವಾಗಿ ಸಾಗುತ್ತದೆ. ''ಸ್ವಾಮೀಜಿ ನಿಸರ್ಗದ ಚೆಲುವು, ಹಿಮಾಲಯದ ದೇವಭೂಮಿಯ ಭವ್ಯತೆಗಳಲ್ಲಿ ಮುಳುಗುವಷ್ಟೇ ಸಹಜವಾಗಿ ವಾಸ್ತವದಲ್ಲಿತುಂಬಿರುವದೀನದಲಿತರಹಾಗೂಮೂರ್ಖರೊಂದಿಗೂ ಒಂದಾಗುವವರು. ಅವರನ್ನೂ ಪ್ರೀತಿಯಿಂದ ನೋಡುವ, ಹಾಗೆಯೆ ದೋಷವೆಣಿಸದೆ ಲೋಕವನ್ನೆಲ್ಲ ನೋಡುವ ದೃಷ್ಟಿ; ಈ ಪ್ರಕಾಂಡ ಪ್ರತಿಭೆಯ ಚಂಚಲತೆಯನ್ನು ಕಂಡು ನಕ್ಕಿದ್ದೇವೆ. ದಿವ್ಯ ಅಗ್ನಿಯ ಪಕ್ಕ ಕುಳಿತು ಹಿತವಾದ ಶಾಖದ ಅನುಭವವಾಗಿದೆ. ಪರಮಪಾವನ ದಿವ್ಯಶಿಶು ಎಚ್ಚರವಾಗುವುದಕ್ಕೆ ಸಾಕ್ಷಿಯಾಗಿದ್ದೇವೆ'' ಎಂದು ಉದ್ಗರಿಸುತ್ತಾರೆ ಲೇಖಕಿ ನಿವೇದಿತಾ.

ಸ್ವಾಮೀಜಿ ಜೊತೆಗೆ ಊರಿಂದೂರಿಗೆ ಪ್ರಯಾಣ ಮಾಡುವ ಸೊಗಸು, ಬಾರಾಮುಲ್ಲಾದ ಅರಳಿದ ಹೂಗಳ ನೋಟ, ಇಸ್ಲಾಮಾಬಾದ್‌ನ ಪಾಪ್ಲರ್ ಮರಗಳು ಹಸಿರು ಗದ್ದೆ ಭತ್ತದ ಪೈರು, ನಕ್ಷತ್ರಗಳ ಬೆಳಕಿನಲ್ಲಿ ಹಿಮಾಲಯ ಶ್ರೇಣಿಗಳ ದೃಶ್ಯ, ದೆಹಲಿಯ ರಾಜವೈಭವ, ತಾಜಮಹಲಿನ ತಂಪಾದ ಚೆಲುವು ಇವುಗಳನ್ನು ಪದಗಳಲ್ಲಿ ವ್ಯಕ್ತಗೊಳಿಸುವುದು ಸಾಧ್ಯವಾದರೆ ಎಂಬ ಆಸೆ. ''ಆದರೆ ಮಧುರ ಸ್ಮೃತಿಗಳಲ್ಲಿ ಅಚ್ಚಳಿಯದಿರುವ ಅನುಭವ ನಮ್ಮದು...''ಎನ್ನುತ್ತಾರೆ ಲೇಖಕಿ.

ಸ್ವಾಮೀಜಿ ಆಗ್ರಾದ ತಾಜ್‌ಮಹಲ್ ಕುರಿತು ಹೇಳಿದಂತೆಯೇ ವ್ಯಾಸರು, ಶುಕಮುನಿ, ಜನಕ ಮಹಾರಾಜರ ಬಗ್ಗೆ ಭಗವದ್ಗೀತೆಯ ಹಿರಿಮೆಯ ಬಗ್ಗೆ, ಹಾಗೂ ಈಶ್ವರಚಂದ್ರ ವಿದ್ಯಾಸಾಗರರು ಯುವಕರ ಮೇಲೆ ಬೀರಿದ ಪ್ರಭಾವವನ್ನು ಕುರಿತೂ ಮಾತನಾಡುತ್ತಿದ್ದರು.

ಪ್ರವಾಸದಲ್ಲಿರುವಾಗ ಬಂದ ಎರಡು ಸಾವುಗಳ ಸುದ್ದಿ ಸ್ವಾಮೀಜಿಯವರನ್ನು ಆಳವಾಗಿ ಕಲಕಿತು. ಪವಹಾರಿ ಬಾಬಾ ದೇಹತ್ಯಾಗ ಮಾಡಿದ ಸುದ್ದಿ ಬಂತು. ಸ್ವಾಮೀಜಿ ಅವರನ್ನು ರಾಮಕೃಷ್ಣ ಪರಮಹಂಸರಿಗೆ ಮಾತ್ರ ದ್ವಿತೀಯರೆಂದು ಹೇಳುತ್ತ, ''ಕಚ್ಚಿದ ಹಾವನ್ನು ತನ್ನ ಪ್ರಿಯತಮನ (ದೇವರ) ದೂತ'' ಎಂದು ಪವಹಾರಿ ಬಾಬಾ ಹೇಳಿದ್ದನ್ನು ನೆನಪು ಮಾಡಿಕೊಂಡರು. ಇದಾದ ಮರುದಿನ ತಮ್ಮ ನಿಷ್ಠಾವಂತ ಶಿಷ್ಯ ಗುಡ್‌ವಿನ್ ಊಟಿಯಲ್ಲಿ ತೀರಿಹೋದ ಸುದ್ದಿ ಬಂತು. ಇದು ಮಾತ್ರ ಸ್ವಾಮೀಜಿಯವರನ್ನು ಗಾಢವಾಗಿ ಬಾಧಿಸಿತು. ಗುಡ್‌ವಿನ್‌ನನ್ನು ದೇವರು ಇಷ್ಟು ಬೇಗ ಕರೆದುಕೊಳ್ಳಬಾರದಿತ್ತು, ಆದರೆ ದೈವಸಂಕಲ್ಪವನ್ನು ನಿಂದಿಸಲಾಗದು ಎಂದರು.

ಈ ನೋವನ್ನು ಮರೆಯಲು ಸ್ವಾಮೀಜಿ ಮನಸ್ಸನ್ನು ರಾಧಾ, ಕೃಷ್ಣ, ಗೋಪಿಯರ ಕಡೆ ತಿರುಗಿಸಿದರು. ಇಂಥ ವ್ಯಕ್ತಿಯೊಬ್ಬ ನಿಜವಾಗಿಯೂ ಇದ್ದನೇ ಎಂಬಷ್ಟು ಅದ್ಭುತ ವ್ಯಕ್ತಿ ಶ್ರೀಕೃಷ್ಣ. ದನಗಾಹಿ, ಮಹಾಮುತ್ಸದ್ದಿ, ನಿರ್ಲಿಪ್ತ, ಗೀತೆಯಂತಹ ಚಿರಂತನ ಮಹತ್ಕೃತಿಯನ್ನು ಕೊಟ್ಟ ಜಗದ್ಗುರು. ನಿಜಕ್ಕೂ ಆತ ಪೂರ್ಣಾವತಾರಿಯೇ ಎಂದು ಸ್ವಾಮೀಜಿ ಶ್ರೀಕೃಷ್ಣನನ್ನು ಬಣ್ಣಿಸಿ, ಭಾವಪರವಶರಾಗಿ ಶ್ರೀಕೃಷ್ಣ ಭಾರತೀಯ ಸಂಸ್ಕೃತಿಯಲ್ಲಿ ನೃತ್ಯ–ಸಂಗೀತಗಳ ವಸ್ತುವಾಗಿ ಜನಮನದಲ್ಲಿ ಸದಾ ಇದ್ದಾನೆ ಎಂದರು.

ಕಾಶ್ಮೀರದಲ್ಲಿ ಬಿಡಾರ ಮಾಡಿದಾಗ ಸ್ವಾಮೀಜಿ ಕನಿಷ್ಕನ ರಾಜ್ಯಭಾರ, ಸಾಮ್ರಾಟ್ ಅಶೋಕನ ಮಹಾನ್ ವ್ಯಕ್ತಿತ್ವ, ಬೌದ್ಧಧರ್ಮದ ಪ್ರಸಾರ, ಮಹಮ್ಮದೀಯರ ದಾಳಿ, ಕ್ರೈಸ್ತಮತ ಸದ್ದಿಲ್ಲದೆ ಹಬ್ಬಿದ್ದು, ಎಲ್ಲವನ್ನೂ ಹೇಳಿದರು. ಚೆಂಗೀಸ್‌ಖಾನ್, ಅಲೆಕ್ಸಾಂಡರ್, ನೆಪೋಲಿಯನ್‌ರ ಬಗ್ಗೆ ಸ್ವಾಮೀಜಿ ಹೇಳಿದ್ದು ಆಶ್ಚರ್ಯವನ್ನುಂಟುಮಾಡಿತು. ಸಾಮಾನ್ಯವಾಗಿ ಅವರನ್ನು ಆಕ್ರಮಣಕಾರರು ಎಂದು ಹೇಳುವುದು ವಾಡಿಕೆ. ಆದರೆ ಸ್ವಾಮೀಜಿ ಅವರಲ್ಲಿ ಮಹತ್ವಾಕಾಂಕ್ಷೆ ಇತ್ತೇ ವಿನಹ ಅಧಿಕಾರ ದಾಹ, ನೀಚತನ ಇರಲಿಲ್ಲ ಎಂದರು ಸ್ವಾಮೀಜಿ. ಒಂದು ದಿನ ಸ್ವಾಮೀಜಿಯವರು 'ಕ್ಷೀರಭವಾನಿ'ಗೆ ಕರೆದೊಯ್ದರು. ನಮ್ಮ ದೋಣಿಯನ್ನು ನಡೆಸಿದ ಮುಸಲ್ಮಾನ ಆ ಕ್ಷೇತ್ರದಲ್ಲಿ ಪಾದರಕ್ಷೆ ಹಾಕಿಕೊಂಡು ಹೋಗಲು ಬಿಡಲಿಲ್ಲ.

ಸ್ವಾಮೀಜಿ ಬೇರೆ ಬೇರೆ ಧರ್ಮಗಳ ಬಗ್ಗೆ ಮಾತಾಡುತ್ತ ಇಸ್ಲಾಮ್ ಒಂದೇ ಪುರೋಹಿತರ ಮಧ್ಯಸ್ಥಿಕೆಯನ್ನು ತೆಗೆದು ಹಾಕಿದ್ದು ಎಂದು ಮೆಚ್ಚುಗೆ ಸೂಚಿಸಿದರು.

ಯಾತ್ರಾತಂಡ ಗುರುವಾರ ಪೆಹಲ್ಗಾಮ್ ತಲುಪಿತು. ಅಮರನಾಥಕ್ಕೆ ಹಿಂದೊಮ್ಮೆ ಸೋನ್‌ಮಾರ್ಗ್ ದಾರಿಯಲ್ಲಿ ಹೊರಟಿದ್ದ ಸ್ವಾಮೀಜಿ ಹಿಮಪಾತದಿಂದಾಗಿ ಹಿಂತಿರುಗಿದ್ದರು. ಈ ಸಲ ಅಮರನಾಥಕ್ಕೆ ಪೆಹಲ್ಗಾಮ್ ದಾರಿ ಸಲೀಸಾಗಿತ್ತು. ಅಮರನಾಥಕ್ಕೆ ಹತ್ತಿರವಾದಂತೆ ಘಟ್ಟದ ದಾರಿ ಕಡಿದಾಗಿ ಬಹಳ ಕಠಿಣ ಮತ್ತು ಅಪಾಯಕಾರಿ ಎನಿಸಿತು. ನಡೆದು, ಹತ್ತಿ, ಸ್ವಾಮೀಜಿ ಸುಸ್ತಾದರು. ಅಮರನಾಥ ದರ್ಶನಕ್ಕೆ ತಮ್ಮ ಜೊತೆ ಬರಲು ತಮ್ಮ ಮಾನಸಪುತ್ರಿ ನಿವೇದಿತಾಗೆ ಹೇಳಿದರು. ಗುಹೆ ಬಳಿಗೆ ಹೋಗುವ ಮುನ್ನ ತಿಳಿಯಾಗಿ ಹರಿಯುತ್ತಿದ್ದ ಝರಿಯಲ್ಲಿ ಸ್ನಾನ ಮಾಡಿ ಗುಹೆಯ ಮುಂದೆ ನಿಂತರು. ಬಹು ದೊಡ್ಡ ಗುಹೆ. ನಿವೇದಿತಾರ ಕಣ್ಣಳತೆಯಲ್ಲಿ ೩–೪ ಅಂಕಣಗಳ ಚರ್ಚು ಇರುವಷ್ಟು ವಿಶಾಲ. ಆ ಹಿಮಸ್ತಂಭ ಸುಮಾರು


ಕಾಶ್ಮೀರ ಕಣಿವೆಯಲ್ಲಿ



೧೦-೧೨ ಅಡಿ ಎತ್ತರವಿರಬಹುದು. ಅದರ ಹಿಮ ಕರಗುತ್ತಿರಲಿಲ್ಲ. ಲಿಂಗರೂಪಿ ಅಮರನಾಥ ಶಿವನ ದರ್ಶನ ಮಾಡುತ್ತಿದ್ದಂತೆ ಸ್ವಾಮೀಜಿಗೆ ಕೈಲಾಸದ ಬಾಗಿಲೇ ತೆರೆದಂತಾಯಿತು. ಆಪಾದಮಸ್ತಕ ಪುಲಕಿತರಾದರು. ಸಾಕ್ಷಾತ್ ಶಿವನ ಚರಣಗಳನ್ನು ಸ್ಪರ್ಶಿಸಿದಂತಾಗಿ ಭಾವಪರವಶರಾದರು. ಎಲ್ಲಿ ತಮ್ಮ ಪ್ರಜ್ಞೆ ತಪ್ಪುವುದೊ ಎಂದು ಮನಸ್ಸನ್ನು ಗಟ್ಟಿಮಾಡಿ ಹಿಡಿತದಲ್ಲಿಟ್ಟುಕೊಳ್ಳಬೇಕಾಯಿತು. ಅರ್ಧಗಂಟೆಯ ನಂತರ ನದಿಯ ಕಡೆಯ ಬಂಡೆಯ ಮೇಲೆ ಕುಳಿತು ''ಅತ್ಯಂತ ಆನಂದವಾಯಿತು'' ಎಂದು ಹೇಳಿದರು. ನಗ್ನ ಸಾಧು, ಸ್ವಾಮೀಜಿ ಮತ್ತು ನಾನು ಊಟಕ್ಕೆ ಕುಳಿತಾಗ ಸ್ವಾಮೀಜಿ, ''ಈ ಹಿಮಲಿಂಗ ಸಾಕ್ಷಾತ್ ಶಿವನೇ ಎಂದು ನನಗನಿಸಿತು. ಇಲ್ಲಿ ಯಾವ ಕಳ್ಳ ಪೂಜಾರಿಯೂ ಇಲ್ಲ, ಪೂಜೆಯ ಮಾರಾಟವೂ ಇಲ್ಲ. ಆಯಾ ಭಕ್ತರ ಮಾನಸಿಕ ಪೂಜೆ ಅಷ್ಟೆ. ಯಾವ ಧಾರ್ಮಿಕ ಪುಣ್ಯಕ್ಷೇತ್ರದಲ್ಲೂ ನನಗಿಷ್ಟು ಆನಂದವಾಗಿರಲಿಲ್ಲ'' ಎಂದರು. ಅಮರನಾಥ ಹಿಮಲಿಂಗ ಒಂದು ಕವಿತೆ ಎಂದು ಉದ್ಗಾರ ಮಾಡಿದರು. ''ಅಮರನಾಥದ ಈ ಗುಹೆಯನ್ನೂ ಆಕಾರಗೊಳ್ಳುವ ಲಿಂಗರೂಪಿ ಹಿಮಸ್ತಂಭವನ್ನು ಮೊಟ್ಟಮೊದಲು ಕಂಡುಹಿಡಿದವರು, ಚೆದುರಿದ ಕುರಿಗಳನ್ನು ಹುಡುಕುತ್ತ ಬಂದ ಕುರಿಗಾಹಿಗಳೇ ಇರಬೇಕು. ಅಕಸ್ಮಾತ್ತಾಗಿ ಈ ಗುಹೆಯನ್ನು ನೋಡಿ ಒಳಗೆ ಹೋಗಿ ಕರಗದೆ ನಿಂತಿರುವ ಈ ಹಿಮಲಿಂಗವನ್ನು ನೋಡಿ ಬೆರಗಾಗಿರಬೇಕು'' ಎಂದು ಸ್ವಾಮೀಜಿ ಊಹಿಸಿ ಹೇಳಿದರು.

ಮಾರನೆ ಬೆಳಿಗ್ಗೆ ಪೆಹಲ್ಗಾಮಿಗೆ ಬಂದು ತಲುಪಿದರು. ಆ ರಾತ್ರಿ ಅಲ್ಲಿನ ಬಿಡಾರದಲ್ಲಿದ್ದು, ಬೆಳಗಾಗುವ ಮುನ್ನವೆ ಹೊರಟು ರವಿ ಉದಯವಾಗುತ್ತಿದ್ದಂತೆ ಮೃತ್ಯು ಸರೋವರವನ್ನು ದಾಟಿ ಗಿರಿಶಿಖರದ ಕೆಳಗೆ ಕಿರಿದಾದ ದಾರಿಯಲ್ಲಿ ಘಟ್ಟವನ್ನಿಳಿದು ತಪ್ಪಲಲ್ಲಿದ್ದ ಒಂದು ಹಳ್ಳಿಯಲ್ಲಿ ಉಪಾಹಾರ ಮಾಡಿದರು. ಆ ರಾತ್ರಿ ಬೆಳದಿಂಗಳಲ್ಲಿ ಸುತ್ತುವರಿದ ಶಿಷ್ಯರಿಗೆ ತಮಗಾದ ಅಮರನಾಥ ಶಿವನ ದಿವ್ಯ ದರ್ಶನದ ಬಗ್ಗೆ ಹೇಳಿದರು. ಮರುದಿನ ಇಸ್ಲಾಮಾಬಾದಿಗೆ ನಂತರ ಶ್ರೀನಗರಕ್ಕೆ ಸುರಕ್ಷಿತವಾಗಿ ಬಂದು ಸೇರಿದರು.

ಯಾತ್ರೆ ಮುಗಿದು ಯಾವಾಗ ತಮ್ಮ ಎಂದಿನ ಸ್ವತಂತ್ರ ಸಾಧು ಜೀವನಕ್ಕೆ ಮರಳುತ್ತೇನೋ ಎಂದು ಸ್ವಾಮೀಜಿ ತವಕಿಸುತ್ತಿದ್ದಂತೆ ಕಂಡಿತು. ಅಕ್ಟೋಬರ್ ಮೊದಲವಾರ ಸ್ವಾಮೀಜಿ ಕಲ್ಕತ್ತಾಗೆ ತಾವು ಹಿಂತಿರುಗುವುದಾಗಿ ಹೇಳಿದರು. ಐರೋಪ್ಯರ ತಂಡ ಉತ್ತರ ಭಾರತದ ಲಾಹೋರ್, ಡೆಲ್ಲಿ, ಆಗ್ರಾ ಮುಂತಾದ ಸ್ಥಳಗಳಿಗೆ ಹೋಗುವ ಯೋಜನೆ ತಿಳಿಸಿದರು. ಒಟ್ಟಿಗೆ ಲಾಹೋರಿಗೆ ಬಂದು ಸ್ವಾಮೀಜಿ ಮತ್ತು ಅವರ ಶಿಷ್ಯರು ಕಲ್ಕಾತ್ತಾಕ್ಕೆ-ಐರೋಪ್ಯ ಪ್ರವಾಸಿಗರು ಪ್ರೇಕ್ಷಣೀಯ ಸ್ಥಳಗಳಿಗೆ ಪೂರ್ವ ಯೋಜನೆಯಂತೆ ಹೊರಟರು.

ಕವಿಯ ಭಾವ, ಕಲಾವಿದನ ಕಣ್ಣು, ನಿಸರ್ಗದ ಅನುಸಂಧಾನ, ಸ್ವಾಮಿ ವಿವೇಕಾನಂದರ ವ್ಯಕ್ತಿತ್ವ ಎಲ್ಲವೂ ಈ ಪ್ರವಾಸ ಕಥನದಲ್ಲಿ ಮೇಳವಿಸಿವೆ. ಎಲ್ಲ ವಿವರಗಳನ್ನು ಸೋದರಿ ನಿವೇದಿತಾ ಕಣ್ಣಿಗೆ ಕಟ್ಟುವಂತೆ ಬರೆದಿದ್ದಾರೆ. ಎಲ್ಲಿಯೂ ವಿವರ ಬೇಸರ ಬರುವಷ್ಟು ದೀರ್ಘವಾಗಿಲ್ಲ. ಬರೆಹ ಹಿತ-ಮಿತ-ರಸಭರಿತವಾಗಿದೆ. ಕೇವಲ ೧೨೭ ಪುಟಗಳಲ್ಲಿ ಇಷ್ಟೆಲ್ಲ ಬರೆದಿರುವುದು ಆಶ್ಚರ್ಯಕರವಾಗಿದೆ. ತನ್ನ ಮೆಚ್ಚಿನ ನೆಚ್ಚಿನ ಗುರು ವಿವೇಕಾನಂದರನ್ನು ಎಲ್ಲಿಯೂ ಭಾವುಕತೆಯಿಂದ ಆರಾಧನಾದೃಷ್ಟಿಯಿಂದ ಚಿತ್ರಿಸಿಲ್ಲ. ಅವರ ಸಹಜವಾದ ನೈಜ, ವಸ್ತುನಿಷ್ಠ ಚಿತ್ರಣವಷ್ಟೆ ಇದ್ದರೂ ಸ್ವಾಮೀಜಿಯ ಮೇಲಿರುವ ನಮ್ಮ ಮೆಚ್ಚುಗೆ ಅಭಿಮಾನ ಇನ್ನೂ ಹೆಚ್ಚಾಗುತ್ತದೆ.

ನಿವೇದಿತಾರ ಇನ್ನೊಂದು ಪ್ರವಾಸ ಕಥನ 'ಕೇದಾರನಾಥ ಮತ್ತು ಬದರಿ ನಾರಾಯಣ'(Kedarnath and Badri Narayan) ಎಂಬ ಶೀರ್ಷಿಕೆಯ ಪುಸ್ತಕವನ್ನೀಗ ಅವಲೋಕಿಸೋಣ. ನೀವೇದಿತಾ ಮತ್ತು ಅವರ ಸಹ ಯಾತ್ರಿಕರ ತಂಡ ಕೇದಾರ್-ಬದರಿ ಯಾತ್ರೆ ಕೈಗೊಂಡ ಈ ಪ್ರವಾಸದ ಕಥನ ಸ್ವಾರಸ್ಯವಾಗಿ ಆರಂಭವಾಗುತ್ತದೆ. ಅದನ್ನು ಲೇಖಕಿ ನಿವೇದಿತಾರ ಬಾಯಲ್ಲೇ ಕೇಳೋಣ: ''ನಾವು ಕೇದಾರನಾಥಕ್ಕೂ ಬದರಿ ನಾರಾಯಣ ಕ್ಷೇತ್ರಕ್ಕೂ ಮಧ್ಯೆ ಒಂದು ಕಡೆ ಊಟಕ್ಕೆ ಕುಳಿತಾಗ ನಮ್ಮ ತಂಡದ ಒಬ್ಬರು ಇದ್ದಕ್ಕಿದ್ದಂತೆ, ಭಾವುಕರಾಗಿ ನಾವೀಗ ಮಾನಸ ಸರೋವರಕ್ಕೆ ಬಹಳ ಹತ್ತಿರದಲ್ಲಿದ್ದೇವೆ-ಕೇವಲ ೧೦-೧೨ ದಿನಗಳ ಪಯಣ ಅಷ್ಟೆ. ಈ ಪ್ರಾಂತವನ್ನೆಲ್ಲ ಜನ ಕೈಲಾಸ ಎಂದು ಕರೆಯುತ್ತಾರೆ. 'ನಾವೀಗ ಕೈಲಾಸದಲ್ಲಿದ್ದೇವೆ!' ಎಂದರು. ಹಾಗೆ ನೋಡಿದರೆ ಕೈಲಾಸದ ಪ್ರವೇಶದ್ವಾರ ವಾರಣಾಸಿ ಎನ್ನಬಹುದು. ಅಲ್ಲಿಂದ ಉತ್ತರಕ್ಕೆ ಇರುವ ಹರಿದ್ವಾರ, ಹೃಷಿಕೇಶ ಪುಣ್ಯ ಕ್ಷೇತ್ರಗಳಿಗೆ ಏರುದಾರಿಯಲ್ಲಿ ಬಂದಿದ್ದೇವೆ. ಕೇದಾರನಾಥ ಮುಕುಟಪ್ರಾಯವಾದುದು. ಅಲ್ಲಿಂದ ಬದರಿ ನಾರಾಯಣ ಕ್ಷೇತ್ರಕ್ಕೆ ಈಗ ಹೊರಟಿದ್ದೇವೆ. ಉತ್ತರಭಾರತದ ಹಿಮಾಲಯ ಶ್ರೇಣಿಗಳಲ್ಲಿ ಯಾತ್ರೆ ಮಾಡುವವರಿಗೆ ಸರಿಯಾದ ಮಾರ್ಗದರ್ಶಕ ಮಾಹಿತಿಯನ್ನು ಯಾರೂ ಕೊಟ್ಟಿಲ್ಲ. ಇದುವರೆಗೆ ಯಾರೂ ಮಾಡಿರದ ಈ ಕಾರ್ಯವನ್ನು ಈಗ ನಾವಾದರೂ ಮಾಡಬೇಕಾಗಿದೆ. ಯಾವ ಯಾವ ಕ್ಷೇತ್ರಗಳಿಗೆ ಹೇಗೆ ಯಾವ ದಾರಿಯಲ್ಲಿ ಹೋಗಬೇಕು, ದಾರಿಯಲ್ಲಿ ಸಿಕ್ಕುವ ಸ್ಥಳಗಳು ಯಾವುವು, ಅವುಗಳ ಹೆಸರು, ಯಾವುದು ನೇರವಾದ ಹತ್ತಿರದ ದಾರಿ, ಎಷ್ಟೆಷ್ಟು ಮೈಲಿ ದೂರ, ಯಾವ ಯಾವ ಕಡೆ ಧರ್ಮಛತ್ರ-ಬಿಡಾರಗಳ ಸೌಕರ್ಯ ಇದೆ, ಊಟ ವಸತಿಗಳಿಗನುಕೂಲವಿದೆ ಎಂಬೀ ವಿವರಗಳನ್ನೆಲ್ಲ ಮಾಡಿಕೊಳ್ಳಲು ಅನುಕೂಲವಾಗುತ್ತದೆ. ಈ ಮಾಹಿತಿಗಳಿಂದ, ಈಗಿರುವ ಅಜ್ಞಾನದ ಕತ್ತಲಲ್ಲಿ ನುಗ್ಗಿ ಅನೇಕ ತೊಂದರೆಗಳನ್ನು


ಬದರೀನಾಥ

ಎದುರಿಸುವ ಪರಿಪಾಟಲು ತಪ್ಪುತ್ತದೆ'' ಎಂದು ನಿವೇದಿತಾ ಬರಹವನ್ನಾರಂಭಿಸುತ್ತಾರೆ. ಮತ್ತೆ ಅವರ ಮಾತಿನಲ್ಲಿ: ''ಸುಲಿಯದೆ, ಶೋಷಿಸದೆ ಕರೆದುಕೊಂಡು ಹೋಗುವ ಒಳ್ಳೆಯ ಮಾರ್ಗದರ್ಶಕ ಪಂಡಾ ನಮಗೆ ಸಿಗಬೇಕು. ಆತ ವಿದ್ವಾಂಸನಾಗಿರಬಾರದು. ಸ್ಥಳಗಳ ಪೂರ್ಣ ಪರಿಚಯವಿರುವ ಮತ್ತು ಅಲ್ಲಿನ ಭಾಷೆ, ಜನಸಂಪರ್ಕವುಳ್ಳವನಾಗಿದ್ದರೆ ಉತ್ಕೃಷ್ಟ. ಯಾತ್ರೆ ಮಾಡುತ್ತಾ ನನಗೆ ಒಂದು ವಿಶೇಷ ಸಂಗತಿ ಅನುಭವಕ್ಕೆ ಬಂದಿತು. ಅದು ಭಾರತದ ಧಾರ್ಮಿಕ–ಸಾಂಸ್ಕೃತಿಕ ಪರಂಪರೆಯ ಭಾವೈಕ್ಯತೆ. ದೇಶದ ನಾನಾ ಭಾಗಗಳ ನಾನಾ ಪ್ರಾಂತಗಳ ಯಾತ್ರಿಕರು ದಾರಿಯುದ್ದಕ್ಕೂ ಸಿಕ್ಕುತ್ತಾರೆ. ಪಂಜಾಬಿಗಳು, ಮಹಾರಾಷ್ಟ್ರದವರು ಬಂಗಾಳಿಗಳು ಮುಂತಾಗಿ ನಾನಾ ಭಾಷಿಕರು ಯಾತ್ರಾರ್ಥಿಗಳಾಗಿ ಬಂದಿರುತ್ತಾರೆ. ಇನ್ನೊಂದು ವಿಶೇಷವೆಂದರೆ ಈ ಭಾಗದ ಅರ್ಚಕರೆಲ್ಲ ದಕ್ಷಿಣ ಭಾರತದವರೇ; ರಾವುಲರು ಎಂದು ಪ್ರಸಿದ್ಧರಾಗಿರುವ ಇವರು ತಮ್ಮ ಸ್ಥಾನಕ್ಕೆ ತಮ್ಮ ಕಡೆಯವರನ್ನೇ ಕರೆಸಿಕೊಳ್ಳುತ್ತಾರೆ. ಹೀಗಾಗಿ ಇಡೀ ಭರತಖಂಡ ಧಾರ್ಮಿಕವಾಗಿ ರಾಷ್ಟ್ರೈಕ್ಯತೆಯನ್ನು ಸಾಧಿಸಿದೆ. ಇದನ್ನು ವಿದೇಶೀಯರಾದ ನಾವು ಅರ್ಥ ಮಾಡಿಕೊಳ್ಳಬೇಕು. ಆಗ ನಮ್ಮ ಅನೇಕ ತಪ್ಪು ತಿಳಿವಳಿಕೆಗಳು ದೂರವಾಗುತ್ತವೆ.

''ಭಾರತದಲ್ಲಿ ಸ್ತ್ರೀಯರಿಗೆ ಒಂದು ವಿಶೇಷ ಗೌರವಸ್ಥಾನ–ಮಾನ್ಯತೆ ಮತ್ತು ಬದುಕು ಇವೆಯೇ ಎಂದು ಸಂದೇಹಿಸುವವರಿಗೆ ಈ ತೀರ್ಥಯಾತ್ರೆ ಅಂತಹ ಸಂದೇಶವನ್ನು ನಿವಾರಣೆ ಮಾಡಿ ಕಣ್ಣು ತೆರೆಸುತ್ತದೆ. ಯಾತ್ರೆಯಲ್ಲಿ ನಾನು ಕಂಡ ಹೆಣ್ಣುಮಕ್ಕಳು ಯಾರೆ ಆಗಿರಲಿ ಚಿಕ್ಕವರೊ, ವಯಸ್ಸಾದವರೊ, ಅವರಾರಿಗೂ ಭಯ, ಸಂಕೋಚಗಳಿರಲಿಲ್ಲ. ಅಬಲೆಯರೂ ಆಗಿರಲಿಲ್ಲ. ದಾರಿಯುದ್ದಕ್ಕೂ ಜಪಮಣಿ ಎಣಿಸುತ್ತಲೊ, ಜಪಮಣಿ ಇಲ್ಲದವರು ಬಾಯಲ್ಲೇ ದೇವರ ನಾಮಗಳನ್ನು ಜಪಿಸುತ್ತ ಅರೆ ಧ್ಯಾನ ಸ್ಥಿತಿಯಲ್ಲಿದ್ದುದು ಕಂಡಿತು. ಪರಸ್ಪರ ಪರಿಚಯವಿಲ್ಲದಿದ್ದರೂ ತಾವೆಲ್ಲ ಚಿರಪರಿಚಿತರು ಎಂಬ ಹಾಗೆ ಮಾತಾಡಿಸುತ್ತಾರೆ. ಮಧ್ಯೆ ಮಧ್ಯೆ ಎದುರು ಬಂದವರೊಡನೆ ನಗುಮುಖದಿಂದ ಜೈ ಕೇದಾರನಾಥ ಎಂತಲೊ, ಜೈ ಬದರೀನಾಥ ಎಂದೋ ಗೌರವ ಸೂಚಿಸುತ್ತಾರೆ, ನಮಸ್ಕಾರ ಎಂದು ಹೇಳುವ ಹಾಗೆ. ಇದು ಇವರ ಶಿಷ್ಟಾಚಾರ. ಅವರ ಕಣ್ಣುಗಳಲ್ಲಿ ತುಂಬಿದ ಪ್ರೀತಿ, ಹೊಳಪು ಅಚ್ಚರಿಗೊಳಿಸುತ್ತವೆ. ಕೆಲವರು ನಮಸ್ಕಾರ ಎಂದು ಮಾತಿನಲ್ಲಿ ಹೇಳದಿದ್ದರೂ ತಲೆಬಾಗಿ ಸೂಚಿಸುತ್ತಾರೆ. ಆ ಗಾಂಭೀರ್ಯ, ಆ ಚೆಲುವು ನನ್ನ ಮನವನ್ನು ಸೆಳೆದವು. ಒಂದೊಂದು ಕಡೆ ಒಂದು ಕ್ಷಣ ನಿಂತು ತಮ್ಮ ಪಾದರಕ್ಷೆಗಳನ್ನು ಕಳಚಿ ಬದಿಗಿಟ್ಟು ಉದ್ದಂಡ ನಮಸ್ಕಾರ ಮಾಡುವರು – ಯಾವ ವ್ಯಕ್ತಿಗೂ ಅಲ್ಲ, ದೂರದ ಪುಣ್ಯಕ್ಷೇತ್ರಕ್ಕೆ, ಬಹುಶಃ ಅಲ್ಲಿನ ದೇವರಿಗೆ, ತಮ್ಮನ್ನು ಯಾತ್ರೆಯ ಉದ್ದಕ್ಕೂ ರಕ್ಷಣೆ ಮಾಡುತ್ತ ಕರೆದೊಯ್ಯುತ್ತಿದ್ದಾನೆ ಅಗೋಚರವಾಗಿ ಎಂದು ಭಾವಿಸುವ ಕೇದಾರನಾಥನಿಗೆ ಇಲ್ಲವೆ ಬದರೀನಾಥನಿಗೆ, ಭಕ್ತಿಯಿಂದ, ಕೃತಜ್ಞತೆಯಿಂದ.''

ಐರಿಷ್ ಮಹಿಳೆ ಸೋದರಿ ನಿವೇದಿತಾ, ಇಲ್ಲಿ ಭಾರತದ ಸಂಸ್ಕೃತಿ ಒಬ್ಬ ಸಾಮಾನ್ಯ ವ್ಯಕ್ತಿಯಲ್ಲೂ ಪ್ರತಿಫಲಿಸುವುದನ್ನು ಗುರುತಿಸುತ್ತಾಳೆ. ಭಾರತದ ಜೀವಾಳವೇ ಇಂತಹ ಭಕ್ತಿ, ಮತ್ತು ಅಧ್ಯಾತ್ಮ ಎಂದು ಅರಿಯುತ್ತಾಳೆ.

ಬತ್ತಿದ ಪ್ರವಾಹದ ನಡುವಣ ಹೆಬ್ಬಂಡೆಗಳನ್ನೇರುತ್ತ ಇಬ್ಬರು ತುಂಬಾ ವಯಸ್ಸಾದ, ಕಣ್ಣು ಮಂಜಾದ ಮಹಿಳೆಯರು ಕಾಣಿಸುತ್ತಾರೆ. ವೃದ್ಧಾಪ್ಯದಿಂದ ಕ್ಷೀಣ–ನಿತ್ರಾಣರಾದ ನಡುಬಾಗಿದ ಅವರು ಬದರಿ ನಾರಾಯಣದಿಂದ ಹಿಂತಿರುಗುತ್ತಿದ್ದಾರೆ. ನಡೆದು ಬರುತ್ತ ಒಬ್ಬಳು ಎಡವಿ ಮುಗ್ಗರಿಸುತ್ತಾಳೆ. ಅಯ್ಯೋ ಹುಷಾರಮ್ಮ ಎಂದ ಸಹಯಾತ್ರಿಕರ ಉದ್ಗಾರಕ್ಕೆ ಅವರು ನಮ್ಮನ್ನು ಕೈಹಿಡಿದು ನಡೆಸುತ್ತಿರುವವನು ಬದರಿ ನಾರಾಯಣನೇ ಅಲ್ಲವೆ? ದಿಗಿಲೇಕೆ? ಅವನ ದರ್ಶನವಂತೂ ಆಗಿದೆ. ಇನ್ನು ಈ ದೇಹಕ್ಕೇನಾದರೂ ತಾನೆ ಏನು? ಎನ್ನುತ್ತಾರೆ. ಎಂಥಾ ಶ್ರದ್ಧೆ ಅವರದು!

ಈ ಯಾತ್ರಿಕರೆಲ್ಲ ಯಾತ್ರೆಯನ್ನಾರಂಭಿಸಿದ್ದು ಹರಿದ್ವಾರದಿಂದ. ಹಿಮಾಲಯಕ್ಕೆ ಅದು ದಾರಿ ಎಂಬುದೆ ಅದರ ಹೆಚ್ಚಳಿಕೆ. ಯಾತ್ರಿಕರು ಅಲ್ಲಿ ಸಂಜೆ ದರ್ಶಿಸುತ್ತ ಮೈಮರೆವ ಸಂಧ್ಯಾರತಿ, ಗೋಪುರದಾರತಿ ನಿವೇದಿತಾರ ಮನಸ್ಸಿನ ಮೇಲೆ ಅಚ್ಚೊತ್ತಿತು. ಭಾರತದ ನಾನಾ ಪ್ರಾಂತಗಳಿಂದ ಬರುವ ಯಾತ್ರಿಕರು ಭಕ್ತಿಯಿಂದ ತದೇಕಚಿತ್ತರಾಗಿ ಗಂಗಾಮಾಯಿಗೆ ಮಾಡುವ ಈ ಸುಂದರ ಸಂಧ್ಯಾರತಿಯನ್ನು ನೋಡುತ್ತಿರುತ್ತಾರೆ. ಅದೆಲ್ಲ ಮುಗಿದೊಡನೆ ಎಲ್ಲರೂ ಸಾಮೂಹಿಕವಾಗಿ ಸ್ತುತಿಗೀತೆಯನ್ನು ಹಾಡುತ್ತಾರೆ. ಸುತ್ತಣ ಹರಿದ್ವರ್ಣ ವನಶ್ರೀ, ದೂರದ ಹಚ್ಚ ಹಸುರಿನ ನಡುಗಡ್ಡೆಗಳು ಭಗವಂತನ ಕರುಣೆಯ ಕೊಡುಗೆಗಳು ಅವನ ಅಪಾರ ಮಹಿಮೆಯ ಸಾಕ್ಷಿಗಳು. ಆ ಚೈತನ್ಯಕ್ಕೆ ಕೋಟಿ ಕೋಟಿ ನಮನ ಎಂಬರ್ಥದ ಸ್ತುತಿ ಪಾಠಗಳನ್ನು ಹಾಡುತ್ತಾರೆ. ರೈಲು ಸೌಕರ್ಯದಿಂದ ಹರಿದ್ವಾರಕ್ಕೆ ಹೋಗುವುದು ಸುಲಭವಾಗಿದೆ. ಸಂಜೆ ಕತ್ತಲಾಗುವುದರಲ್ಲಿ ಗಂಗೆಯಲ್ಲಿ ಮೀಯಬೇಕು. ಹುಲಿಗಳ ಭಯ! ಇಲ್ಲಿಗೆ ಕೆಲವು ಮೈಲಿಗಳ ದೂರದಲ್ಲಿರುವ ಕಂಖಾಲ, ದಕ್ಷಿಣೇಶ್ವರ ಶಿವನ ಸ್ಥಾನವಾಗಿ ದಕ್ಷ ಯಜ್ಞ, ದಕ್ಷಬ್ರಹ್ಮನ ಅಹಂಕಾರ, ದಾಕ್ಷಾಯಿಣಿಯ ಆತ್ಮಾಹುತಿ, ವೀರಭದ್ರನ ಅವತಾರ, ದಕ್ಷನ ಶಿರಚ್ಛೇದನ, ಮತ್ತೆ ದೇವತೆಗಳ ಮನವಿಗೆ ಓಗೊಟ್ಟು ಶಾಂತನಾದ ಶಿವ, ದಕ್ಷನಿಗೆ ಟಗರಿನ ತಲೆಯಿಟ್ಟು ಬದುಕಿಸುವುದು, ಈ ಪೌರಾಣಿಕ ಕಥೆ ನೆನಪಾಗುವುದು.



ಹೃಷೀಕೇಶ

ಹೃಷೀಕೇಶ ಹರಿದ್ವಾರಕ್ಕೆ ೧೨ ಮೈಲಿ. ಪ್ರಾಚೀನ ಗುರುಕುಲ ವಿಶ್ವವಿದ್ಯಾನಿಲಯದೋಪಾದಿ ನಡೆಯುತ್ತಿದ್ದ ಸ್ಥಳ. ನೂರಾರು ಪರ್ಣಕುಟೀರಗಳು, ಸಾಧುಗಳ ಆಶ್ರಮಗಳಿವೆ. ಅಲ್ಲಿ ಯಜ್ಞ ಹೋಮ ಹವನದ ಶಾಖ ಚಳಿಗೆ ಆಪ್ಯಾಯಮಾನ. ಧ್ಯಾನ, ಅಧ್ಯಯನ, ಸಾಧನೆಗಳಲ್ಲಿ ತೊಡಗಿರುವ ಸಾಧುಗಳಿಗೆ ಭಕ್ತರು ಅರ್ಪಿಸುವ ಧಾನ್ಯ ಇಲ್ಲವೆ ಪಕ್ವಾನ್ನ ಭಾರತದಲ್ಲಿ ನಡೆದು ಬಂದಿರುವ ಸಂಪ್ರದಾಯ. ಅವರು ಯಾರೂ ಭಿಕ್ಷುಕರಲ್ಲ, ಸಮಾಜದ ಒಳಿತಿಗಾಗಿ ಪ್ರಾರ್ಥಿಸುವವರು. ಅದಕ್ಕೆ ಜನರ ಕೃತಜ್ಞತೆಯ ಅರ್ಪಣೆ ಅನ್ನದ ರೂಪದಲ್ಲಿ. ಇಲ್ಲಿನ ವಾಸಗೃಹಗಳು, ಧರ್ಮಶಾಲೆಗಳು, ಗಿರಿಗುಹೆಗಳು, ಯಾವ ನೈಸರ್ಗಿಕ ಪ್ರಕೋಪಗಳಿಗೂ ಹೆದರುವುದಿಲ್ಲ. ವೇದಗಳನ್ನು ಸಂಗ್ರಹಿಸಿ ವಿಂಗಡಿಸಿ ಅಧ್ಯಯನಕ್ಕೆ ನಿತ್ಯಪಠಣೆಗೆ ಅನುಕೂಲ ಮಾಡಿಕೊಟ್ಟ ವ್ಯಾಸ ಮಹರ್ಷಿಯೇ ಆದ್ಯಾಚಾರ್ಯ. ಲಕ್ಷ್ಮಣ ಝೂಲಾ ಆದರ್ಶ ಪುರುಷ ಶ್ರೀರಾಮನ ನೆನಪು ತರುತ್ತದೆ.

ಸೋದರಿ ನಿವೇದಿತಾಗೆ ಇಲ್ಲಿ ಬಂದು ಹೋಗುವ ಯಾತ್ರಿಕರ ಅತ್ಯಂತ ಸರಳವಾದ ಜೀವನವನ್ನು ಕಂಡು ಬೆರಗು! ಉಳಿದುಕೊಳ್ಳಲು ಹುಲ್ಲಿನ ಜೋಪಡಿಗಳಾದರೂ ಸರಿ, ಮರಗಳ ಬುಡವಾದರೂ ಸರಿ, ಅಲ್ಲೇ ಇರುತ್ತಾರೆ. ಮಲಗುತ್ತಾರೆ. ನೆಲವೆ ಹಾಸಿಗೆ, ತಮ್ಮ ಬಟ್ಟೆಬರೆಗಳ ಗಂಟೆ ತಲೆ ದಿಂಬು. ತಾರಾಖಚಿತ ಆಕಾಶವೇ ಮಾಳಿಗೆ. ಜೀವನದಲ್ಲಿ ಇಂಥಾ ಸರಳತೆಯಿರುವುದಾದರೆ ಏನು ಚಿಂತೆ?

ಹೃಷೀಕೇಶದಿಂದ ಏರುದಾರಿಯಲ್ಲಿ ಹತ್ತುತ್ತಾ ಹಿಮಾಲಯದೆಡೆಗೆ ಯಾತ್ರೆ ಸಾಗುತ್ತದೆ. ಬೆಟ್ಟದ ಶ್ರೇಣಿಗಳನ್ನು ದಾಟುತ್ತ, ದಾರಿಯಲ್ಲಿ ವ್ಯಾಸಗಂಗಾ ಎಂಬ ನೀರ್ಬೀಳು ರಮ್ಯವಾಗಿ ಕಾಣುತ್ತದೆ.



ಕೇದಾರನಾಥ

ಹಗಲೇ ಚುರುಕಾದ ಬಿಸಿಲು, ರಾತ್ರಿ ಬೆಳದಿಂಗಳು, ದಟ್ಟವಾದ ಕಾಡು. ಹೀಗೆ ದಾರಿಯುದ್ದಕ್ಕೂ ನಿಸರ್ಗದ ಚೆಲುವು ನಾನಾ ರೂಪ ಗಳಲ್ಲಿ ಮನ ಸೆಳೆಯುವುದು. ೧೦ ಮೈಲಿ ನಡೆದರೆ ದೇವ ಪ್ರಯಾಗ ಸಿಕ್ಕುತ್ತದೆ. ಊರು ಚಿಕ್ಕದು. ಊರಿಗಿಂತ ಭೋರ್ಗರೆವ ಅಲಕಾನಂದ-ಭಾಗೀರಥಿ ನದಿಗಳ ಸಂಗಮ ಕೆಳಗೆ ಬಂಡೆಗಳ ಮೇಲುರುಳಿ ಧುಮುಕತ್ತ ಸಾಗುವುದನ್ನು ನೋಡಿ, ಜಗತ್‌ಪ್ರಸಿದ್ಧ ನಯಾಗರ ಜಲಪಾತದ ಭವ್ಯ ಜಲರಾಶಿ ಸಹ ಈ ಸಂಗಮದ ಭವ್ಯತೆಯನ್ನು ಮೀರಲಾರದು, ಎಂದೆನಿಸುತ್ತದೆ. ಇಲ್ಲಿ ಜಲ ಮಧ್ಯದ ಬಂಡೆಯ ೨೫೦ ಅಡಿ ಎತ್ತರ. ಅದರ ಮೇಲೆ ಶ್ರೀರಾಮನ ಗುಡಿ. ದೇವ ಪ್ರಯಾಗ ಶಿವನ ಕ್ಷೇತ್ರ. ಹರಿಹರರಲ್ಲಿ ಭೇದವಿಲ್ಲ. ಇಲ್ಲಿನ ಶಿವಲಿಂಗ ೬-೭ನೆ ಶತಮಾನದ್ದಿರಬಹುದು. ಆದಿಶಂಕರರು ಬಂದ ಐತಿಹ್ಯವಿದೆ. ಅವರು ಬರುವುದಕ್ಕೆ ಹಿಂದೆಯೂ ಇದು ಶಿವಕ್ಷೇತ್ರವಾಗಿತ್ತು.

ಇಲ್ಲಿಂದ ಯಾವ ಸೌಕರ್ಯವೂ ಇಲ್ಲದ, ಕೊಳಕು ತಾಣವಾದ ರಾಮಪುರದಲ್ಲಿ ಯಾತ್ರಿಕರು ನಿಲ್ಲದೆ ೫ ಮೈಲಿ ದೂರದ ಬಿಲ್ವ ಕೇದಾರಕ್ಕೆ ಹೋಗುತ್ತಾರೆ. ಅಲ್ಲೂ ವಸತಿ ಸೌಕರ್ಯಇಲ್ಲ. ಅಡಿಗೆ ಮಾಡಿ ಊಟದ ನಂತರ ಶ್ರೀನಗರಕ್ಕೆ ಹೊರಡುತ್ತಾರೆ. ಬಿಲ್ವಕೇದಾರದಲ್ಲಿ ಮಾರ್ಕಂಡೇಯ ತಪಸ್ಸು ಮಾಡಿದ ಸ್ಥಳ ತೋರಿಸುತ್ತಾರೆ. ಬೋಧಿಸುವ ಬುದ್ಧನ ವಿಗ್ರಹವೂ ಇದೆ.

ಸಂಜೆ ಹೊತ್ತಿಗೆ ನಿವೇದಿತಾರ ತಂಡ ಶ್ರೀನಗರವನ್ನು ತಲಪುತ್ತದೆ. ಅಲ್ಲಿಂದ ರುದ್ರಪ್ರಯಾಗಕ್ಕೆ ೧೧ಮೈಲಿ. ಗುಪ್ತಕಾಶಿಗೆ ಅಗಸ್ತ್ಯಮುನಿ ಕ್ಷೇತ್ರದಿಂದ ೧೦ಮೈಲಿ ಗೌರಿಕುಂಡ ತಲುಪಿ ರಾಮಬರಾ ಮೂಲಕ ಕೇದಾರನಾಥಕ್ಕೆ ೧೨ ಮೈಲಿ. ದಾರಿ ತುಂಬಾ ಕಡಿದಾದುದು, ಇಕ್ಕಟ್ಟಾದುದು. ಘಟ್ಟದ ಸರ್ಪದಾರಿಯಲ್ಲಿನಡೆಯುತ್ತ ಯಾತ್ರಿಕರು ಕೇದಾರನಾಥನ ದರ್ಶನಕ್ಕೆ ಹೋಗುತ್ತಾರೆ. ದೇವಸ್ಥಾನವೆ ಭವ್ಯವಾಗಿದೆ ಭದ್ರವಾಗಿದೆ. ಸಾವಿರ ವರ್ಷ ಪುರಾತನವಾದುದು ಎಂದು ಹೇಳುತ್ತಾರೆ. ಮುಸಲ್ಮಾನರ ದಾಳಿ ದೂರದ ಮಾತು. ಬೌದ್ಧಧರ್ಮ-ಹಿಂದೂಧರ್ಮಗಳು ಮಾತ್ರ ಜೊತೆಗೂಡಿರಬಹುದು ಹಿಂದೆ. ನಿವೇದಿತಾರ ತಂಡ ಇಲ್ಲಿಗೆ ಬಂದ ಎರಡನೆ ದಿನ, ಯಾರೋ ಬಹುಕಾಲದಿಂದ ಕಾಯಿಲೆಯಿಂದ ನರಳುತ್ತಿದ್ದ ವೃದ್ಧ ಅಲ್ಲಿಗೆ ಬಂದು ಕೇದಾರನಾಥನ ದರ್ಶನಮಾಡಿ ತನ್ನ ಹರಕೆಯನ್ನು ಸಲ್ಲಿಸಿ, ಬೆಳಕು ಹರಿಯುತ್ತಿದ್ದಂತೆ ಜೀವನದ ಹೋರಾಟವನ್ನು ಮುಗಿಸಿ ಮುಕ್ತನಾದಂತೆ ಪ್ರಾಣ ಹೋಯಿತು. ಅವನ ಪುಣ್ಯ, ಕೇದಾರನಾಥನ ಕೃಪೆ! ಎಂದುದ್ಗರಿಸಿದರು ನೆರೆದ ಭಕ್ತಯಾತ್ರಿಕರು. ಚಳಿಗಾಲದ ಹಿಮ ಬೀಳುವ ಕಾಲದಲ್ಲಿ ದೇವಸ್ಥಾನ ಮುಚ್ಚಿಬಿಡುತ್ತಾರೆ. ಕೆಳಗೆ ಮೈಲಿಗಳ ದೂರದ ಊಖೀಮಠಕ್ಕೆ ಕೇದಾರನಾಥ ಬಂದುಬಿಡುತ್ತಾನೆ.

ಯಾತ್ರಿಕರು ಕೇದಾರನಾಥನ ದರ್ಶನ ಮಾಡಿ ಬಂದ ದಾರಿಯಲ್ಲೇ ಹಿಂತಿರುಗಿ ರುದ್ರಪ್ರಯಾಗಕ್ಕೆ ಸಮೀಪದಲ್ಲಿನ ಕವಲು

ದಾರಿ ಹಿಡಿದು ಬದರೀನಾಥ ಕ್ಷೇತ್ರಕ್ಕೆ ಹೋಗುತ್ತಾರೆ. ಸೋದರಿ ನಿವೇದಿತಾ ಸಹಯಾತ್ರಿಕರೊಡನೆ ನಡೆಯುತ್ತ, ಕಾಡು, ಬೆಟ್ಟ, ಕಣಿವೆ, ಹಿಮವತ್ ಪರ್ವತಾವಳಿಯ ನಾನಾ ವರ್ಣದ ನಾನಾ ರೂಪದ ಹೂಗಳನ್ನು ನೋಡುತ್ತ ಬಣ್ಣಿಸುತ್ತಾರೆ. ಭಕ್ತಿಭಾವ ಪರವಶರಾಗಿ ಬದರಿ ನಾರಾಯಣನ ದರ್ಶನ ಮಾಡಿ, ಇಲ್ಲಿನ ವೈಷ್ಣವ ಸಂಪ್ರದಾಯದ ಧಾರ್ಮಿಕ ವಿಧಿ, ಪೂಜೆಗಳನ್ನು ಗಮನಿಸುತ್ತ ಶ್ರೀರಾಮಾನುಜರ ನೆನಪು ಮಾಡಿಕೊಳ್ಳುತ್ತಾರೆ. ಮೂರು ದಿನಗಳಲ್ಲಿ ಯಾತ್ರೆಯನ್ನು ಮುಗಿಸಿ ಬಯಲು ಸೀಮೆಗೆ ಹಿಂತಿರುಗುತ್ತಾರೆ.

ನಿವೇದಿತಾರ ಪ್ರವಾಸ ಕಥನವನ್ನೋದುತ್ತ ಮನಸ್ಸಿನ ತೆರೆಯ ಮೇಲೆ ಪೌರಾಣಿಕ, ಐತಿಹಾಸಿಕ ಕಥೆಗಳ ಚಿತ್ರಗಳು ಮೂಡುತ್ತವೆ. ಸಮಸ್ತ ಹಿಮಾಲಯವೂ ಶಿವಭಕ್ತಿಯಿಂದ ತುಂಬಿದುದು. ಹಿಮಾಲಯವನ್ನು ನಗಾಧಿರಾಜನೆಂದು ಬಣ್ಣಿಸಿದ ಮಹಾಕವಿ ಕಾಳಿದಾಸನ ಕುಮಾರ ಸಂಭವ-ಗಿರಿಜಾಕಲ್ಯಾಣದ ಸಂದೇಶ ಭಾರತ ಸಂಸ್ಕೃತಿಯಲ್ಲಿ ಕಾಮರಹಿತವಾದ ಪರಿಶುದ್ಧ ಪ್ರೇಮಕ್ಕೆ ಕೊಟ್ಟಿರುವ ಪ್ರಾಶಸ್ತ್ಯ ಮನ ತುಂಬುತ್ತದೆ. ಕೇದಾರ-ಬದರೀ ಯಾತ್ರೆಗಳ ಸೊಗಸಾದ ಪರಿಚಯವಾಗುತ್ತದೆ. ಒಬ್ಬ ಪಾಶ್ಚಾತ್ಯ ಮಹಿಳೆ ತನಗೆ ಪರಿಚಿತವಾದ ಪಾಶ್ಚಾತ್ಯ ತೀರ್ಥಯಾತ್ರೆಯ ಹಿನ್ನೆಲೆಯಲ್ಲಿ ಹಿಮಾಲಯದ ಪವಿತ್ರ ಸ್ಥಳಗಳೆರಡನ್ನು ಸಂದರ್ಶಿಸಿ ಸಂತೋಷಪಟ್ಟಿದ್ದಾರೆ. ಈ ಶೈವ-ವೈಷ್ಣವ ಕ್ಷೇತ್ರಗಳು ಪಾಶ್ಚಾತ್ಯ ದೃಷ್ಟಿಯಲ್ಲಿ ಹೇಗೆ ಕಂಡಿರಬಹುದು ಎಂಬ ನಮ್ಮ ಕುತೂಹಲವನ್ನು, ತಾವು ನೋಡಿದ ಎರಡು ಪುಣ್ಯ ಕ್ಷೇತ್ರಗಳಲ್ಲದೆ, ದಾರಿಯುದ್ದಕ್ಕೂ ಬರುವ ಸ್ಥಳಗಳ ಐತಿಹ್ಯ-ವೃತ್ತಾಂತಗಳನ್ನು ಕೇಳಿ ತಿಳಿದು ಎಲ್ಲರೂ ಅಭಿಮಾನಪಡುವ ಮಾನವ ದೃಷ್ಟಿಯನ್ನು ತೋರಿ, ತಣಿಸಿದ್ದಾರೆ. ಭಾಷೆ ಸರಳವಾಗಿದೆ. ಓದಿಸಿಕೊಂಡು ಹೋಗುತ್ತದೆ. ಶೈಲಿ ಲಲಿತವಾಗಿದೆ. ಎಲ್ಲ ಬಗೆಯ ಯಾತ್ರಿಕರಿಗೂ ಈ ಪ್ರವಾಸ ಕಥನ ಮಾರ್ಗದರ್ಶಿಯಾಗಿದೆ. ಒಂದು ಶತಮಾನದ ಹಿಂದೆ ಮಾಡಿದ ಯಾತ್ರೆ, ಅತ್ಯಾಧುನಿಕ ವಾಹನ ಹಾಗೂ ವಸತಿ ಸೌಕರ್ಯಗಳಿರುವ ಈ ಕಾಲಕ್ಕೂ ವಸ್ತು ಮತ್ತು ಆಲೋಚನೆಗಳ ದೃಷ್ಟಿಯಿಂದ ಪ್ರಸ್ತುತವಾಗಿದೆ.

ಮಹಾಭಾರತ ಕಥೆಯ ವ್ಯಾಸ, ಭೀಮಸೇನ; ಸಮುದ್ರವನ್ನೇ ಆಪೋಶನ ಮಾಡಿದ ಅಗಸ್ತ್ಯಮುನಿ, ಪಾಂಡವರ ಕಟ್ಟಕಡೆಯ ಮಹಾಪ್ರಸ್ಥಾನ, ರಾಮಾಯಣದ ನೆನಪುಗಳಾಗಿ ಉಳಿದಿರುವ ಲಕ್ಷ್ಮಣ ಝೂಲಾ, ದೇವಪ್ರಯಾಗದ ಶ್ರೀರಾಮ ದೇವಸ್ಥಾನ; ವೈಷ್ಣವ ದೇಗುಲಗಳಲ್ಲಿ ಗರುಡ-ಹನುಮರು ಶೈವದೇಗುಲಗಳಲ್ಲಿ ಗಣೇಶ, ಕ್ಷೇತ್ರಪಾಲಕರಾಗಿರುವುದನ್ನು ನಿವೇದಿತಾ ಗಮನಿಸುತ್ತಾರೆ, ಪ್ರಸ್ತಾಪಿಸುತ್ತಾರೆ.

ಕೇವಲ ೮೬ ಪುಟಗಳಲ್ಲಿ ಇಷ್ಟು ವಿಚಾರಗಳು, ಇಷ್ಟು ಆಲೋಚನೆಗಳು ತುಂಬಿರುವುದು ಅಚ್ಚರಿಯನ್ನುಂಟುಮಾಡುತ್ತದೆ.

ಸೋದರಿ ನಿವೇದಿತಾರ ಈ ಎರಡೂ ಪ್ರವಾಸಕಥನಗಳು ಚೆನ್ನಾಗಿವೆ. ❖

# ತೀಕ್ಷ್ಣಮತಿ, ಸೂಕ್ಷ್ಮಮತಿ!

## (‘Kali the Mother’ ಕೃತಿಯನ್ನು ಕುರಿತು)

ಸ್ವಾಮಿ ಯುಕ್ತೇಶಾನಂದ

ಸ್ವಾಮೀಜಿಯವರಿಂದ ದೀಕ್ಷೆ ಪಡೆದ ಬಳಿಕ ನಿವೇದಿತಾ ಕಾಳೀಮಾತೆಯನ್ನು ಕುರಿತು ಹೆಚ್ಚು ಆಳವಾಗಿ ಅರಿತುಕೊಳ್ಳಬಯಸಿದಳು. ಅದರ ಫಲವಾಗಿ ಮೂಡಿ ಬಂದ ಕೃತಿರತ್ನವೇ ಈ ಸಣ್ಣ ಪುಸ್ತಕ. ಇದನ್ನು ಪರಿಚಯಿಸಿರುವ ಸ್ವಾಮೀಜಿಯವರು ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲೆಯ ಮುಖ್ಯಸ್ಥರು; ಅವರು ಉತ್ತಮ ಪ್ರವಚನಕಾರರೂ, ಸಂಘಟಕರೂ ಆಗಿದ್ದಾರೆ.

ಸ್ವಾಮಿ ವಿವೇಕಾನಂದರಿಂದ ಪ್ರಭಾವಿತರಾಗಿ, ಅವರ ದಿವ್ಯ ಜೀವನ-ಸಂದೇಶಗಳಿಂದ ಆಕರ್ಷಿಸಲ್ಪಟ್ಟು, ಅವರ ಉಪದೇಶ ಮಾರ್ಗದರ್ಶನಗಳಿಂದ ಸೋದರಿ ನಿವೇದಿತಾ ಧರ್ಮ-ಜೀವನ-ಆಧ್ಯಾತ್ಮಿಕತೆಗಳನ್ನು ಸ್ಪಷ್ಟವಾಗಿ ಅರಿತು, ಆಚರಿಸಿದರು. ತ್ಯಾಗ-ಸೇವೆಗಳ ಆದರ್ಶವನ್ನು ಸ್ವೀಕರಿಸಿ ಭಾರತಕ್ಕೆ ಅಪಾರ ಸೇವೆ ಸಲ್ಲಿಸಿದರು. ಶ್ರೀರಾಮಕೃಷ್ಣರ ಜೀವನ-ಸಂದೇಶಗಳನ್ನು ತಿಳಿದು, ಶ್ರೀಮಾತೆಯವರ ಪವಿತ್ರ ಸಂಗದಲ್ಲಿ ಅವರ ನಿಷ್ಕಲ್ಮಷ ಪ್ರೀತಿ, ಸರಳತೆ, ವಿವೇಕಗಳಿಗೆ ಮಾರುಹೋಗಿ ತಮ್ಮ ಶ್ರೇಷ್ಠ ವ್ಯಕ್ತಿತ್ವವನ್ನು ಬೆಳೆಸಿಕೊಂಡರು.

ಸೋದರಿ ನಿವೇದಿತಾರ ಚಿಂತನೆ, ಭಾವನೆ, ಮಾತು, ಬರವಣಿಗೆಗಳಲ್ಲಿ ತೀಕ್ಷ್ಣತೆ, ಘನತೆ, ಸೂಕ್ಷ್ಮತೆಗಳನ್ನು ಕಾಣಬಹುದು.

### ಶ್ರೀರಾಮಕೃಷ್ಣರ ದಿವ್ಯ ವ್ಯಕ್ತಿತ್ವ

ಶ್ರೀರಾಮಕೃಷ್ಣರ ಬಗೆಗೆ ಸೋದರಿ ನಿವೇದಿತಾ ಸ್ವಾಮಿ ವಿವೇಕಾನಂದರಿಂದ, ಶ್ರೀಮಾತೆಯವರಿಂದ, ಇತರ ಶಿಷ್ಯರು, ಭಕ್ತರಿಂದ ಕೇಳಿ ತಿಳಿದು ಶ್ರೀರಾಮಕೃಷ್ಣರ ದಿವ್ಯ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ಗ್ರಹಿಸಿದರು. ಅವರಗ್ರಹಣಾಶಕ್ತಿ ನಮ್ಮನ್ನು ಆಶ್ಚರ್ಯಚಕಿತರನ್ನಾಗಿಸುತ್ತದೆ. ಶ್ರೀರಾಮಕೃಷ್ಣರ ಕುರಿತಾದ ಅವರ ಕೆಲವು ಚಿಂತನೆಗಳು ಇಲ್ಲಿವೆ :

- ಶ್ರೀರಾಮಕೃಷ್ಣ ಪರಮಹಂಸರ ಬಳಿಸಾರಿ ಅವರ ಪದತಲದಲ್ಲಿ ನಾವು ಮಂಡಿಯೂರುವುದು ಭಗವದ್ಭಕ್ತಿಯನ್ನು ಅವರು ಜೀವನದಲ್ಲಿ ತೋರಿದರು ಎಂಬುದಕ್ಕಲ್ಲ, ಆದರೆ ಅವರು ಜಗನ್ಮಾತೆಯು ತನ್ನ ಸಂತಾನವನ್ನು ಸಲಹುವ ಪ್ರೇಮಭಾವದ ಮಹಾ ಸಾಕಾರಮೂರ್ತಿಯೇ ಆಗಿದ್ದಾರೆಂದು!

- ನಮ್ಮ ಮಧ್ಯದಿಂದಲೇ, ಇತ್ತೀಚೆಗಷ್ಟೆ, ಎದ್ದು ಬಂದವರೊಬ್ಬರಿದ್ದಾರೆ. ಇಪ್ಪತ್ತು ವರ್ಷಗಳ ಹಿಂದೆಯಷ್ಟೇ ಅವರು ದಕ್ಷಿಣೇಶ್ವರ ದೇವಸ್ಥಾನದ ಉದ್ಯಾನವನದಲ್ಲಿ ಬೋಧಿಸುತ್ತಿದ್ದರು. ಅವರಲ್ಲಿ ದಿವ್ಯತ್ವ ಎಷ್ಟು ಪ್ರಕಾಶಿಸುತ್ತಿತ್ತೆಂದರೆ, ಅವರ ಪರಿಚಯವಿದ್ದವರು ಮತ್ತು ಅವರನ್ನು ಪ್ರೀತಿಸುತ್ತಿದ್ದವರು ಅವರ ಹೆಸರನ್ನು ಹೇಳುವಾಗ ಭಾವವುಕ್ಕಿ ಬಂದು ‘‘ನಮ್ಮ ದೇವರು (ಪ್ರಭು)’’ ಎಂದು ಕರೆಯುತ್ತಾರೆ.

- ಐವತ್ತು ವರ್ಷಗಳ ಕಾಲ ಆ ವ್ಯಾಕುಲತೆ ಒತ್ತಿ ತಳ್ಳುತ್ತಿದ್ದ ಆಧ್ಯಾತ್ಮಿಕ ಅನುಭವಗಳ ರಭಸವನ್ನು ತಡೆದುಕೊಂಡ ಅವರ ಶರೀರದ ಶಕ್ತಿ ಅಸಾಮಾನ್ಯ ಎಂದು ಅರ್ಥಮಾಡಿಕೊಳ್ಳಬಹುದು. ಆದರೆ ಇದಕ್ಕಿಂತಲೂ ಆಶ್ಚರ್ಯಕರವಾದದ್ದು ಅವರು ಪ್ರತಿಯೊಬ್ಬರ ನೋವು ಸಂಕಟಗಳನ್ನು ತಮ್ಮದೆಂದೇ ಅನುಭವಿಸಲು ಸಾಧ್ಯವಾದ ಅವರ ವ್ಯಕ್ತಿತ್ವದ ಬಹುಮುಖತ್ವ ಮತ್ತು ಅವರ ಬೆಳವಣಿಗೆ. ಆಧುನಿಕ ಯುಗದಲ್ಲಿ, ಬಹುಶ:, ಅವರೊಬ್ಬರದ್ದೆ ನಿಜವಾಗಿಯೂ ವಿಶ್ವವಿಶಾಲ ಮನಸ್ಸು.




- ದಕ್ಷಿಣೇಶ್ವರದ ಅವರ ಕೋಣೆಗೆ ಮಹಾಮಹಾ ಪಂಡಿತರು, ದೊಡ್ಡ ವ್ಯಕ್ತಿಗಳೆಲ್ಲ ಹೆಮ್ಮೆಯಿಂದ ಬರುತ್ತಿದ್ದರು. ಆ ಕೋಣೆಯಲ್ಲಿ ಸಾಮಾನ್ಯವಾಗಿ ಸದಾ ಇರುತ್ತಿದ್ದವರೊಬ್ಬರು ಹೇಳುತ್ತಾರೆ, ‘‘ಅವರೆಲ್ಲ ನಮ್ಮ ಪ್ರಭುವಿನ ಮುಂದೆ ಮಕ್ಕಳ ಹಾಗೆ ಭಾಸವಾಗುತ್ತಿತ್ತು.’’

- ಅವರ ಪರಿಪೂರ್ಣ ಪ್ರಾಮಾಣಿಕತೆ ಮತ್ತು ಮೇರುಸಮ ಪವಿತ್ರತೆಗಳು ಬಿಸಿನೆತ್ತರಿನ ಯುವಕರಿಗೂ ಗೋಚರಿಸುತ್ತಿತ್ತು. ಆದರೆ ಅದರ ಬೋಧನೆಗಳನ್ನು ತೀವ್ರವಾಗಿ ಪ್ರತಿರೋಧಿಸಿದವರೂ ಕೆಲವರಿದ್ದರು. ದೀರ್ಘ ಸಮಯದ ನಂತರ ಅಂಥವರಲ್ಲೊಬ್ಬ ಹೇಳಿದ, ‘‘ಅವರೊಬ್ಬ ಪವಿತ್ರ ವ್ಯಕ್ತಿಯೆಂದು ಸಾಬೀತು ಪಡಿಸಲು ಅವರಲ್ಲಿ ಏನಾದರೊಂದನ್ನು ನಾನು ಹುಡುಕುತ್ತಿದ್ದೆ! ಅವರು

ಪವಿತ್ರರಲ್ಲ, ಪವಿತ್ರತೆಯೇ ಆಗಿಬಿಟ್ಟಿದ್ದರು ಎಂದು ಅರಿಯಲು ನನಗೆ ಆರು ವರ್ಷಗಳು ಬೇಕಾಯಿತು!''

❁ ಅವರು ಕಾಳಿಯನ್ನು ಮಾತ್ರ ಪೂಜಿಸಿದವರಲ್ಲ. ಅವರು ಪೂಜಿಸದ, ಅವರು ಪ್ರೀತಿಸದ ದೇವ-ದೇವಿಯರ ರೂಪಗಳು, ಪ್ರತೀಕಗಳು ಭಾರತದಲ್ಲಿರಲಿಲ್ಲ! ಅವರು ತಮ್ಮಲ್ಲೇ ಅನುಭವಿಸಿ ಸಂತೃಪ್ತಿ ಹೊಂದದ ಯಾವ ಆರಾಧಕನ ವಿಧಿಯೂ ಇರಲಿಲ್ಲ! ಅವರು ಗೌರವಿಸದ, ಅವರು ಅರ್ಥಮಾಡಿಕೊಳ್ಳದ ಯಾವ ಪ್ರಾರ್ಥನೆಯೂ, ಯಾವ ಉನ್ನತತೆಯೂ, ಯಾವ ಆಧ್ಯಾತ್ಮಿಕ ಅನುಭವವೂ ಇರಲಿಲ್ಲ!

❁ ಇವೆಲ್ಲವನ್ನು ಅವರು ಮಾಡಿದ್ದಲ್ಲ. ಅವರೊಳಗಿನ ಭಗವತ್ಪ್ರೇಮವೇ ಮಾಡಿಸಿದ್ದು. ಅದನ್ನು ಅವರು 'ತಾಯಿ' ಎಂದು ಕರೆದರು. ಅವರು ವಿನಯವಂತರಲ್ಲ, ಆದರೆ ರಾಮಕೃಷ್ಣ ಎಂಬುವರು ಇದ್ದರು ಎಂಬುದನ್ನೇ ಅವರು ಮರೆತುಬಿಟ್ಟಿದ್ದರು.

❁ ಮಹಾತ್ಮೆ, ಸಾಮರಸ್ಯ ಮತ್ತು ವ್ಯಕ್ತಿತ್ವದ ಸೌಂದರ್ಯಗಳೆಲ್ಲವೂ ತಾವಾಗಿಯೇ ಒದಗಿ ಬರುವಂತಹವುಗಳೆಂಬುದನ್ನು ಅವರಲ್ಲಿ ನಾವು ಕಲಿಯಬಹುದು. ನಾವು ಅವುಗಳನ್ನು ಕುರಿತು ಆಲೋಚಿಸಬೇಕಿಲ್ಲ. ನಮಗೆ ಎಟಕುವ ಮೂಲಗುಣಗಳಾದ ಸರಳತೆ, ಪ್ರಾಮಾಣಿಕತೆ ಮತ್ತು ಹೃತ್ಪೂರ್ವಕ ಭಕ್ತಿಗಳನ್ನು ಬೆಳೆಸಿಕೊಳ್ಳುವುದರ ಕಡೆಗೆ ಗಮನ ಹರಿಸಬೇಕು.

❁ ಭಾರತದ ಪ್ರಾಚೀನ ಜ್ಞಾನ-ವಿವೇಕಗಳು ವ್ಯರ್ಥವಲ್ಲ ಎಂಬುದಕ್ಕೆ ಅವರು ಜಗತ್ತಿಗೇ ಸಾಕ್ಷಿ. ಅವರು ಬೇರಾವ ದೇಶದಲ್ಲೂ ಹುಟ್ಟಲು ಸಾಧ್ಯವಿರಲಿಲ್ಲವೆಂಬುದು ಸತ್ಯ. ಆದರೆ ಅವರು ಭಾರತದ ಅಂತರಾತ್ಮವನ್ನು ಮಾತ್ರ ಅಥವಾ ಭಾರತದ ಅಂತರಾತ್ಮವನ್ನೇ ಮುಖ್ಯವಾಗಿ ಪ್ರತಿನಿಧಿಸುತ್ತಾರೆಂಬುದು ಸತ್ಯವಲ್ಲ. ಏಕೆಂದರೆ ಅವ ರಲ್ಲಿ ಮನುಕುಲದ ಎಲ್ಲ ಆಲೋಚನೆಗಳು, ಎಲ್ಲ ಭಾವನೆಗಳು ಮೇಳೈಸುತ್ತವೆ. ಕಾಳೀಭಕ್ತ ರಾಮಕೃಷ್ಣರು ಮನುಕುಲವನ್ನೇ ಪ್ರತಿನಿಧಿಸುತ್ತಾರೆ.

### ಮಹಾಮಾತೆಯ ಮಾತು

ಸ್ವಾಮಿ ವಿವೇಕಾನಂದರ 'ಧೀರಪುತ್ರಿ' ಯಾದ ಸೋದರಿ ನಿವೇದಿತಾ ಜೀವನ, ಜಗತ್ತು, ಜಗನ್ಮಾತೆ ಇವುಗಳ ಸಂಬಂಧವನ್ನು ಸ್ಪಷ್ಟವಾಗಿ ಅರ್ಥಮಾಡಿಕೊಂಡು ಸ್ಫುಟವಾಗಿ ನಮ್ಮ ಮುಂದಿಟ್ಟಿದ್ದಾರೆ. ಈ ಚಿಂತನೆಗಳು ನಮಗೆ ಜೀವನವನ್ನು ಎದುರಿಸಲು ಅಪಾರ ಧೈರ್ಯವನ್ನು, ಜಗನ್ಮಾತೆಯಲ್ಲಿ ಶ್ರದ್ಧೆಯನ್ನು ನೀಡುತ್ತವೆ. ನಾವು ಶಕ್ತಿಶಾಲಿಗಳಾಗಿ ಧೈರ್ಯದಿಂದ ಜೀವನವನ್ನು, ಜಗತ್ತನ್ನು ಎದುರಿಸಬೇಕೆಂದು ಜಗನ್ಮಾತೆ ಬಯಸುತ್ತಾಳೆ.

ಅಂತರಂಗದ ವಿಕಾಸದಿಂದ ಮೂಡಿಬರುವ 'ವಿವೇಕಶಕ್ತಿ' ಯಿಂದ ಸೋದರಿ ನಿವೇದಿತಾ ಜಗನ್ಮಾತೆಯ ಇಚ್ಛೆಯನ್ನು ಜಗನ್ಮಾತೆಯ ಮಾತುಗಳಂತೆಯೇ ಪ್ರತಿಧ್ವನಿಸಿದ್ದಾರೆ. ''ನನ್ನ ಇಚ್ಛೆಗೆ ವಿರುದ್ಧವಾದ ಎಲ್ಲಾ ಆಸಕ್ತಿಗಳನ್ನು ಕಿತ್ತೆಸೆ. ನಾನು ಮಾತನಾಡಿದಾಗ ನಿನ್ನ ಪ್ರೀತಿಯಾಗಲಿ, ಸ್ನೇಹವಾಗಲಿ, ಸುಖವಾಗಲಿ, ಮನೆಯಾಗಲಿ, ಉಸಿರೆತ್ತದಿರಲಿ! ''

ಆಧ್ಯಾತ್ಮಿಕ ಪ್ರಗತಿಗೆ, ಆತ್ಮವಿಕಾಸಕ್ಕೆ, ಜಗನ್ಮಾತೆಯ ಧೀರ ಉಪದೇಶವನ್ನು ಸೋದರಿ ನಿವೇದಿತಾ ಹೀಗೆ ಬರೆಯುತ್ತಾರೆ: ''ಇತರರ ಅನುಕಂಪೆಯನ್ನು ಬಯಸದಿರಿ. ಹಾಗಿದ್ದರೆ ನಾನು ನಿಮ್ಮನ್ನು ಇತರರಿಗೆ ಅನುಕಂಪೆ ತೋರುವ ಮಹಾಯಂತ್ರಗಳನ್ನಾಗಿ ಮಾಡುತ್ತೇನೆ. ಧೈರ್ಯವಾಗಿ ನಿನ್ನ ದೌರ್ಬಲ್ಯವನ್ನು, ಅಜ್ಞಾನವನ್ನು ಒಪ್ಪಿಕೋ. ಇದರಿಂದ ನಿನ್ನ ಆತ್ಮಜ್ಯೋತಿ ಇತರರಿಗೆ ದಾರಿದೀಪವಾಗುತ್ತದೆ. ಸಣ್ಣ ಕೆಲಸವನ್ನು ಸಂತೋಷದಿಂದ ಮಾಡು, ಉನ್ನತ ಪದವಿಗಾಗಿ ಹಾತೊರೆಯದಿರು.''

ಸರ್ವಶಕ್ತಿಶಾಲಿನಿಯಾದ ಜಗನ್ಮಾತೆ ನಮ್ಮೆಲ್ಲರ ನಿಜವಾದ ತಾಯಿ ನಮ್ಮನ್ನು ಶಕ್ತಿಶಾಲಿಗಳಾಗಿ ಕಾಣುವುದೇ ಅವಳಿಗೆ ಸಂತೋಷ. ನಮ್ಮನ್ನು ಶಕ್ತಿಶಾಲಿಗಳನ್ನಾಗಿಸುವುದಕ್ಕಾಗಿಯೇ ಅವಳ ಈ ಜಗತ್ತಿನ ವ್ಯವಸ್ಥೆಯಿರುವುದು. ಸಾವನ್ನು ಪ್ರೀತಿಸುವ ಧೈರ್ಯವನ್ನು ಬಯಸುತ್ತಾಳೆ, ಮೆಚ್ಚುತ್ತಾಳೆ ಜಗನ್ಮಾತೆ.

### ಮಧ್ಯಸ್ಥಿಕೆ ಬೇಕೆ?

ಒಂದು ಸೂಕ್ಷ್ಮ ವಿಚಾರವನ್ನು ಸೋದರಿ ನಿವೇದಿತಾ ಒಬ್ಬ ಜೀವಿ ಮತ್ತು ಜಗನ್ಮಾತೆಯ ಸಂಭಾಷಣೆಯ ರೂಪದಲ್ಲಿ ವಿವರಿಸಿದ್ದಾರೆ. ನಾನು ನನ್ನವರು ಅವರ ಕಷ್ಟದು:ಖಗಳು ನಮ್ಮ ಪ್ರಾರ್ಥನೆ, ಆ ಪ್ರಾರ್ಥನೆಯ ಹಿಂದಿರುವ ನಮ್ಮ (ಸಂಕುಚಿತ, ಅವಿವೇಕದ) ಭಾವಲಹರಿ, ಜಗನ್ಮಾತೆಯ ಉತ್ತರ-ಪರಿಹಾರ, ಶಾಂತಿ ಆನಂದ ಎಂಬುದನ್ನೆಲ್ಲ ಒಳಗೊಂಡ ಈ ವಿಷಯ ನಮ್ಮಲ್ಲಿ ವಿವೇಕವನ್ನು ಶರಣಾಗತಿಯನ್ನು ಉಂಟುಮಾಡುವಂತಿದೆ. ನಮ್ಮ ಎಲ್ಲ ಸಂಬಂಧಗಳು ಜಗನ್ಮಾತೆಯ ಮೂಲಕವೇ ಏರ್ಪಾಟಾಗಲೆಂಬ ಸತ್ಯವನ್ನು ತಿಳಿಸಿದ್ದಾರೆ. ನಮ್ಮೆಲ್ಲರಿಗು ಒದಗಿಬರಬಹುದಾದ ಒಂದು ಸಂದರ್ಭವಿದು.

''ದೂರದಲ್ಲಿರುವ ನಮ್ಮವರೊಬ್ಬರು ದು:ಖದಲ್ಲಿದ್ದಾರೆ. ಅವರ ಹೃದಯ ನನ್ನನ್ನು ಸಹಾಯಕ್ಕಾಗಿ ಕರೆಯುತ್ತಿದೆ. ನಾನು ಅವರನ್ನು ಪ್ರೀತಿಸುತ್ತೇನೆಂದು ಎಷ್ಟೇ ಹೇಳಿದರೂ ಅವರಲ್ಲಿ ಇನ್ನೂ ಅದೇ ದುಃಖ. ಅವರನ್ನು ಭೇಟಿಯಾಗಿ ಸಮಾಧಾನ ಹೇಳಬೇಕೆನ್ನಿಸುತ್ತದೆ'' ಇದು ಒಂದು ಅತ್ಯಂತ ಸಹಜವಾದ ಪರಿಸ್ಥಿತಿ ಮತ್ತು ಸಾಮಾನ್ಯವಾಗಿ ನಾವೆಲ್ಲರೂ ಹೇಗೆ ಪ್ರತಿಕ್ರಿಯಿಸುತ್ತೇವೆಂಬುದು ನಮಗೆ ತಿಳಿದೇ ಇದೆ! ಈ ವಿಷಯದಲ್ಲಿ ಜಗನ್ಮಾತೆಯ ಆದೇಶವೇನೆಂಬುದನ್ನು ಸೋದರಿ ನಿವೇದಿತಾ ಮಾರ್ಮಿಕವಾಗಿ ಬರೆದಿದ್ದಾರೆ.

### ಜಗನ್ಮಾತೆ ಎನ್ನುತ್ತಾಳಂತೆ

''ಇನ್ನೊಬ್ಬರ ದುಃಖಕ್ಕೆ ನೀನು ಪ್ರತಿಕ್ರಿಯಿಸಬೇಕೆನ್ನುವುದು ಸಹಜವೆ. ಮಗು, ಇದು ಹೀಗಿಲ್ಲದಿದ್ದರೆ ಈ ಐಹಿಕ ಜೀವನ ನಿನ್ನದಾಗಿರುತ್ತರಲಿಲ್ಲ. ಅಥವಾ ಈ ಪ್ರಪಂಚ ನಿನ್ನನ್ನು ಹಿಡಿದಿಡಲಾಗುತ್ತಿರಲಿಲ್ಲ.

''ನನ್ನ ಮಗುವೇ, ಈ ರೀತಿಯ ಹುಚ್ಚು ಪ್ರೀತಿಯನ್ನು ಬಿಟ್ಟುಬಿಡು. ನಿನ್ನ ಹೃದಯವನ್ನು ನನಗೆ ಕೊಡು, ನಾನು ಅದನ್ನು ನೋಡಿಕೊಳ್ಳುತ್ತೇನೆ. ಈ ಜಗತ್ತಿನ ಸುಖ ದು:ಖಗಳಿಗೆ ಸಾಕ್ಷಿಯಾಗಿರು, ಅದರಲ್ಲಿ ಭಾಗವಹಿಸಬೇಡ ಹೀಗೆ ಮಾಡಿದರೆ ಮಾತ್ರ ನೀನು ಈ ಬಂಧನದಿಂದ ಬಿಡಿಸಿಕೊಳ್ಳುವೆ ಮತ್ತು ಶಾಂತಿ ಪಡೆಯುವೆ.''

ಜೀವಿ ಈ ಮಾತುಗಳನ್ನು ಕೇಳಿ ಏನೆನ್ನಬಹುದು? ಹೀಗೆನ್ನುತ್ತಾನಂತೆ. ''ತಾಯಿ! ನನಗಾಗಿ ಶಾಂತಿಯನ್ನು ನಾನು ಏಕೆ ಅರಸ

ಬೇಕು? ಅವರ ಅಸಹಾಯಕ ಕೂಗಿಗೆ ಕಿವಿಗೊಡದೆ ನಾನು ಮಾತ್ರ ಶಾಂತಿಯಿಂದಿರಲೆ? ಅವರಿಗೆ ಶಾಂತಿಯನ್ನು ದಯಪಾಲಿಸು! ನಿನ್ನ ದಯೆಯಿದ್ದರೆ ಅವರಿಗಾಗಿ ಈ ಶಾಂತಿಯನ್ನು ನಾನು ಗೆದ್ದು ಕೊಡುತ್ತೇನೆ! ನಿನ್ನ ಆಶೀರ್ವಾದವನ್ನು ಪಡೆಯಲು ನಾನು ಅವರನ್ನು ನಿರ್ಲಕ್ಷಿಸಲಾರೆ!''

ಜಗನ್ಮಾತೆ ಉತ್ತರಿಸುತ್ತಾಳೆ, ''ಹುಚ್ಚು ಮಗುವೆ! ಅವರ ಪ್ರೀತಿಗೆ ಪ್ರತಿಯಾಗಿ ನೀನು ಪ್ರೀತಿ ತೋರಿಸಬೇಕೆಂಬುದು ಅವರನ್ನು ಕಬ್ಬಿಣದ ಸರಪಳಿಯಂತೆ ಈ ಪ್ರಪಂಚಕ್ಕೆ ಬಂಧಿಸುತ್ತದೆ. ನೀನು ನನ್ನಲ್ಲಿ ನಿನ್ನನ್ನು ಅಡಗಿಸಿಕೊಂಡುಬಿಡು. ಅವರೂ ಇಲ್ಲಿಗೇ ಬರುತ್ತಾರೆ. ನೀನು ನಿಜವಾಗಿ ಪ್ರೀತಿಸಿದ್ದೆಯಾದರೆ ನಿನ್ನ ಮಾತುಗಳು ಜಗತ್ತಿನ ಇತರರ ಮಾತಿನೊಂದಿಗೆ ಸೇರಿಹೋಗದಿರಲಿ. ನಿನ್ನ ಮಾತು ನನ್ನದಾಗಿ ಅವನನ್ನು ತಲುಪಿ ಅವನನ್ನ ನನ್ನ ಪದದಡಿಗೆ ಕರೆತರಲಿ. ನಿನ್ನ ಪ್ರೀತಿ ಲೋಕಾತೀತವಾದ ಶುದ್ಧಪ್ರೀತಿಯೊಂದಿಗೆ, ಅನಂತ ಸ್ವಾತಂತ್ರ್ಯದೊಂದಿಗೆ ಒಂದಾಗಲಿ. ಈ ರೀತಿಯಿಂದ ಮಾತ್ರ ಅವರಿಗೆ ಸಂತೃಪ್ತಿಯುಂಟಾಗುತ್ತದೆ. ನಿನ್ನನ್ನು ನೀನು ಹಿಂದಕ್ಕೆ ಎಳೆದುಕೊಳ್ಳುವುದರಿಂದ ಮಾತ್ರ ಅವರಿಗೆ ಶಾಂತಿಯನ್ನು ತರಬಲ್ಲೆ.

ಜೀವಿಗೆ ಜಗನ್ಮಾತೆಯ ಮಾತು ಅರ್ಥವಾಯಿತು. ಅವನೆನ್ನುತ್ತಾನೆ. ''ನಾನು ಪ್ರೀತಿಸುವವರ ವಿಷಯದಲ್ಲಿ ನಿನ್ನ ಅನುಕಂಪೆಗಿಂತ ನನ್ನ ಅನುಕಂಪೆಯನ್ನು ನೆಚ್ಚಿಕೊಳ್ಳಲೆ?''

''ಹೀಗಿದ್ದರೂ ಕೊನೆಯಲ್ಲಿ ಅವರು ಎಡವಿ ಬಿದ್ದರೆ, ಕಾಲು ಜಾರಿ ಬಿದ್ದರೆ ಅಥವಾ ದಾರಿ ತಪ್ಪಿದರೆ, ಎಲೆ ತಾಯೇ, ನೀನು ನನ್ನನ್ನು ಆನಂದದ ನಿದ್ರೆಯಿಂದ ಎಬ್ಬಿಸು. ನನ್ನನ್ನು ನಿನ್ನ ಹೃದಯದಿಂದ ಹೊರಹಾಕಿಬಿಡು. ನಿನ್ನ ಆವಶ್ಯಕತೆಯಿರುವ ಅಂತಹವರೆಲ್ಲ ಬೇಗ ನಿನ್ನನ್ನು ಸೇರಿ ಶಾಂತಿಯನ್ನು ಪಡೆಯಲಿ!''

### ಜಗನ್ಮಾತೆಯ ಭರವಸೆಯ ಈ ಮಾತುಗಳನ್ನು ಗಮನಿಸಿ

''ಮಗು, ಏನು ಮಾತನಾಡುತ್ತಿರುವೆ? ಅಸಹಾಯಕ ಪಕ್ಷಿಯಂತೆ ನಿನ್ನ ಬಾಲಿಶಬುದ್ಧಿಯೆಂಬ ರೆಕ್ಕೆಗಳನ್ನು ನನ್ನ ಕೃಪಾವಾಯುವಿನೆದುರು ಬಡಿಯುತ್ತಿರುವೆಯಲ್ಲ! ಅಲ್ಲಿ ಮೇಲೆ ನೋಡಿ ಸಂತೋಷಪಡು. ಮುಸುಕಿದ್ದ ಕಪ್ಪನೆಯ ಮೋಡ ಸರಿದುಹೋಗುತ್ತಿದೆ. ಭಯದಿಂದ ಎದೆಯ ಮೇಲಿದ್ದ ಕೈಗಳು ಸಡಿಲವಾಗುತ್ತಿವೆ. ನೀವಿಬ್ಬರೂ ಕೂಡ ಧೈರ್ಯ ಮತ್ತು ಸಮಾಧಾನದ ದೀರ್ಘಶ್ವಾಸವೆಳೆದುಕೊಳ್ಳುತ್ತಿದ್ದೀರಿ. ನನ್ನೆಡೆಗೆ ಬರುತ್ತಿರುವ ನಿಮ್ಮಿಬ್ಬರ ಹೆಜ್ಜೆಗಳಲ್ಲೂ ಉತ್ಸಾಹ ಕಾಣಬರುತ್ತಿದೆ. ತ್ಯಾಗ ಮತ್ತು ಅನಾಸಕ್ತಿಯಿಂದ ಉಂಟಾದ ಆನಂದದಿಂದ ಎರಡು ಹೃದಯಗಳೂ ಕಂಪಿಸುತ್ತಿವೆ.''

ಸರ್ವಶಕ್ತಿಶಾಲಿನಿಯಾದ, ಆನಂದಸ್ವರೂಪಿಯಾದ, ದಯಾಮಯಳಾದ ಜಗನ್ಮಾತೆಯ ಕುರಿತ ಶ್ರದ್ಧೆ ಶರಣಾಗತಿಗಳನ್ನು ಸೋದರಿ ನಿವೇದಿತಾ ಎಷ್ಟು ಸ್ಪಷ್ಟವಾಗಿ ಅರ್ಥೈಸಿಕೊಂಡಿದ್ದಾರಲ್ಲವೆ? ಅವರು ಜಗನ್ಮಾತೆಯ ಪ್ರಿಯರಾಗಿದ್ದರೆಂದುಕೊಳ್ಳುವುದರಲ್ಲಿ ಅತಿಶಯೋಕ್ತಿ ಒಂದಿಷ್ಟೂ ಇರಲಾರದು. ಇದಕ್ಕೆ ಸಾಕ್ಷಿಯೆಂಬಂತೆ ಶ್ರೀಮಾತೆ ಶಾರದಾದೇವಿಯವರು ಸೋದರಿ ನಿವೇದಿತಾರನ್ನು ಕುರಿತು, '''ಎಷ್ಟೊಂದು ಒಳ್ಳೆಯ ಗುಣಗಳು ಅವಳಲ್ಲಿ! ಅವಳೊಬ್ಬ ದೇವತೆಯೇ ಸರಿ!'' ಎಂದರು.

### ಕಾಳಿಯ ಕಥೆ

ಸೋದರಿ ನಿವೇದಿತಾ ಸ್ವಾಮಿ ವಿವೇಕಾನಂದರ ಸಂಪರ್ಕಕ್ಕೆ ಬಂದ ಸಮಯದಲ್ಲಿ ಅವರು ಶಿಕ್ಷಕಿಯಾಗಿದ್ದರು. ಮಕ್ಕಳಿಗೆ ಬೋಧಿಸುವ ಕಲೆ ಅವರಲ್ಲಿತ್ತು. ಒಂದು ವಿಷಯದ ಆಳಕ್ಕೆ ಮುಳುಗಿ ಭಾವವನ್ನು ಗ್ರಹಿಸುವ ತೀಕ್ಷ್ಣಮತಿ, ಸೂಕ್ಷ್ಮಮತಿ ಅವರದು.

**'ಕಾಳಿಯ ಕಥೆ'** ಎಂಬ ಶೀರ್ಷಿಕೆಯಲ್ಲಿ ಲೆಗೆಟ್‌ರ ಪುಟಾಣಿಗೆ ೧೮೯೮ರ ಕ್ರಿಸ್‌ಮಸ್ ದಿನದಂದು ಕಲ್ಕತ್ತದ ಬಾಲಿಯಲ್ಲಿ ಬರೆದ ಕಥೆ ಜಗನ್ಮಾತೆ ಕಾಳಿಯನ್ನು ಮಕ್ಕಳಿಗೆ ಪರಿಚಯಿಸುವ ಅವರ ಅನನ್ಯ ಶೈಲಿಯನ್ನು ತೋರಿಸುತ್ತದೆ. ವಿಷಯ ಗಹನವಾದರೂ ಮಕ್ಕಳಿಗೆ ತುತ್ತನ್ನು ತಿನ್ನಿಸುವಂತೆ ಸರಳ ರೀತಿಯಲ್ಲಿ ಮುಖ್ಯ ವಿಚಾರಗಳನ್ನೆಲ್ಲ ತಿಳಿಸುತ್ತಾರೆ. ಅವರು ಮಗುವಿಗೆ ಹೀಗೆ ಬರೆಯುತ್ತಾರೆ:

''ಜಗನ್ಮಾತೆ ನಮಗೆ ಕಾಣಿಸದಿದ್ದರೂ ಇದ್ದೇ ಇದ್ದಾಳೆ. ಜಗನ್ಮಾತೆಯನ್ನು ಕಂಡಾಗ ವ್ಯಕ್ತಿಯಲ್ಲಿ ಅದ್ಭುತ ಪರಿವರ್ತನೆಯಾಗುತ್ತದೆ. ಆ ವ್ಯಕ್ತಿ ಕ್ಷಣಮಾತ್ರದಲ್ಲಿ ಎಲ್ಲಾ ರಹಸ್ಯಗಳನ್ನು ತಿಳಿದುಬಿಡುತ್ತಾನೆ. ಅವನು ಶಕ್ತಿವಂತನೂ, ಬುದ್ಧಿವಂತನೂ ಮತ್ತು ಪ್ರೇಮಪೂರ್ಣನೂ ಆಗುತ್ತಾನೆ ಹಾಗು ಅವನು ಆ ಕ್ಷಣವನ್ನು ಎಂದೆಂದಿಗೂ ಮರೆಯಲಾರ.

''ಈ ಜಗನ್ಮಾತೆ ಎಲ್ಲೆಲ್ಲೂ ಇದ್ದಾಳೆ, ಎಂದೆಂದಿಗೂ ಇದ್ದಾಳೆ. ಜಗನ್ಮಾತೆ ಇನ್ನೊಂದು ಬಗೆಯ ಕಣ್ಣಾಮುಚ್ಚಾಲೆ ಆಟವನ್ನು ಆಡುತ್ತಾಳೆ! ಅವಳು ಎಲ್ಲರೊಳಗು, ಎಲ್ಲದರೊಳಗು ಅವಿತು ಕುಳಿತಿದ್ದಾಳೆ. ಆ ಮಹಾತಾಯಿ ಎಲ್ಲೆಲ್ಲಿ ಅಡಗಿಕೊಂಡಿರ ಬಲ್ಲಳೊ! ಅವಳೆಂದಳು, ''ಆ ಕಲ್ಲನ್ನು ಎತ್ತು, ನಾನು ಅಲ್ಲೇ ಇದ್ದೀನಿ. ಮರದ ತುಂಡೊಂದನ್ನು ಕತ್ತರಿಸು, ಅಗೋ ಅಲ್ಲೇ ನಾನು!'' ಹೀಗೆ ಭಗವಂತ ಎಲ್ಲದರ ಒಳಗೆ ಇರಬಲ್ಲನೆಂದು ಭಾವಿಸಿದ್ದೀಯಾ? ಕಾಳಿ ಎಷ್ಟು ಚೆನ್ನಾಗಿ ಆಟವಾಡುತ್ತಾಳೆ! ಅವಳನ್ನು ನೀನು ಎಲ್ಲಿಬೇಕಾದರು ಕಾಣ ಬಹುದು. ತಾಯಿ ಮಗುವಿನಿಂದ ದೂರ ಸರಿದು ಬಚ್ಚಿಟ್ಟುಕೊಂಡಾಗ ತಾಯಿ ಮಗುವನ್ನು ಪ್ರೀತಿಸುತ್ತಾಳೇನು? ಹೌದು! ಇಲ್ಲದಿದ್ದರೆ ಅವಳು ಅವಿತುಕೊಳ್ಳುವುದಾದರೂ ಏಕೆ? ತಾಯಿ ಕಣ್ಣು ಮುಚ್ಚಿದ್ದಾಗಲೂ ಮಗುವನ್ನು ಪ್ರೀತಿಸುತ್ತಾಳೇನು?

''ಹೌದು, ನೋಡು ತಾಯಿ ಹೇಗೆ ಯಾವಾಗಲೂ ನಗುತ್ತಿದ್ದಾಳೆ! ಕಾಳಿಯೂ ಹೀಗೆ. ಅವಳ ಕಣ್ಣುಗಳು ಮುಚ್ಚಿದ್ದರೂ ನಾವು ಭಯ ಪಡಬೇಕಾಗಿಲ್ಲ. ಅವಳು ಯಾವಾಗಲೂ ನಗುತ್ತಲೇ ಇದ್ದಾಳೆ.

''ಜಗನ್ಮಾತೆ ಪ್ರೀತಿಸುವ ಎಲ್ಲವನ್ನು ನಾವು ಪ್ರೀತಿಸಬೇಕು; ಏಕೆಂದರೆ ನಾವು ಜಗನ್ಮಾತೆಯನ್ನು ಪ್ರೀತಿಸುತ್ತೇವಲ್ಲವೆ? ಏಕೆಂದರೆ ಅವಳು ನಮಗೆ ಮಹಾಮಾತೆಯಲ್ಲವೆ? ಹೀಗೆ ಮಾಡಿದ್ದಲ್ಲದೆ ನಮಗೆ ಬೇರೆ ಉಪಾಯವೇ ಇಲ್ಲವಲ್ಲ?''

ಮಕ್ಕಳ ಆಲೋಚನೆ ಭಾವನೆ ಕೃತಿಗಳನ್ನು ಸೋದರಿ ನಿವೇದಿತಾರವರು ಸೂಕ್ಷ್ಮವಾಗಿ ಗಮನಿಸಿರುವುದನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವುದನ್ನು ನಾವು ಕಾಣಬಹುದು. 

# ಸೋದರಿ ನಿವೇದಿತಾಳ ''The Web of Indian Life''
## ಒಂದು ಅವಲೋಕನ

**ಸ್ವಾಮಿ ಮಂಗಳನಾಥಾನಂದ**

ಭಾರತೀಯ ಜೀವನವನ್ನು ಕುರಿತು ನಿವೇದಿತಾ ಬರೆದ ಕೃತಿಗಳಲ್ಲಿ ಈ ರಚನೆಯು ತುಂಬ ವಿಶಿಷ್ಟವಾದುದು. ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಸಮಾಜವಿಜ್ಞಾನದ ದೃಷ್ಟಿಯಿಂದ ಬರೆದ ಲೇಖನಗಳು ಇಲ್ಲಿವೆ. ಈ ಕೃತಿಯನ್ನು ಪರಿಚಯಿಸಿರುವ ಲೇಖಕರು ಉತ್ತಮ ಭಾಷಣಕಾರರೂ, ಗಾಯಕರೂ, ಲೇಖಕರೂ ಆಗಿದ್ದಾರೆ; ಪ್ರಸ್ತುತ ಬೆಂಗಳೂರು ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.




'**ಭಾರತೀಯ ಜೀವನ ಧರ್ಮ**' (**The Web of Indian Life**) ಇದು ಸೋದರಿ ನಿವೇದಿತಾಳ ಅದ್ಭುತವಾದ ''ಭಾರತೀಯತೆ'' ಯನ್ನು ಸೂಸುವ ಕೃತಿ; ೧೯೧೭ರಲ್ಲಿ ಮೊದಲು ಪ್ರಕಟಗೊಂಡಿತು. ಇದಕ್ಕೆ ಪರಿಚಯವನ್ನು ರವೀಂದ್ರನಾಥ ಠಾಗೋರರು ಬರೆದಿದ್ದಾರೆ. ಅಲ್ಲಿ ಅವರು ಹೀಗೆ ಬರೆಯುತ್ತಾರೆ: ''ಅವಳಲ್ಲಿ ವಿಶ್ವವಿಶಾಲ ಮನಸ್ಸು ಹಾಗೂ ಅಸಾಧಾರಣ ಪ್ರೀತಿಯ ಒಳನೋಟವಿದ್ದುದರಿಂದ ಅವಳು ನಮ್ಮ ಸಮಾಜದ ರಚನೆಗಳ ಹಿಂದಿರುವ ಸೃಜನಾತ್ಮಕ ಕಾರ್ಯವನ್ನು ನೋಡಬಲ್ಲವಳಾಗಿದ್ದಳು. ಅದರಿಂದಲೇ ಅವಳು ನಮ್ಮ ಪ್ರಾಚೀನತೆಯೊಂದಿಗೆ ಜೀವಂತ ಸೇತುವೆಯಾಗಿರುವ, ತನ್ನ ಪರಿಪೂರ್ಣತೆಯತ್ತ ದಾಪುಗಾಲುಗಳನ್ನು ಇಡುತ್ತಿರುವ ನಮ್ಮ ಆತ್ಮವನ್ನು ಕಂಡುಕೊಂಡಳು.'' ನಿವೇದಿತಾಳಿಗೆ ಭಾರತದ ಮೇಲೆ ಅಪಾರ ಪ್ರೇಮವಿದ್ದುದ್ದರಿಂದ, ಭಾರತದ ಆತ್ಮವನ್ನು, ಅದರ ಮೂಲಸ್ರೋತವನ್ನು ಮತ್ತು ಇದರ ಆಧಾರದ ಮೇಲೆ ಸಂಸ್ಕೃತಿ, ಸಮಾಜ ಇತ್ಯಾದಿಗಳನ್ನು ಪರಿಶೀಲಿಸಲು ಆಕೆಗೆ ಸಾಧ್ಯವಾಯಿತು. ಆದ್ದರಿಂದಲೇ ಠಾಗೋರರು ಕೊನೆಯ ವಾಕ್ಯದಲ್ಲಿ ಬರೆಯುತ್ತಾರೆ, ''ಸೋದರಿ ನಿವೇದಿತಾ ಭಾರತೀಯ ಜೀವನವನ್ನು ಕುರಿತು ಅಗಾಧ ಸತ್ಯವನ್ನೇ ನುಡಿದಿದ್ದಾಳೆ. ''

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ''**ದಿವ್ಯಂ ದದಾಮಿ ತೇ ಚಕ್ಷುಃ**'' ಎಂದು ಹೇಳಿದಂತೆ , ಬಹುಶಃ ನಿವೇದಿತಾಳಿಗೆ ಸ್ವಯಂ ಸ್ವಾಮಿ ವಿವೇಕಾನಂದರೇ ಭಾರತವನ್ನು, ಭಾರತೀಯತೆಯನ್ನು ಅರಿಯಲು ''ದಿವ್ಯವಾದ ಕಣ್ಣನ್ನು'' ಕೊಟ್ಟಿರಬೇಕು. ಇಲ್ಲದಿದ್ದರೆ ಒಬ್ಬ ಐರಿಷ್ ಮಹಿಳೆ, ಸ್ವಾತಂತ್ರ್ಯಪೂರ್ವದ ಭಾರತಕ್ಕೆ ಬಂದು, ಇಲ್ಲಿ ಉಳಿದು, ಬೆರೆತು–ಒಂದಾಗಿ ಸೇವೆ ಸಲ್ಲಿಸಬೇಕಾದರೆ ಕಷ್ಟಸಾಧ್ಯ. ಬಾಲ್ಯವಿವಾಹಪದ್ಧತಿ, ಜಾತಿಪದ್ಧತಿ, ಸ್ತ್ರೀಯರ ಪರಿಸ್ಥಿತಿ, ರಾಜಕೀಯ ಕೋಲಾಹಲ, ಬಡತನ ಇವೆಲ್ಲವೂ ಅಂದಿನ ದೇಶದ ಕಪ್ಪು ಮುಖಗಳು. ಇದರ ಮಧ್ಯೆ ಇದ್ದೂ, ಆಕೆಯು ಇಂತಹ ಗ್ರಂಥವನ್ನು ಬರೆದಿರಬೇಕಾದರೆ, ಸ್ವಾಮಿ ವಿವೇಕಾನಂದರ ''ದಿವ್ಯಚಕ್ಷು''ವೇ ಅವಳಿಗೆ ದಾರಿದೀಪವಾಗಿದೆ ಎಂದು ಹೇಳಬಹುದು.

ಈ ಪುಸ್ತಕವನ್ನು ಓದುವ ಮುನ್ನ ನಾವು ನೆನಪಿಡಬೇಕಾದ ಅಂಶವೆಂದರೆ:

೧) ಒಬ್ಬ ಪಾಶ್ಚಾತ್ಯ ಮಹಿಳೆ ಈ ನಮ್ಮ ದೇಶದ ಬಗ್ಗೆ ತಿಳಿದ ಪರಿಯನ್ನು ಅಮೋಘವಾಗಿ ವರ್ಣಿಸಿದ್ದಾಳೆ. ಇದರಲ್ಲಿ ಹಲವು ವಿಷಯಗಳು ನಮಗೆ ತಿಳಿದಿದ್ದರೂ, ಆಕೆ ತಿಳಿಸುವ – ವರ್ಣಿಸುವ ರೀತಿ ಶ್ಲಾಘನೀಯ. ಒಮ್ಮೊಮ್ಮೆ ಅನ್ನಿಸುತ್ತದೆ, ಎಷ್ಟೋ ಅಂಶಗಳು ಇಂದಿಗೂ ನಮ್ಮ ಭಾರತೀಯರಿಗೇ ತಿಳಿದಿಲ್ಲವಲ್ಲಾ! ಎಂದು.

೨) ಇಂದಿಗೆ ಎಷ್ಟೋ ಸಾಮಾಜಿಕ ಪರಿಸ್ಥಿತಿ ಬದಲಾಗಿದೆ. ಉದಾ: ಜಾತಿ ಪದ್ಧತಿ, ಸ್ತ್ರೀಯರ ಶಿಕ್ಷಣ ಇತ್ಯಾದಿ. ಆದರೆ ಅಂದು ಇದರ ರೂಪಗಳೇ ಬೇರೆಯಾಗಿದ್ದವು. ಇದನ್ನು ಅಂದಿನ ದಿನಗಳಿಗೆ ಅನ್ವಯ ಮಾಡಿಯೇ ಅರ್ಥಮಾಡಿಕೊಳ್ಳಬೇಕು. ಈ ಪುಸ್ತಕವು ಮುಖ್ಯವಾಗಿ ಪಾಶ್ಚಾತ್ಯರಿಗೆ ''ಭಾರತದ'' ದರ್ಶನಯೋಗ. (ಎಷ್ಟೋ ಸಂದರ್ಭಗಳಲ್ಲಿ ಭಾರತೀಯರಿಗೂ ಕೂಡ).

ಒಂದು ಜೇಡ ತನ್ನ ಬಲೆಯನ್ನು ಹೆಣೆಯುವಾಗ ಅದರಲ್ಲಿ ಒಂದು ಸಮಸೂತ್ರತೆಯನ್ನು ರೂಪಿಸುತ್ತದೆ. ಹಾಗೆಯೇ ನಿವೇದಿತಾ ನಮ್ಮ ದೇಶದ ಹಲವು ಮುಖವಾದ ದೇವರು, ಧರ್ಮ, ಜಾತಿ, ಸ್ತ್ರೀಯರ ಸ್ಥಾನ, ತತ್ತ್ವ-ಚಿಂತನೆಗಳು, ಇವೆಲ್ಲವನ್ನೂ ರಾಷ್ಟ್ರೀಯ ಆದರ್ಶದ ರೂಪಿನಲ್ಲಿ ಪರಿಶೀಲಿಸಿದ್ದಾಳೆ. ಆದ್ದರಿಂದಲೇ ಈ ಪುಸ್ತಕವನ್ನು ''The Web of Indian life'' ಎಂದು ಹೆಸರಿಸಿರುವುದು.

ನಾವು ಇದರಲ್ಲಿ ಮುಖ್ಯವಾದ ಕೆಲವು ಅಧ್ಯಾಯಗಳ ಅವಲೋಕನವನ್ನು ಮಾಡೋಣ. ಪ್ರತಿಯೊಂದು ಅಧ್ಯಾಯವೂ ಕೂಡ ವಿಶೇಷವಾದ, ಪ್ರತ್ಯೇಕ ಅಧ್ಯಯನವನ್ನು ಅಪೇಕ್ಷಿಸುತ್ತದೆ.

೧) 'The Setting of the Warp': (ಪೂರ್ವತಯಾರಿ)

ಸ್ವಾಮಿ ವಿವೇಕಾನಂದರ ಕರೆಗೆ ಓಗೊಟ್ಟು ನಿವೇದಿತಾ ಭಾರತಕ್ಕೆ ಬಂದು, ಕಲ್ಕತ್ತಾ ನಗರವನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಳ್ಳುತ್ತಾಳೆ. ಆಕೆಯ ಪಾರಂಭ ದಿನಗಳ ಅನುಭವಗಳೇ ಈ ಅಧ್ಯಾಯದ ವಿವರ:

**ನಿತ್ಯಕರ್ಮಗಳ ಸ್ಥಾನ:**

ಬೆಳಗಿನಿಂದ ಹಿಡಿದು ರಾತ್ರಿ ಮಲಗುವವರೆಗೂ ಮಾಡುವ ನಿತ್ಯಕರ್ಮಗಳನ್ನು ನಿವೇದಿತಾ ಬರೆದಂತೆ ಇನ್ನಾರೂ ವಿವರಿಸಲು ಸಾಧ್ಯವಿಲ್ಲ. ಆಕೆಯು ಪ್ರಶ್ನೆಯೊಂದಿಗೆ ಪ್ರಾರಂಭಿಸುತ್ತಾಳೆ: ''ಭಾರತದಲ್ಲಿ ಕಲಿಯುವುದಾದರೂ ಏನು?'' ಅದಕ್ಕೆ ಆಕೆಯ ಉತ್ತರ: ''ಮೇಟರ್‌ಲಿಂಕ್‌ನು ಹೇಳುವಂತೆ 'ಕ್ರಿಯಾಶೀಲವಾದ ಮಹಾಮೌನ.' '' ಮುಂದುವರಿದು ಆಕೆ ಬರೆಯುತ್ತಾಳೆ, ''ನಮ್ಮಲ್ಲಿ ಮುಖ್ಯವಾಗಿ ಸ್ವಾರ್ಥಬುದ್ಧಿಯಿಂದ ಕೂಡಿದ ಕ್ರಿಯೆಗಳಾಗಿರುವ ಊಟ, ಸ್ನಾನ ಇವುಗಳು ಇಲ್ಲಿ ಧಾರ್ಮಿಕ ಕ್ರಿಯೆಗಳಾಗಿವೆ. ಹೀಗೆ ಮಾಡುವಲ್ಲಿ ಸಾಮಾಜಿಕ ಗೌರವದ ಹಾಗೂ ಪಾವಿತ್ರ್ಯಭಾವನೆಯ ರಕ್ಷಣೆಯಿದೆ. '' *(ಪು.೨)*

**ಗಂಗೆಯ ಪ್ರೀತಿ:**

ಭಾರತೀಯರು ಗಂಗೆಯನ್ನು ಭಾವಿಸುವ ನೋಡುವ ರೀತಿಯನ್ನು ಹೀಗೆ ವಿವರಿಸುತ್ತಾಳೆ: ''ಇತಿಹಾಸದಲ್ಲಿ Semiramis, Cleopatra, Mary Stuart ಇವರುಗಳೂ ತಮ್ಮ ಸೌಂದರ್ಯಕ್ಕಾಗಿ, ಜಗತ್ತನ್ನು ಆಳಿದ್ದಕ್ಕಾಗಿ ಹೆಸರುವಾಸಿಗಳು. ಆದರೆ ಇವರೆಲ್ಲರೂ, ಇವೆಲ್ಲವೂ ಭಾರತದ ''ತಾಯ್ತನದ'' ಮುಂದೆ ತಿಳಿಯಾಗಿದೆ. ಗಂಗೆ ಎಲ್ಲರ ತಾಯಿ. ಸರಳರಿಗೆ ಆಕೆ ತಾಯಿ. ಶೀಲವಂತರಿಗೆ ಪವಿತ್ರತೆಯನ್ನು ಕರುಣಿಸುವವಳು, ತತ್ತ್ವಜ್ಞಾನಿಗೆ ಜೀವನದ ಅಸತ್ಯತೆಯನ್ನು ಬೋಧಿಸುವವಳು, ಯಾತ್ರಿಕನಿಗೆ ಹಿಮಾಲಯ-ವಾರಾಣಸಿಯನ್ನು ಪರಿಚಯಿಸುವವಳು. ಇತಿಹಾಸ ಜ್ಞಾನಿಗೆ ಆರ್ಯನಾಗರಿಕತೆಯನ್ನು ತಿಳಿಸುವವಳು.'' ಇದು ಅವಳ ಭಾವಗ್ರಾಹಿತ್ವ.

**ಒಂದು ಸಾವು:**

ಈ ಅಧ್ಯಾಯದ ಕಡೆಯಲ್ಲಿ, ಒಂದು ಸಾವಿನ ಅನುಭವವನ್ನು ಬರೆಯುತ್ತಾಳೆ. ಒಂದು ಗುಡಿಸಲು. ಅದರಲ್ಲಿ ಒಂದು ಬಡ ಕುಟುಂಬ. ಅಲ್ಲಿ ತಾಯಿ ತನ್ನ ಎಳೆಯ ಮಗಳನ್ನು ಕಳೆದುಕೊಂಡಿದ್ದಾಳೆ. ದುಃಖವನ್ನು ತಾಳಲಾರದೆ ಗೋಳಿಡುತ್ತಿದ್ದಾಳೆ. ನಿವೇದಿತಾ ಆ ತಾಯಿಯ ಪಕ್ಕ ಕುಳಿತು ಸಮಾಧಾನ ಮಾಡುತ್ತ ಹೀಗೆ ಹೇಳುತ್ತಾಳೆ:'' 'ಶ್! ತಾಯೆ!' ನಾನಂದೆ; ''ನಿನ್ನ ಮಗು ಜಗನ್ಮಾತೆಯೊಂದಿಗಿದೆ. ಅವಳು ಕಾಳಿಯೊಂದಿಗಿದ್ದಾಳೆ!'' ಒಂದೇ ಕ್ಷಣ, ಆಗ ಒಂದು ಕ್ಷಣದ ಮಟ್ಟಿಗೆ, ಸ್ತಬ್ಧಗೊಳಿಸುವ ನೆನಪುಗಳೊಂದಿಗೆ, ಪಾಶ್ಚಾತ್ಯ ಹಾಗೂ ಪೌರ್ವಾತ್ಯ ವ್ಯಕ್ತಿಗಳಾದ ನಾವಿಬ್ಬರೂ ಒಬ್ಬರಿಗೊಬ್ಬರು ತೆರೆದುಕೊಂಡೆವು; ಅಳೆಯಲಾಗದ ಜಗ-ಹೃದಯದ ಸಾಂತ್ವನದ ಆಳದಲ್ಲಿ ನಾವು ತೆರೆದುಕೊಂಡೆವು.''ಎಂಥ ಮಾತು! ಭಾವಕ್ಕೆ ಅರಿತಾಗ ಪೌರ್ವಾತ್ಯವೇನು-ಪಾಶ್ಚಿಮಾತ್ಯವೇನು!

೨) 'The Easter Mother': (ಪೌರ್ವಾತ್ಯದ ತಾಯಿ)

ಈ ಅಧ್ಯಾಯದಲ್ಲಿ ಸ್ತ್ರೀಯರಿಗೆ ಜಗತ್ತಿನಲ್ಲಿ ಯಾವ ಸ್ಥಾನವನ್ನು ಕೊಟ್ಟರೆ ಯೋಗ್ಯ ಎಂಬ ಚರ್ಚೆ ಮತ್ತು ವಿವರಣೆಯಿದೆ.

ಬಹುಶಃ ಜಗತ್ತಿನಲ್ಲಿ ಎಲ್ಲಿಯೂ ತಾಯಿಗೆ ದೇವರ ಸ್ಥಾನ ನೀಡಿಲ್ಲ. ''ಪರಿಪೂರ್ಣ ಸತೀತ್ವದ ಕಾವ್ಯಮಯ ಹಾಗೂ ಪೌರಾಣಿಕ ನಿರೂಪಣೆ ಬೇಕಾದಷ್ಟಿದೆ; ಆದರೆ ಮಾತೃತ್ವವನ್ನೂ ಕುರಿತು ಇಲ್ಲವೇ ಇಲ್ಲ''ಎಂಬುದೇ ಅವಳ ಮಾತು. ಪರಮಾತ್ಮನಿಗೆ ಲಿಂಗಭೇದವಿಲ್ಲ. ಹಾಗೆಯೇ ತಾಯ್ತನಕ್ಕೂ ಇಲ್ಲ. ಆದ್ದರಿಂದ ತಾಯಿಯೇ ದೇವರು. ತಾಯಿ ಮತ್ತು ಮಗುವಿನ ಸಂಬಂಧ ಇನ್ನೂ ವಿಶೇಷ. ಏಕೆಂದರೆ ಮೊದಲ ಮಗುವಿಗೆ ಜನ್ಮವಿತ್ತಾಗ ಒಬ್ಬ ಸಾಮಾನ್ಯ ಸ್ತ್ರೀ ತಾಯಿಯಾಗುತ್ತಾಳೆ. ಆ ಸ್ಥಾನಕ್ಕೆ ಮತ್ತೆ ಯಾರಿಗೂ ಅವಕಾಶವಿಲ್ಲ. ಅಲ್ಲಿ ತನ್ನ ಮಕ್ಕಳಿಗೆ ಆಕೆ ಎಂದೆಂದಿಗೂ ಪೂಜ್ಯಳೇ. ''ಕಡೇಪಕ್ಷ ಒಂದೇ ಒಂದು ಜೀವಿಯ ಪಾಲಿಗಾದರೂ ಅವಳ ಪ್ರತಿಯೊಂದೂ ಕ್ರಿಯೆ ಪವಿತ್ರವಾಗಿರುವುದು, ಅವಳ ಸರ್ವಸ್ವವೂ ಕಳಂಕರಹಿತವಾಗಿರುವುದು. ಅದರಿಂದ ತನ್ನ ಮಗುವಿನ ಗೌರವಕ್ಕೆ ಅವಳು ಪಾತ್ರಳಾಗುವಳು. ಈ ಸತ್ಯವನ್ನು ಇಡೀ ಜಗತ್ತೇ ಗುರುತಿಸಿದೆ ಎನ್ನಬೇಕು.'' ಇಷ್ಟು ಸೂಕ್ಷ್ಮವಾಗಿ ಈ ಭಾವನೆಗಳನ್ನು ಆಕೆ ಹೇಗೆ ಗ್ರಹಿಸಿದಳು ಎಂಬುದೇ ಆಶ್ಚರ್ಯ. ಹಲವು ಜೀವನದ ಹಾಗೂ ಇತಿಹಾಸದ ಘಟನೆಗಳ ಮೂಲಕ ಈ ವಿಚಾರವನ್ನು ಆಕೆ ಪುಷ್ಟೀಕರಿಸಿದ್ದಾಳೆ. ಆದ್ದರಿಂದಲೇ ಆಕೆ ಬರೆಯುತ್ತಾಳೆ: ''ವಿವಾಹವು ಪವಿತ್ರವಾದ ಕಾರ್ಯವೆನಿಸುವುದು ತಾಯ್ತನದಿಂದಾಗಿ ಮಾತ್ರ.''

'Of the Hindu Woman as Wife' ಎಂಬ ಮುಂದಿನ ಅಧ್ಯಾಯದಲ್ಲಿ ಪತಿ-ಪತ್ನಿಯರ ಸಂಬಂಧವನ್ನು ಕುರಿತು ಆಕೆ ಬರೆಯುತ್ತಾಳೆ: ''ಪ್ರಾಯಶಃ ಪಾಶ್ಚಾತ್ಯ ಮಹಿಳೆ ಚರ್ಚನ್ನು ಪ್ರವೇಶಿಸುವಂತೆ, ಭಾರತೀಯ ಮಹಿಳೆ ತನ್ನ ಪತಿಗೃಹವನ್ನು ಪ್ರವೇಶಿಸುವಳು. ಅವರ ಪ್ರೇಮವೆಂದರೆ ಅದು ಭಕ್ತಿ, ರಹಸ್ಯವಾಗಿ ಸಮರ್ಪಿಸುವಂತಹದು.''

ಅಬ್ಬ! ಎಂತಹ ತುಲನೆ! ಯಾವುದೇ ದೇಶದಲ್ಲಿ ಅದ್ಭುತವಾದ ಮನುಷ್ಯ ಹುಟ್ಟಬೇಕಾದರೆ ಅದಕ್ಕೆ ತಾಯಿಯೇ ಕಾರಣ. ಎಷ್ಟರ ಮಟ್ಟಿಗೆ ನಿವೇದಿತಾ ಹೇಳುತ್ತಾಳೆಂದರೆ, ''ತಾಯಿಯು ಬಾಲ್ಯದಲ್ಲೇ

ಮಗನಿಗೆ ಪಿತೃಗಳಲ್ಲಿ, ಶ್ರಾದ್ಧಾದಿ ಕರ್ಮಗಳಲ್ಲಿ ಗೌರವ-ಪೂಜ್ಯ ಭಾವಗಳನ್ನು ಕಲಿಸದಿದ್ದರೆ, ಮುಂದೆ ಅವನು ತಂದೆ-ತಾಯಿಯರನ್ನು ಚಿತೆಗೆ ಗೌರವದಿಂದ ಕರೆದೊಯ್ಯುವನೆ?''

**೩) ಭಾರತೀಯ ಜಾತಿಪದ್ಧತಿ:**

ಈ ಲೇಖನದಲ್ಲಿ ನಿವೇದಿತಾ ಬಹಳ ಸುಂದರವಾಗಿ ಭಾರತದಲ್ಲಿ ಜಾತಿಪದ್ಧತಿಯ ಉಗಮ-ಬೆಳವಣಿಗೆಗಳನ್ನು ಚಿತ್ರಿಸಿದ್ದಾಳೆ. ಪಾಶ್ಚಾತ್ಯರ ಚಿಂತನೆಯಲ್ಲಿ ಸಾಮಾನ್ಯವಾಗಿ ಕೂಲಂಕಷ ಬುದ್ಧಿ ಹಾಗೂ ವಿಚಕ್ಷಣಮತಿ ಕಂಡುಬರುವುದಿದ್ದರೂ, ಜಾತಿಪದ್ಧತಿಯಂತಹ ಸಂಕೀರ್ಣ ವಿಷಯವನ್ನು ಚರ್ಚಿಸುವಾಗ ಎಲ್ಲಿಯೂ ಅವಹೇಳನ ಅಥವಾ ದೋಷಗಳನ್ನು ಎತ್ತಿತೋರುವ ಸಂಕುಚಿತ ಮನೋಭಾವವನ್ನು ತಾಳದೆ, ಜಾತಿಪದ್ಧತಿಯ ಉಗಮ, ಅದರ ಕಾರಣಗಳು, ಭಾರತೀಯ ಸಮಾಜದ ಭದ್ರಬುನಾದಿಗೆ ಅದರ ಕೊಡುಗೆ ಹಾಗೂ ಕಾಲಾಂತರದಲ್ಲಿ ''ಜಾತಿ'' ಪದದ ಅರ್ಥದಲ್ಲಿ ಆದ ಬದಲಾವಣೆ ಮತ್ತು ಅದರಿಂದ ಸಮಾಜ ಎದುರಿಸುತ್ತಿರುವ ಸಮಸ್ಯೆಗಳನ್ನು ವಿವರವಾಗಿ ತಿಳಿಸುತ್ತಾಳೆ. ಈ ಸಮಸ್ಯೆಗಳಿಗೆ ಯಶಸ್ವಿಯಾದ ಪರಿಹಾರ ಕಂಡುಕೊಳ್ಳುವ ಸಾಮರ್ಥ್ಯ ಭಾರತೀಯರಿಗಿದೆ ಮತ್ತು ಈ ನಿಟ್ಟಿನಲ್ಲಿ ಅದು ಕಾರ್ಯಪ್ರವೃತ್ತವಾಗಿದೆ ಎಂಬುದನ್ನು ಬಹಳ ಮನೋಜ್ಞವಾಗಿ ನಿವೇದಿತಾ ತಿಳಿಸಿದ್ದಾಳೆ.

ಜಾತಿಪದ್ಧತಿಯಲ್ಲಿ ಬ್ರಾಹಣರಿಗೆ ಅಗ್ರಸ್ಥಾನ ಹೇಗೆ ಲಭಿಸಿತು ಎಂಬುದನ್ನು ತಿಳಿಸುತ್ತ ಆಕೆ ಬರೆಯುತ್ತಾಳೆ: ''ವೇದಗಳ ರಕ್ಷಣೆಯೊಂದೇ ಕರ್ತವ್ಯವಾಗಿದ್ದಾಗ, ಅದಕ್ಕಾಗಿ ನಿಯುಕ್ತರಾಗಿದ್ದ ಕುಟುಂಬಗಳು ತಮಗೆ ಸೇರಿದ ವೇದಭಾಗಗಳ ರಕ್ಷಣೆಗೆ ಯಾವ ವಿಧಾನದಲ್ಲಾದರೂ ಸರಿಯೆ, ಜಾತಿಯನ್ನೇ ಅವಲಂಬಿಸಬೇಕಾಗಿ ಬಂತು. ತನ್ನ ಮುಂದಿನ ಕರ್ತವ್ಯದ ನಿರ್ವಹಣೆಗಾಗಿ ಪ್ರತಿಯೊಂದು ಸಾಮರ್ಥ್ಯವನ್ನೂ ಬಳಸಬೇಕಾಗಿ ಬಂದುದೇ ಇಂಥ ಭಾವನೆ ಬೆಳೆಯಲು ಕಾರಣವಾಗಿರಬೇಕು. ಬ್ರಾಹ್ಮಣರ ಪಾದಗಳನ್ನು ನಮಸ್ಕರಿಸುವುದರ ಹಿಂದಿನ ನಿಜವಾದ ಅರ್ಥ ಇದೇ ಆಗಿದೆ. ಅವರಿಗೆ ಭೋಜನ ಮಾಡಿಸುವುದರಿಂದ ಪರಮಪುಣ್ಯವುಂಟಾಗುವುದು, ಅವರನ್ನು ಹತ್ಯೆ ಮಾಡುವುದರಿಂದ ಮಹಾಪಾಪ ಬಂದೊದಗುವುದು ಎಂಬುದರ ಹಿಂದಿರುವ ಅರ್ಥವೂ ಇದೇ. ಇಂಥ ಕಾರ್ಯಗಳಿಂದ ವ್ಯಕ್ತಿ ನಾಶವಾಗುವುದಲ್ಲ, ಇಡೀ ಜನಾಂಗ- ಸಂಸ್ಕೃತಿಯೇ ನಾಶವಾಗುವುದು ಎಂದರ್ಥ.'' *(ಪು.೧೩೬-೩೭)*

ಮತ್ತೊಂದೆಡೆ 'ಜಾತಿ' ಶಬ್ದವನ್ನು ವಿವರಿಸುತ್ತ ಆಕೆ ಬರೆಯುತ್ತಾಳೆ, ''ಜಾತಿಯೆಂಬುದು ಸ್ವಭಾವತಃ ಒಂದು ಗೌರವವಾಗಿದೆ. ಅಂದರೆ, ಅದೊಂದು ಬಗೆಯ ಭಾವನಾತ್ಮಕವಾದ ಆದರ್ಶ. ಅದರಿಂದ ಸಮಾಜವು ತನ್ನನ್ನು ಸತತವೂ ಕೆಲವೊಂದು ಗಂಡಾಂತರಗಳಿಂದ ರಕ್ಷಿಸಿಕೊಳ್ಳುವುದು. ಅದರ ಹೊರತಾಗಿ ಅದಕ್ಕೆ ಬೇರೆ ಯಾವುದೇ ರಕ್ಷಣೆಯಿರಲಾರದು.''

ಭಾರತೀಯ ಚಿಂತನೆಯ ಬಗ್ಗೆ ಬರೆಯುವಾಗ ನಿವೇದಿತಾ ಋಗ್ವೇದದ 'ನಾಸದೀಯ ಸೂಕ್ತ'ದಿಂದ ಹಿಡಿದು ಸ್ವಾಮಿ ವಿವೇಕಾನಂದರ ಚಿಂತನೆಯವರೆಗೂ ಪರಿಶೀಲಿಸಿದ್ದಾಳೆ.

''ಪೌರಾತ್ಯದ ಅನುಭವ''ಗಳಲ್ಲಿ ಜ್ಞಾನ, ಭಕ್ತಿ, ಯೋಗಗಳ ವಿವರ, ಅವುಗಳ ಆತ್ಯಂತಿಕ ಸತ್ಯ ಮತ್ತು ಅತ್ಯಂತ ಸಾಮಾನ್ಯನೂ ಕೂಡ ಭಾರತದಲ್ಲಿ ಜ್ಞಾನವನ್ನು ಹೇಗೆ ಪಡೆಯುವನು ಎಂಬುದನ್ನು ಚಿತ್ರಿಸಿದ್ದಾಳೆ.

'Islam in India' ಅಧ್ಯಾಯದಲ್ಲಿ ಇಸ್ಲಾಂ ಧರ್ಮ, ಅದರ ಬೆಳವಣಿಗೆ, ಭಾರತದಲ್ಲಿ ಅದರ ಪ್ರಭಾವ, ಅವರ ಆಳ್ವಿಕೆ ಇವನ್ನು ಕುರಿತು ವರ್ಣಿಸಿದ್ದಾಳೆ.

ಭಾರತದ ಮೈತ್ರಿ, ಹಲವು ಕ್ಷೇತ್ರಗಳ ಮಹಿಮೆ ಮತ್ತು ಅಲ್ಲಿಯ ಸಂಸ್ಕೃತಿ ಇವನ್ನೂ ಈ ಗ್ರಂಥದ ವಿವಿಧ ಅಧ್ಯಾಯಗಳಲ್ಲಿ ನಿವೇದಿತಾ ವಿವರಿಸಿದ್ದಾಳೆ.

ಈ ಎಲ್ಲ ಹಿನ್ನೆಲೆಯಲ್ಲಿ, ಅಂದರೆ ಭಾರತ ಇಷ್ಟು ಅದ್ಭುತವಾದ ಸಂಸ್ಕೃತಿ-ನಾಗರಿಕತೆಗಳನ್ನು ಹೊಂದಿದ್ದೂ, ಇಂದು ಹಿಂದುಳಿದುದೇಕೆ ಎಂಬುದೇ ಅವಳ ಪ್ರಶ್ನೆ. ಇದಕ್ಕೆ ಉತ್ತರವಾಗಿ ಭಗವದ್ಗೀತೆಯ ''ಯದಾ ಯದಾ ಹಿ ಧರ್ಮಸ್ಯ...'' ಶ್ಲೋಕವನ್ನು ಉದ್ಧರಿಸುತ್ತ, ಆಶಾಭಾವವನ್ನು ತಾಳಿ ಲೇಖನಿಗೆ ವಿರಾಮ ಹೇಳುತ್ತಾಳೆ. ಅವಳ ವಾಕ್ಯದಲ್ಲಿಯೇ ನೋಡುವುದಾದರೆ: ''ಅಂದರೆ ಮಹಾಮಾತೆ ಈಗ ಬಳಲಿ ಬೆಂಡಾಗಿರುವಳೆ? ಆಕೆ ಜಗತ್ತಿಗೆ ಏನನ್ನು ನೀಡಿರುವಳೋ ಅದು ಸಾಲದಾಯಿತೆ? ಮತ್ತೆ ಅವಳು ಮೇಲೆದ್ದು ಬಂದು, ತನ್ನ ಮಕ್ಕಳ ಒಳಿತಿಗಾಗಿ ತಾನು ವಿಜೃಂಭಿಸುವಳೆ? ಯಾರು ಹೇಳಬಲ್ಲರು?

''ಯಾವಾಗ ಯಾವಾಗ ಧರ್ಮಗ್ಲಾನಿಯಾಗುವುದೋ, ಹಾಗೂ ಅಧರ್ಮವೇ ವಿಜೃಂಭಿಸುವುದೋ, ಆಗ ಸ್ವತಃ ನಾನೇ ಜನ್ಮ ತಳೆದು ಬರುತ್ತೇನೆ..'' ❖

## ಸ್ತ್ರೀಯರು ಮತ್ತು ನಿಮ್ನವರ್ಗ

ನನ್ನ ಗುರುದೇವ ಮಾತ್ರ ತಾವು ಯಾವ ಸಂಸ್ಥೆಗೆ ಸೇರಿದ್ದರೋ ಅದು ಎಂದೆಂದಿಗೂ ಸ್ತ್ರೀ ಮತ್ತು ನಿಮ್ನ ವರ್ಗದ ಹಿತಕ್ಕಾಗಿ ನಿಂತಿದೆ ಎಂದು ಸಾರಿದರು. ಈ ಸಂದೇಶವನ್ನೇ ಇವರು ಅಮೆರಿಕಾದಲ್ಲಿ ಇದ್ದಾಗ ಖೇತ್ರಿ ಮಹಾರಾಜರಿಗೆ ಒಂದು ಸಂದೇಶವನ್ನು ಕಳುಹಿಸು ಒಂದು ಫೋನೋಗ್ರಾಫ್ ರಿಕಾರ್ಡಿನಲ್ಲಿ ಹೇಳಿದರು. ಇವರು ಪಾಶ್ಚಾತ್ಯ ದೇಶದಲ್ಲಿದ್ದಾಗ, ಇನ್ನೇನು ಸಾಯುವ ಸ್ಥಿತಿಗೆ ಬಂದರೇನೋ ಎಂದು ಕೆಲವು ವೇಳೆ ಭಾವಿಸಿದಾಗ, ತಮ್ಮ ಶಿಷ್ಯರಿಗೆ ಈ ಒಂದು ಸಂದೇಶವನ್ನು ಮಾತ್ರ ಕೊಡುತ್ತಿದ್ದರು: ''ಎಂದಿಗೂ ಮರೆಯಬೇಡಿ, ಸ್ತ್ರೀಯರ ಮತ್ತು ನಿಮ್ನವರ್ಗದವರ ಹಿತವನ್ನು.''

**-ಸೋದರಿ ನಿವೇದಿತಾ,**

*('ನಾ ಕಂಡಂತೆ ನನ್ನ ಗುರುದೇವ' ಪು.೧೯೧)*

# ನಿವೇದಿತಾ ಮತ್ತು ಭಾರತೀಯ ಕಲಾಪ್ರಪಂಚ

**ಶಶಿಕಲಾ ಶ್ರೀಧರ್**








ಲಲಿತಕಲೆಯ ಹಲವು ಕ್ಷೇತ್ರಗಳಲ್ಲಿ ವಿಶೇಷ ಆಸಕ್ತಿ ತಳೆದಿದ್ದ ನಿವೇದಿತಾ ಉತ್ತಮ ರಸಾಸ್ವಾದಕಿ ಹಾಗೂ ಕಲಾವಿಮರ್ಶಕಿಯಾಗಿದ್ದಳು. ಹಲವು ಮಂದಿ ಭಾರತೀಯ ಕಲಾವಿದರನ್ನು ಆಕೆ ಪೋಷಿಸಿ ಬೆಳೆಸಿದಳು. ಅವಳ ಸಹಾಯದಿಂದ ಪ್ರಸಿದ್ಧಿಗೆ ಬಂದ ಅನೇಕ ಮಂದಿ ಕಲಾವಿದರು ಮುಂದೆ ಜಗದ್ವಿಖ್ಯಾತರಾದರು. ಈ ಕುರಿತು ವಿವರಿಸಿರುವ ಲೇಖಕಿ, ಬೆಂಗಳೂರು ರಾಮಕೃಷ್ಣ ಮಠದ ಭಕ್ತರು. ಅವರು ಸಂಸ್ಕೃತ, ಸಂಗೀತ ಕ್ಷೇತ್ರಗಳಲ್ಲಿ ನುರಿತವರು; ಅನೇಕ ಆಧ್ಯಾತ್ಮಿಕ ಗ್ರಂಥ ಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ.

''**ಕ**ಲೆ ಸೌಂದರ್ಯವನ್ನು ವ್ಯಕ್ತಗೊಳಿಸಬೇಕು. ಪ್ರತಿಯೊಂದರಲ್ಲಿಯೂ ಕಲೆ ಇರಬೇಕು. ನಿಜವಾದ ಕಲೆಯನ್ನು ಒಂದು ಕಮಲ ಪುಷ್ಪಕ್ಕೆ ಹೋಲಿಸಬಹುದು. ಕಮಲ ಕೆಸರಿನಲ್ಲೇ ಇದ್ದರೂ ಅದರ ಸಾರವನ್ನು ಹೀರಿ ಅದರಿಂದ ಮೇಲೆ ನಿಂತಿದೆ. ಇದರಂತೆಯೇ ಕಲೆಯು ಪ್ರಕೃತಿಯೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದರೂ ಅದನ್ನು ಮೀರಿ ಇರಬೇಕು. ನಮ್ಮ ಗುರುಗಳಾದ ಭಗವಾನ್ ಶ್ರೀರಾಮಕೃಷ್ಣರಲ್ಲಿ ಕಲಾವಿದನ ಸ್ವಭಾವ ಪೂರ್ಣಪ್ರಕಾಶಕ್ಕೆ ಬಂದಿತ್ತು. ಕಲಾಕೌಶಲ್ಯ ಇಲ್ಲದೆ ಇದ್ದರೆ ಯಾರೂ ನಿಜವಾಗಿ ಆಧ್ಯಾತ್ಮಿಕ ಜೀವಿಗಳಾಗಲಾರರು ಎಂದು ಅವರು ಹೇಳುತ್ತಿದ್ದರು'' ಎಂದು ಘೋಷಿಸಿದರು ಸ್ವಾಮಿ ವಿವೇಕಾನಂದರು. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೭, ಪು.೩೪೭-೪೮)*

ನಮ್ಮ ದೇಶದಲ್ಲಿ ನಮ್ಮ ಪೂರ್ವಿಕರು ಸಂಗೀತ, ಸಾಹಿತ್ಯ, ಕಲೆಗಳಲ್ಲಿ ಉಚ್ಚಶಿಖರವನ್ನೇರಿದ್ದರು. ಆ ಕಾಲದ ಶಿಲ್ಪಿ ಕೆತ್ತಿರುವ ಒಂದು ವಿಗ್ರಹವನ್ನು ನೋಡಿದರೆ ಅದು ನಮ್ಮನ್ನು ಈ ಭೌತಿಕ ಪ್ರಪಂಚವನ್ನು ಮರೆಯುವಂತೆ ಮಾಡಿ ಒಂದು ಹೊಸ ಆದರ್ಶ ಪ್ರಪಂಚಕ್ಕೊಯ್ಯುವುದು.

ಸ್ವಾಮಿ ವಿವೇಕಾನಂದರು, ''ಭಾರತ ದೇಶದ ಸಂಗೀತದಲ್ಲಿ ಸಪ್ತಸ್ವರಗಳು ಚೆನ್ನಾಗಿ ಅಭಿವೃದ್ಧಿಯಾಗಿದ್ದವು. ಈ ದೇಶ ಸಂಗೀತದಲ್ಲಿ, ನಾಟಕದಲ್ಲಿ, ಶಿಲ್ಪಕಲೆಗಳಲ್ಲಿಯೂ ಅತ್ಯಂತ ಮುಂದುವರಿದಿತ್ತು. ಈಗ ಏನೇ ಆದರೂ ಅವೆಲ್ಲಾ ಬರಿಯ ಅನುಕರಣೆ'' ಎಂದು ಭಾರತೀಯ ಕಲೆಗಳ ಮರ್ಮವರಿತು ನುಡಿಯುತ್ತಾರೆ.

ಸಂಗೀತ ಕವನ, ಪ್ರಬಂಧ, ಪ್ರವಚನ ಈ ಎಲ್ಲ ಪ್ರತಿಭೆಗಳಿಂದ ಕೂಡಿ ಇದರೊಡನೆಯೇ ಅಪಾರವಾದ ದೇಶಭಕ್ತಿಯಿಂದ ಕೂಡಿ ಭಾರತದ ಸರ್ವತೋಮುಖ ಪ್ರಗತಿಯನ್ನೇ ಬಾಳಿನ ಧ್ಯೇಯವಾಗಿಸಿಕೊಂಡ ಸ್ವಾಮಿ ವಿವೇಕಾನಂದರು ಭಾರತದ ಆಧ್ಯಾತ್ಮಿಕತೆ ಎಂಬ ಮಹಾಶಕ್ತಿಯ ಪರಿಚಯವನ್ನು ಪಾಶ್ಚಾತ್ಯ ದೇಶಗಳಿಗೆ ತಿಳಿಸಿ ಅಲ್ಲಿನ ಶಿಕ್ಷಣ, ವಿಜ್ಞಾನಗಳನ್ನು ಭಾರತಕ್ಕೆ ತರುವ ಮಹದುದ್ದೇಶದಿಂದ ಎರಡು ಬಾರಿ ಸಮುದ್ರಪ್ರಯಾಣ ಮಾಡಿದರು. ಈ ಮಹಾ ಕಾರ್ಯಕ್ಕಾಗಿ ಭಾರತಕ್ಕೆ ಬಂದು ಕಾಯಾ, ವಾಚಾ, ಮನಸಾ ಭಾರತಕ್ಕೆ ಸೇವೆಸಲ್ಲಿಸಲು ಸಿದ್ಧಳಾದ ಪಾಶ್ಚಾತ್ಯ ಮಹಿಳೆಯೋರ್ವಳನ್ನು ಭಾರತಕ್ಕೆ ಆಹ್ವಾನಿಸುತ್ತಾ ಹೀಗೆ ಕರೆಯುತ್ತಾರೆ:

**''ನಿನ್ನಲಿಹುದು ಸತ್ಯ ಶ್ರದ್ಧೆ ನಿನ್ನಲಿಹುದು ಸುಪ್ತಶಕ್ತಿ**
**ಜಗವನೆಲ್ಲ ತಣಿಪ ಶಕ್ತಿ ಕಾಲದಲಿ ತದಭಿವ್ಯಕ್ತಿ ॥**

**ಬೇಕು ಎಮಗೆ ಧೀರವಾಣಿ ಧೀರತರದ ಕೃತಿಯು ಬೇಕು**
**ಏಳಿರೇಳಿ ಎದ್ದು ನಿಲ್ಲಿ! ಕೇಳಿ ಕರೆಯ ಮಹೋದಯರೆ।**
**ದುಃಖಜ್ವಾಲೆ ದಹಿಸುತಿಹುದು ಜಗವನೆಲ್ಲ, ಏಳಿರೇಳಿ**
**ಸಾಕು ಇನ್ನು ನಿಮ್ಮ ನಿದ್ರೆ, ಉತ್ತಿಷ್ಠತ! ಜಾಗ್ರತ! ॥**

**ಏಳಿರೇಳಿ ಎಂದು ಕರೆವ ಎಲ್ಲ ಜಗವ ಕೂಗಿ ಕರೆವ**
**ಸುಪ್ತ ದೈವರೆಲ್ಲ ಕೇಳಿ ಎದ್ದು ಬರುವವರೆಗೆ ಕರೆವ**
**ಅಂತರಾತ್ಮ ದಿವ್ಯ ಆತ್ಮ ಓಗೊಡುವವರೆಗೆ ಕರೆವ**
**ಇದುವೆ ಬಾಳ ಹಿರಿಯ ಕರ್ಮ ಪರಮಸೇವೆ ಮಹಾನ್ ಧರುಮ॥''**

*(ಸ್ವಾಮಿ ವಿವೇಕಾನಂದರು ನಿವೇದಿತೆಗೆ ೭.೬.೧೮೯೬ ರಂದು ಬರೆದ ಪತ್ರದ ಕನ್ನಡ ಭಾವಾನುವಾದ)*

ಭಾರತೀಯರಲ್ಲಿನ ಈ ಭಾರತಿ ಯಾರು? ವಿವೇಕಾನಂದರ ವಿಶ್ವಾಸಕ್ಕೆ ಪಾತ್ರಳಾದ ವಿದೇಶದ ಈ ವೀರಮಹಿಳೆ ಯಾರು?

ಶ್ರೀರಾಮಕೃಷ್ಣ ಪರಮಹಂಸರು ಒಮ್ಮೆ ಆಳವಾದ ಧ್ಯಾನದಲ್ಲಿ ಮುಳುಗಿದ್ದರು. ಬಹಳ ಸಮಯದ ನಂತರ ಪ್ರಕೃತಿಸ್ಥರಾಗಿ, ತಾವು ಆ ಸಮಾಧಿ ಸ್ಥಿತಿಯಲ್ಲಿ ಕಂಡ ಅದ್ಭುತ ದೃಶ್ಯವನ್ನು ವರ್ಣಿಸುತ್ತಾ, ''ನಾನು ಬಿಳಿಯರ ರಾಜ್ಯದಲ್ಲಿದ್ದೆ. ಅವರ ಚರ್ಮವೂ ಬಿಳಿ, ಹೃದಯವೂ ಬಿಳಿ. ಅವರು ಸರಳರೂ ಪ್ರಮಾಣಿಕರೂ ಆಗಿರುವರು. ಅದು ತುಂಬಾ ಸುಂದರ ದೇಶ. ನಾನು ಅಲ್ಲಿಗೆ ಹೋಗಬಹು

ದೇನೋ?'' ಎಂದು ಉದ್ಧರಿಸುತ್ತಾರೆ. ಹೀಗೆ ಮುಂಬರುವ ಬಿಳಿಯ ಭಕ್ತರನ್ನು ಆರಿಸಿಕೊಳ್ಳಲು ಶ್ರೀರಾಮಕೃಷ್ಣರ ಸೂಕ್ಷ್ಮಶರೀರ ಆಗಲೇ ವಿದೇಶಕ್ಕೆ ಹೋಗಿ ಬಂದಿತ್ತು.

ಶ್ರೀರಾಮಕೃಷ್ಣರ ಧ್ಯಾನಾನುಭವಕ್ಕೆ ಗೋಚರಿಸಿದ ಈ ವಿದೇಶೀ ಭಕ್ತರು ಯಾರು?

ಶ್ರೀರಾಮಕೃಷ್ಣರ ಕಂದ ಸ್ವಾಮಿ ವಿವೇಕಾನಂದ ಇಂಗ್ಲೆಂಡ್ ದೇಶದಲ್ಲಿ ನಮ್ಮ ಭಾರತದೇಶದ ಧರ್ಮ, ಧ್ಯೇಯ, ಔನ್ನತ್ಯಗಳ ಅನೇಕ ಪ್ರವಚನಗಳನ್ನು ನೀಡಿದಾಗ ಬಹಳ ಮಂದಿ ಪ್ರಭಾವಿತ ರಾದರು. ಇದು ಶಾರದೆಯ ಕೃಪಾಪಾತ್ರನ ಧೀಶಕ್ತಿ, ವಾಕ್ ಶಕ್ತಿ! ಆ ಸಭೆಯಲ್ಲಿ ಉಪಸ್ಥಿತರಿದ್ದ ಅನೇಕ ಗಣ್ಯರಲ್ಲಿ ಓರ್ವ ಐರಿಷ್ ಮಹಿಳೆ ವಿವೇಕಾನಂದರ ಅಧ್ಯಾತ್ಮ ಪುತ್ರಿಯಾಗಿ ಭಾರತಕ್ಕೆ ಬಂದು ಭಾರ ತೀಯರಿಗಾಗಿ ತನ್ನನ್ನು ತಾನು ಸಂಪೂರ್ಣವಾಗಿ ಸಮರ್ಪಿಸಿ ಕೊಂಡಳು. ಈ ಮಹಾತ್ಯಾಗಿ ಯಾರು?

ಗಂಭೀರಳೂ, ಅಧ್ಯಯನಶೀಲಳು, ಉತ್ಸಾಹಿಯೂ, ಸ್ವಾಭಿ ಮಾನಿಯೂ ಆಗಿದ್ದ ಈ ಯುವತಿ ಐರ್ಲೆಂಡ್ ನಿವಾಸಿ ಜಾನ್ ನೋಬಲ್‌ರ ಪೌತ್ರಿ, ಸ್ಯಾಮ್ಯುಯೆಲ್ ರಿಚ್‌ಮಂಡ್ ಮತ್ತು ಮೇರಿ ಇಸಾಬೆಲ್‌ರ ಪುತ್ರಿ ಮಾರ್ಗರೆಟ್ ನೋಬಲ್ ಮುಂದೆ ಭಾರತ ಮಾತೆಯ ಪುತ್ರಿಯಾದ ಭಾರತೀಯಳಲ್ಲದ ಈ ಭಾರತೀಯಳು ಸ್ವಾಮಿ ವಿವೇಕಾನಂದರ ಶಿಷ್ಯೆಯಾಗಿ ಅವರಿಂದ ಬ್ರಹ್ಮಚರ್ಯ ದೀಕ್ಷೆ ಪಡೆದು, ಭಾರತದಲ್ಲೂ, ವಿದೇಶಗಳಲ್ಲೂ ಖ್ಯಾತಿಗಳಿಸಿದ ''ಸೋದರಿ ನಿವೇದಿತಾ.''

ಅಕ್ಟೋಬರ್ ೨೮, ೧೮೬೭ರಂದು ಐರ್ಲೆಂಡಿನ ಡಂಗನಾನ್ ನಲ್ಲಿ ಜನಿಸಿದ ಮಾರ್ಗರೆಟ್ ಲಂಡನ್‌ನಲ್ಲಿ ಸ್ವಾಮಿ ವಿವೇಕಾನಂದರ ವಿಚಾರಗಳಿಗೆ ಮುಗ್ಧಳಾಗಿ, ಅವರ ಮಹತ್ಕಾರ್ಯಗಳಿಗೆ ನೆರ ವಾಗಲು ಇಚ್ಛಿಸಿ, ಜನವರಿ ೨೮, ೧೮೯೮ರಂದು ಭಾರತಕ್ಕೆ ಆಗಮಿಸಿ ದಳು. ಮಾರ್ಚ್ ೧೭, ೧೮೯೮ರಂದು ಶ್ರೀಮಾತೆ ಶಾರದಾದೇವಿ ಯವರ ದರ್ಶನ ಆಶೀರ್ವಾದ ಪಡೆದು, ಮಾರ್ಚ್ ೨೫, ೧೮೯೮ ರಂದು ಗುರು ಸ್ವಾಮಿ ವಿವೇಕಾನಂದರಿಂದ ಬ್ರಹ್ಮಚರ್ಯ ದೀಕ್ಷೆ ಪಡೆದು, '**ನಿವೇದಿತಾ**' ಎಂಬ ನಾಮಧೇಯವನ್ನು ತನ್ನ ಗುರುವಿ ನಿಂದಲೇ ಪಡೆದು ಇಂದು ವಿಶ್ವವಿಖ್ಯಾತಳಾಗಿದ್ದಾಳೆ.

ಭಾರತಕ್ಕೆ ಬಂದು ತನ್ನ ತನುಮನಧನಗಳನ್ನು ಸಮರ್ಪಿಸಿ, ಗುರುವಿನಾಣತಿಯಲ್ಲಿಯೇ ತನ್ನ ಏಳ್ಗೆಯನ್ನು ಕಂಡುಕೊಂಡು, ಭಾರತಕ್ಕಾಗಿ ದಣಿವಿಲ್ಲದೆ ದುಡಿದು, ಎಲ್ಲ ಕ್ಷೇತ್ರಗಳಲ್ಲೂ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ದಕ್ಷೆ ಈ ದೀಕ್ಷಿತೆ. ಭಾರತಕ್ಕೆ ವಿವಿಧ ಕ್ಷೇತ್ರಗಳಲ್ಲಿ ಇವಳ ಕೊಡುಗೆ ಅಪಾರ. ಕೇವಲ ೪೪ ವರ್ಷ ಗಳ ಕಾಲ ಬಾಳಿದ ಈ ವನಿತೆ, ಭಾರತದ ಬಾಲಿಕೆಯರ, ಮಹಿಳೆ ಯರ ವಿದ್ಯಾಭ್ಯಾಸಕ್ಕಾಗಿ ಅನಂತ ಅಡಚಣೆಗಳನ್ನು ಎದುರಿಸ ಬೇಕಾಗಿ ಬಂದರೂ ಧೃತಿಗೆಡದೆ ಗುರುವಿನಾಣತಿಯನ್ನು ಚಾಚೂ ತಪ್ಪದೆ ಪಾಲಿಸಿ ಪಾವನಳಾದಳು. ಅಕ್ಟೋಬರ್ ೧೩, ೧೯೧೧ ರಂದು ಅವಳ ಅಂತ್ಯ ಸಮೀಪಿಸಿದಾಗ, ''ದೋಣಿ ಮುಳುಗುತ್ತಿದೆ. ಆದರೆ ನಾನು ಸೂರ್ಯೋದಯವನ್ನು ನೋಡುತ್ತೇನೆ'' ಎಂದು ನುಡಿದ ಧೀರೆ. ಭಾರತದ ನಾರಿಯರಿಗೆ ರಾಷ್ಟ್ರೀಯ ಪದ್ಧತಿಯಲ್ಲಿ ಶಿಕ್ಷಣ ನೀಡಲು ಉಪಯೋಗವಾಗಲೆಂದು ತನ್ನೆಲ್ಲ ಸಂಪತ್ತನ್ನು ತನ್ನ ಗುರುಗಳು ಆರಂಭಿಸಿದ ಬೇಲೂರು ಮಠದ ಟ್ರಸ್ಟಿಗಳಿಗೆ ಒಪ್ಪಿಸಿದ ತ್ಯಾಗಮಯಿ. ಇಂತಹ ಭಾರತರತ್ನದ ೧೫೦ನೇ ಜನ್ಮೋತ್ಸವದಂದು ಭಾರತದ ವಿವಿಧ ಕ್ಷೇತ್ರಗಳಲ್ಲಿ ಅವಳ ಕೊಡುಗೆ ಏನೆಂದು ಸ್ಮರಿಸು ವುವೇ ಅವಳಿಗೆ ನಾವು ಸಲ್ಲಿಸುವ ಭಕ್ತಿ ಕಾಣಿಕೆ.

ಪ್ರಸ್ತುತ ಲೇಖನದಲ್ಲಿ ಭಾರತೀಯ ಕಲಾಕ್ಷೇತ್ರದಲ್ಲಿ ನಿವೇ ದಿತೆಯ ಅಪಾರ ಕೊಡುಗೆ ಎಂಬ ವಿಚಾರ ಪುಷ್ಪವನ್ನು ಅವಳಿಗೆ ಪ್ರೇಮದಿಂದ ಸಮರ್ಪಿಸುತ್ತೇನೆ.

ಭಾರತದ ರಾಷ್ಟ್ರೀಯ ಕಲೆಯ ಪುನರ್ಜನ್ಮವೇ ನನ್ನ ಪರಮ ಪ್ರೀತಿಯ ಕನಸು – ಇದು ವಿದೇಶದ ಓರ್ವ ಮಹಿಳೆ ಭಾರತೀಯ ಕಲೆಯ ಬೆಲೆಯರಿತು ಪ್ರಶಂಸಿಸುವ ಪರಿ! ಭಾರತದ ಪುರಾತನವೂ ಆದರೆ ಎಂದೆಂದಿಗೂ ನವೀನವೂ ಆಗಿರುವ ಕಲೆಯ ಸೌಂದರ್ಯ ಅಮರವಾಗಿರಲು ಕಾರಣ ಅದರ ಮೂಲ ಅಧ್ಯಾತ್ಮ. ಹಿರಿದಾದ ಅಂತರಾರ್ಥವುಳ್ಳ ಇವು ಮಾನವನನ್ನು ಹೃದಯದಾಳಕ್ಕೆ ಕರೆದೊಯ್ದು ಅಲ್ಲಿನ ಬೆಳಕು, ಆನಂದಗಳ ಅನುಭವವನ್ನು ಉಂಟುಮಾಡುತ್ತವೆ. ಇವು ಜೀವನದ ಅಮರಸತ್ಯದ ವ್ಯಕ್ತರೂಪಗಳಾಗಿವೆ.

ಒಂದು ನಾಡಿನ ಕಲೆಯ ಮೂಲಕ ಆ ದೇಶದ ಸಂಸ್ಕೃತಿಯ ಪರಿಚಯ ಮಾಡಿಕೊಳ್ಳುವ ಪ್ರಯತ್ನ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ. ಇದರಂತೆಯೇ ಸನಾತನಾರ್ಯ ಭಾರತೀಯರ ಸುಂದರ ಸಂಸ್ಕೃತಿ ಭಾರತದ ಎಲ್ಲ ಕಲಾ ಪ್ರಕಾರಗಳಲ್ಲೂ ಮೂಡಿ ಬಂದಿದೆ. ಕಾವ್ಯ, ನಾಟಕ, ಸಾಹಿತ್ಯ, ಚಿತ್ರಕಲೆ, ಶಿಲ್ಪಕಲೆ, ಸಂಗೀತ, ವಾದ್ಯ, ಈ ಎಲ್ಲ ಕಲಾವಿಶೇಷಗಳು ಮಾನವ ಜನ್ಮದ ಮೂಲ ತತ್ತ್ವ ಗಳನ್ನೂ, ಸತ್ಯವನ್ನೂ ಸಹಜ ಸುಂದರವಾಗಿ ಪ್ರತಿಪಾದಿಸುತ್ತಿವೆ. ಇಂತಹ ಭದ್ರವಾದ ತಳಪಾಯವಿರುವ ಈ ಕಲಾಸೌಧಕ್ಕೆ ಅಡಚಣೆ, ಆಘಾತ ಉಂಟಾಗುವುದು ಎಂದಿಗೂ ಸಾಧ್ಯವಿಲ್ಲ. ಈ ಪರಮಾರ್ಥ ವನ್ನು ಸ್ಪಷ್ಟವಾಗಿ ಅರಿತಿದ್ದ ಸ್ವಾಮಿ ವಿವೇಕಾನಂದರ ಪ್ರಭಾವಕ್ಕೊಳ ಗಾದ ಮಾರ್ಗರೆಟ್ ನೋಬಲ್ ಭಾರತೀಯ ಕಲಾವೈಭವಕ್ಕೆ ಮನ ಸೋತುದರಲ್ಲಿ ಆಶ್ಚರ್ಯವೇ ಇಲ್ಲ. ಗುರುವಿನ ಪಾದತಲದಲ್ಲಿ ಕುಳಿತು ಭಾರತದ ಸಂಸ್ಕೃತಿಯ ಪರಂಪರೆಯ ಪಾಠ ಕಲಿತು, ಭಾರತದ ಶ್ರುತಿ, ಸ್ಮೃತಿ, ಪುರಾಣಗಳನ್ನೂ, ಇತಿಹಾಸವನ್ನೂ ಕಲೆ ಸಾಹಿತ್ಯ ಪ್ರಕಾರಗಳನ್ನೂ ಆಳವಾಗಿ ಅಧ್ಯಯನ ಮಾಡಿ ಕರಗತ ಮಾಡಿಕೊಂಡ ಅತ್ಯಂತ ಸಮರ್ಥ ಶೀಲೆ ಈ ವಿದೇಶಿ ಮಹಿಳೆ!

ಭಾರತೀಯ ಪ್ರಾಚೀನ ಕಲೆಯ ಪುನರುತ್ಥಾನಕ್ಕೆ ಅತ್ಯಂತ ಪ್ರಭಾವಶಾಲಿ ಕಾರ್ಯವನ್ನೆಸಗಿದ ನಿವೇದಿತಾ ಸ್ವತಃ ಅದ್ಭುತ ಕಲಾ ವಿಮರ್ಶಕಳಾಗಿದ್ದಳು. ಸ್ವಾಮೀಜಿಯವರನ್ನು ಭೇಟಿಯಾಗುವ ಮೊದಲು ಲಂಡನ್‌ನಲ್ಲಿ ತಾನು ನಡೆಸುತ್ತಿದ್ದ ಶಾಲೆಯ ಮಕ್ಕಳಿಗೆ ಚಿತ್ರ ಬರೆಯುವುದನ್ನು ಕಲಿಸುತ್ತಿದ್ದ ಉಪಾಧ್ಯಾಯ ಎಬಿನೆಜ಼ರ್ ಕುಕ್‌ರವರಿಂದ ಪ್ರಭಾವಿತಳಾಗಿ ಅವರ ಬಳಿ ಮೂರು ವರ್ಷಗಳ

ಕಾಲ ತರಬೇತಿ ಪಡೆದು ತಾನು ಉತ್ತಮ ಚಿತ್ರಕಲಾ ವಿಮರ್ಶಕಳಾಗಿದ್ದಳು. ಹೀಗೆ ಪಾಶ್ಚಾತ್ಯ ಕಲೆಯ ಪರಿಚಯವೂ ಇದ್ದುದರಿಂದ ಎರಡೂ ಕಲೆಗಳ ಹಿರಿಮೆ ಗರಿಮೆಗಳನ್ನು ವಿಮರ್ಶಿಸುವ ಸಾಮರ್ಥ್ಯ ಅವಳಿಗಿತ್ತು. ಪಾಶ್ಚಾತ್ಯ ಕಲೆಗೆ ಮಾರುಹೋಗಿದ್ದ ಅನೇಕ ಪ್ರಸಿದ್ಧ ಭಾರತೀಯ ಕಲಾರಾಧಕರಿಗೆ ಭವ್ಯ ಪರಂಪರೆಯ ನಮ್ಮ ಕಲೆಯ ಬೆಲೆಯನ್ನು ಅರಿವಿಗೆ ತಂದ ಕೀರ್ತಿ ನಿವೇದಿತಾಗೆ ಸಲ್ಲುತ್ತದೆ.

### ನಿವೇದಿತಾ ಮತ್ತು ನಾಟಕ ಕಲೆ

ಬಾಲ್ಯದಿಂದಲೇ ಲಲಿತಕಲೆಗಳಲ್ಲಿ ನಿವೇದಿತೆಗೆ ಇದ್ದ ಆಸಕ್ತಿಯನ್ನು ಅವಳ ಸೋದರ ರಿಚ್‌ಮಂಡ್ ನೋಬಲ್‌ನ ಸ್ಮೃತಿಗಳಿಂದ ತಿಳಿಯಬಹುದು: ''ನನ್ನ ಮನೋವಿಕಾಸದಲ್ಲಿ ಮಾರ್ಗರೆಟ್‌ಳ ಪ್ರಭಾವ ಅತ್ಯಮೂಲ್ಯವಾದುದು. ಷೇಕ್ಸ್‌ಪಿಯರ್‌ನ ನಾಟಕದ ಸಂಭಾಷಣೆಗಳನ್ನು ಉಚ್ಚರಿಸುವುದೆಂದರೆ ಅವಳಿಗೆ ಬಹಳ ಆಸಕ್ತಿ. ಮ್ಯಾಕ್‌ಬೆತ್ ನಾಟಕದ ಕೆಲವು ಭಾಗಗಳನ್ನು ತುಂಬಾ ಹೃದಯಸ್ಪರ್ಶಿಯಾಗಿ ಆಕೆ ಉಚ್ಚರಿಸುತ್ತಿದ್ದಳು. ತನ್ನ ಅತ್ಯಲ್ಪ ನಿಧಿಯಿಂದಲೇ ನನಗೆ ಹಣಕೊಟ್ಟು ಉತ್ತಮ ನಾಟಕಗಳನ್ನು ನೋಡಲು ಕಳಿಸುತ್ತಿದ್ದಳು. ಆದರೆ ಮಾರ್ಗರೆಟ್‌ಳಂತೆ ಅತ್ಯಂತ ಶಕ್ತಿಯುತವಾಗಿ ಷೇಕ್ಸ್‌ಪಿಯರ್ ನಾಟಕದ ಸಂಭಾಷಣೆಗಳನ್ನು ಉಚ್ಚರಿಸಲು ಬೇರೆ ಯಾವ ಕಲಾವಿದರಿಗೂ ಸಾಧ್ಯವಾಗುತ್ತಿರಲಿಲ್ಲ.''

### ನಿವೇದಿತಾ ಮತ್ತು ಸಂಗೀತ

ಒಮ್ಮೆ ಲಂಡನ್ನಿನಲ್ಲಿ ಲೇಡಿ ಮಾಗ್ಸನ್‌ಳ ಆಹ್ವಾನದ ಮೇರೆಗೆ ಅವಳ ಗೃಹದಲ್ಲಿ ಸ್ವಾಮಿ ವಿವೇಕಾನಂದರು ನಿರರ್ಗಳವಾಗಿ ಪ್ರವಚನ ನೀಡುತ್ತಾ, ಸಂದರ್ಭೋಚಿತವಾಗಿ ಅನೇಕ ಸಂಸ್ಕೃತ ಶ್ಲೋಕಗಳನ್ನು ತಮ್ಮ ದೇವದುರ್ಲಭ ಕಂಠದಿಂದ ಪಠಿಸುವಾಗ



ಅದರ ಮಧುರ ಧ್ವನಿ ಇಂಗ್ಲೆಂಡಿನ ಚರ್ಚುಗಳಲ್ಲಿ ಪ್ರಚಲಿತವಿರುವ ಗ್ರಿಗೋರಿಯನ್ ಸಂಗೀತದಂತೆಯೇ ಇದ್ದರೂ ಅದಕ್ಕಿಂತ ಒಂದು ವಿಶಿಷ್ಟ ರೀತಿಯಲ್ಲಿ ಭಿನ್ನವಾಗಿತ್ತು ಎನ್ನುತ್ತಾಳೆ ಸೋದರಿ ನಿವೇದಿತಾ. ಇದರಿಂದ ಸಂಗೀತ ಕ್ಷೇತ್ರದಲ್ಲೂ ಅವಳಿಗಿದ್ದ ಅಭಿರುಚಿ ಮತ್ತು ಅರಿವು ವೇದ್ಯವಾಗುವುದು.

### ನಿವೇದಿತಾ ಮತ್ತು ಭಾರತೀಯ ಶಿಲ್ಪಕಲೆ ಮತ್ತು ಚಿತ್ರಕಲೆ

ನಿವೇದಿತೆಯ ಅಭಿಪ್ರಾಯದಲ್ಲಿ 'ಚಿತ್ರ' ಎಂದರೆ ಒಬ್ಬ ಸಾಧಾರಣ ಮಾನವನೂ ಪ್ರೀತಿಸುವ ವಸ್ತು. ಭಾರತದಲ್ಲಿ ಒಂದು ವಿಗ್ರಹ,



ಒಂದು ಅಲಂಕೃತ ಲಾಂಛನ, ಕಡೆಯ ಪಕ್ಷ ಒಂದು ಮಣ್ಣಿನ ಮಡಿಕೆ ಇದ್ದರೂ ಅದರಲ್ಲಿರುವ ಕಲೆಯನ್ನೂ, ಕೌಶಲ್ಯವನ್ನೂ ನೋಡುವ ಕಂಗಳು ಸುಸಂಸ್ಕೃತ ಮಾನವನಿಗೆ ಸಹಜವಾಗಿಯೇ ಇದೆ. ಪ್ರಾಚೀನ ಕಾಲದಿಂದಲೂ ಬಂದಿರುವ ವಿಗ್ರಹಾರಾಧನೆ ಮಾನವನನ್ನು ಕಂಗಳ ಮೂಲಕ ಹೃದಯಕ್ಕೆ ಪಯಣಿಸಲು ದಾರಿಯನ್ನು ಸುಗಮಗೊಳಿಸುತ್ತದೆ. ಇದಕ್ಕೆ ಭಾಷೆಯ ಅಡಚಣೆ ಇಲ್ಲ. ಅಕ್ಷರಸ್ಥನಾಗಿಯೇ ಇರಬೇಕೆಂದೂ ಇಲ್ಲ. ಕಲೆಯ ಭಾಷೆ ಸಾರ್ವತ್ರಿಕ, ಇಂತಹ ಕಲೆಯ ಬೆಳವಣಿಗೆಯಿಂದ ನಾಡಿನ ಏಳ್ಗೆಯೂ ಸಾಧ್ಯ. ಹೇಗೆಂದರೆ ಒಂದು ನಾಡಿನ ಸಂಸ್ಕೃತಿಯ ಪ್ರತಿಬಿಂಬವೇ ಕಲೆ. ಅದು ಚಿತ್ರಗಳ ಮೂಲಕ, ಕಾವ್ಯ, ಶಿಲ್ಪಗಳ ಮೂಲಕ ಅಭಿವ್ಯಕ್ತಗೊಳ್ಳುತ್ತದೆ. ಇದಕ್ಕೆ ಸಾಕ್ಷಿ ಇಂದಿಗೂ ಕಂಗೊಳಿಸುತ್ತಿರುವ ಅಜಂತಾ, ಎಲ್ಲೋರಾ, ಎಲಿಫೆಂಟಾ, ಸಾಂಚಿ, ಅಮರಾವತಿಗಳ ಶಿಲ್ಪ ಮತ್ತು ಚಿತ್ರಕಲೆಗಳು. ಈ ಗಾಂಧಾರ ಕಲೆಗಳು ಶತಮಾನಗಳಿಂದ ವೀಕ್ಷಕರಿಗೆ ಕಲಾರಸಿಕರಿಗೆ ಆನಂದವನ್ನುಂಟುಮಾಡುತ್ತಿದೆ. ಮಹಮ್ಮದೀಯರ ಶಿಲ್ಪಕಲಾ ಚಾತುರ್ಯಗಳಲ್ಲಿ ರೂಪದ ಬದಲಾವಣೆಯಾಗಿದ್ದರೂ ಅದು ಭಾರತೀಯರ ಕಲಾನಿರ್ಮಾಣವನ್ನು ಅಡಗಿಸುವಷ್ಟು ಸಮರ್ಥವಾಗಿರಲಿಲ್ಲ. ಅವೆಲ್ಲವೂ ಭವ್ಯ ಶಿಲ್ಪಗಳ ಅದ್ಭುತ ನಿರ್ಮಾಣಗಳಾಗಿದ್ದು ಕೋಟ್ಯಂತರ ಜನರನ್ನು ತನ್ನೆಡೆಗೆ ಆಕರ್ಷಿಸುತ್ತವೆ.

ಭಾರತೀಯ ಕಲೆ ಸುಂದರವಾಗಿ ಬೆಳೆಯಬೇಕಾದರೆ ಈ ದಿವ್ಯ ಪರಂಪರೆಯ ಮೂಲದ ಪೂರ್ಣ ಅರಿವಿನಿಂದ ಮಾತ್ರ ಸಾಧ್ಯ. ಇಂತಹ ಪರಂಪರೆ ಇಲ್ಲದವನಿಗೆ ಉತ್ತಮ ಭವಿಷ್ಯವೂ ಸಾಧ್ಯವಾಗದು. ಭಾರತೀಯ ಚಿತ್ರಕಲೆ ಪೂರ್ಣವಾಗಿ ಭಾರತೀಯವಾಗಿದ್ದು, ಅದು ಸುಲಭಗ್ರಾಹ್ಯವಾಗಿದ್ದು, ಭಾರತೀಯರ ಹೃದಯವನ್ನು ಮುಟ್ಟುವಂತಿದ್ದರೆ ಮಾತ್ರ ಅದು ಮಹಿಮಾನ್ವಿತ ಕಲೆ ಎನಿಸಿಕೊಳ್ಳುವುದು. ಅದು ಸೌಂದರ್ಯದ ಭಾಷೆಯಿಂದಲೇ ಅಭಿವ್ಯಕ್ತಗೊಳ್ಳುವಂತಿರಬೇಕು. ಇಂತಹ ಅತ್ಯಂತ ಸುಂದರವಾದ ಕಲೆ ಭಾರತದಲ್ಲಿ ಮಾತ್ರವಲ್ಲ ಹೊರದೇಶದ ಪರಿಣಿತ ಕಲಾಪ್ರೇಮಿಗಳ ಮೆಚ್ಚುಗೆಯನ್ನೂ ಗಳಿಸುತ್ತದೆ. ಭಾರತೀಯ ಕಲಾಶೈಲಿಯನ್ನು ವಿದೇಶದವರಿಗೆ ಅನುಕರಿಸಲು ಸಾಧ್ಯವಾಗದೆ ಇದ್ದರೂ ಅವುಗಳ ಸೌಂದರ್ಯವನ್ನು ಆಸ್ವಾದಿಸುವ ಸಾಮರ್ಥ್ಯ ಖಂಡಿತವಾಗಿಯೂ ಇರುತ್ತದೆ.

ಹೀಗೆ ಆಧ್ಯಾತ್ಮಿಕ ಸಂದೇಶವನ್ನು ಹೊತ್ತ ಕಲೆ ಅಮರವಾಗಿ ಉಳಿಯುತ್ತದೆ. ನಮ್ಮ ಭಾರತದೇಶದಲ್ಲಿ, ಭಾರತೀಯರಲ್ಲಿ ಧರ್ಮ ಮತ್ತು ಅಧ್ಯಾತ್ಮ ರಕ್ತದಲ್ಲೇ ಬಂದಿರುವುದರಿಂದ ಇವು ಸಹಜ ವಾಗಿಯೂ ಸುಂದರವಾಗಿಯೂ ಮೂಡಿಬರುತ್ತದೆ. ಕೇವಲ ಇಬ್ಬರು ಕಲೆಯ ವಿದ್ಯಾರ್ಥಿಗಳು ಕಲೆಯ ನಿಜವಾದ ಅರ್ಥವನ್ನು ಗ್ರಹಿಸಿ ಪ್ರಾರಂಭಿಸಿದರೆ ಇಡೀ ಭಾರತದ ಕಲಾಪ್ರಪಂಚವನ್ನು ಬದಲಿಸಿಬಿಡಬಹುದು.

ಕಲೆಯ ಮತ್ತೊಂದು ಮುಖ ದಿನನಿತ್ಯದ ಜೀವನಚರ್ಯೆ ಹಾಗೂ ದೇಶದ ಆಗುಹೋಗುಗಳ ವಿಮರ್ಶೆ. ಜನರಲ್ಲಿ ರಾಷ್ಟ್ರೀಯತೆಯನ್ನು ಜಾಗೃತಗೊಳಿಸಬಲ್ಲ ಶಕ್ತಿ ಕಲೆಯಲ್ಲಿರುತ್ತದೆ.

ಒಂದು ಸುಂದರ ವರ್ಣನಿರ್ಮಿತ ಚಿತ್ರವನ್ನು ನೋಡುತ್ತಲೇ ನಮಗೆ ಸಹಜವಾಗಿಯೇ ಆನಂದವುಂಟಾಗುತ್ತದೆ. ಇದಕ್ಕೆ ಕಲೆಯ ಜ್ಞಾನ ಇರಬೇಕೆಂದೇನೂ ಇಲ್ಲ. ಆದ್ದರಿಂದ ನಿಜವಾದ ಚಿತ್ರ ಕಾಂತಿಯುಕ್ತವಾಗಿರಬೇಕು.

ಚಿತ್ರಕಲೆಯಲ್ಲಿ ನಿವೇದಿತಾಳಿಗೆ ಇದ್ದ ಅರಿವು ಮತ್ತು ಆಸಕ್ತಿಯ ಪರಿಚಯ ಅವಳ ಮತ್ತು ಸ್ವಾಮಿ ವಿವೇಕಾನಂದರ ಪ್ರಥಮ ಭೇಟಿಯ ಬಗ್ಗೆ ಅವಳು ನೀಡಿರುವ ವಿವರಣೆಯಿಂದ ನಮಗಾಗುತ್ತದೆ. ನಿವೇದಿತಾ ಹೇಳುತ್ತಾಳೆ: ''ನಮ್ಮ ಮಧ್ಯದಲ್ಲಿ ಕಾಷಾಯ ವಸ್ತ್ರಧಾರಿಗಳಾಗಿ, ಯಾವುದೋ ಅತಿದೂರದ ಸಂದೇಶವನ್ನು ತಂದಂತೆ ಸ್ವಾಮೀಜಿ ಕುಳಿತಿದ್ದರು. ಮಾತಿನ ಮಧ್ಯೆ 'ಶಿವ, ಶಿವ' ಎಂದು ಉದ್ಗರಿಸುತ್ತಿದ್ದರು. ಧ್ಯಾನಾವಸ್ಥೆಯಲ್ಲಿ ಬಹಳ ಕಾಲ ತಲ್ಲೀನರಾದವರ ಮೊಗದಲ್ಲಿ ಕಾಣುವ ಸೌಮ್ಯತೆ, ಭವ್ಯತೆ ಮತ್ತು ಪ್ರಶಾಂತಿ ರ್‍ಯಾಫೆಲ್ ಚಿತ್ರಿಸಿರುವ ಬಾಲ ಏಸುವಿನ ಹುಬ್ಬುಗಳ ಮೇಲೆ ಕಾಣುವ ಪ್ರಶಾಂತತೆಯನ್ನು ಹೋಲುತ್ತಿತ್ತು.''

ಇನ್ನು ಭಾರತೀಯ ಕಲಾವಿದರ ಚಿತ್ರಗಳ ಕಲಾವಿಶೇಷಗಳನ್ನು ಮೆಚ್ಚಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವುದರೊಡನೆಯೇ, ಕಲಾ ವಿಮರ್ಶೆ ಹಾಗೂ ಕಲೆಗಳ ಗುಣವಿವೇಚನೆಯನ್ನು ಸೋದರಿ ನಿವೇದಿತಾ ನಡೆಸುವ ಪರಿಯನ್ನು ಸ್ಮರಿಸೋಣ.

### ನಿವೇದಿತಾ ಮತ್ತು ಇ.ಬಿ.ಹ್ಯಾವೆಲ್

ಭಾರತೀಯ ಕಲೆಯ ಬಗ್ಗೆ ಬರೆದಿರುವ ''Indian Sculpture and Painting''ಎಂಬ ಪುಸ್ತಕದ ಲೇಖಕ ಇ.ಬಿ. ಹ್ಯಾವೆಲ್ ಕಲ್ಕತ್ತಾ ಕಲಾಶಾಲೆಯ ಪ್ರಿನ್ಸಿಪಾಲರೂ ಹಾಗೂ ಪ್ರಖ್ಯಾತ ಕಲಾ ವಿಮರ್ಶಕರೂ ಆಗಿದ್ದರು. ಇವರನ್ನು ೧೯೦೨ರಲ್ಲಿ ನಿವೇದಿತಾ ಸಂಧಿಸಿದಳು. ಭಾರತದ ಬಗ್ಗೆ ಭಾರತೀಯ ಕಲೆಗಳ ಬಗ್ಗೆ ಅವರಿಬ್ಬರ ಅಭಿಪ್ರಾಯಗಳು ಒಂದೇ ಆಗಿದ್ದುದ್ದರಿಂದ ಅವರ ಸ್ನೇಹ ಮುಂದುವರಿಯಿತು. ಹ್ಯಾವೆಲ್ಲರು ಭಾರತೀಯ ಕಲೆಗಳ ಗೂಢಾರ್ಥಗಳನ್ನು ತಿಳಿಯಲು ನಿವೇದಿತಾಳೊಡನೆ ದೀರ್ಘ ಚರ್ಚೆ ನಡೆಸುತ್ತಿದ್ದರು. ಈ ಸೋದರಿಯ ಸ್ಫೂರ್ತಿಯ ಫಲವೇ ಅವರ ಮೇಲ್ಕಂಡ ಉತ್ತಮ ಕೃತಿ. ಭಾರತೀಯ ಕಲೆಯಲ್ಲಿ ಹ್ಯಾವೆಲ್ಲರು ಕಲೆಯ ಭೂತ, ವರ್ತಮಾನ, ಭವಿಷ್ಯವನ್ನು ಒಂದೇ ಎಂದು ಕಾಣುತ್ತಾರೆ. ಭಾರತದಲ್ಲಿ ಈಗಲೂ ಸಾಂಪ್ರದಾಯಿಕ ಹಾಗೂ ರಾಷ್ಟ್ರೀಯ ಕಲೆ ಸಾಮಾಜಿಕ ಹಾಗೂ ಧಾರ್ಮಿಕ ಜೀವನದೊಡನೆ ಬಿಗಿಯಾಗಿ ಕಟ್ಟಲ್ಪಟ್ಟಿದೆ. ಭಾರತದ ಪ್ರಾಚೀನ ಕಲೆಗಳ ಐತಿಹಾಸಿಕ ಏಳ್ಗೆಯನ್ನು ವಿವರಿಸುತ್ತಾ ''ಯಾವ ಸಾಮಾಜಿಕ ಹಾಗೂ ಮಾನಸಿಕ ಹಿನ್ನೆಲೆಯಲ್ಲಿ ಕಟ್ಟಲ್ಪಟ್ಟ ಕೋಟೆಗಳು, ಗೋರಿಗಳು, ಅರಮನೆಗಳು, ದೇವಾಲಯಗಳು ಇಂದಿಗೂ ಕಂಗೊಳಿಸುತ್ತಿವೆಯೋ ಅದೇ ಜನಾಂಗದ ಶಿಲ್ಪಿಗಳು, ಚಿತ್ರಕಾರರು ಈಗಲೂ ಮತ್ತು ಮುಂದೆಯೂ ಇದಕ್ಕಿಂತ ಉತ್ತಮ ಕೃತಿಗಳನ್ನು ರಚಿಸಲು ಸಮರ್ಥರಾಗಿದ್ದಾರೆ, ಇವರಲ್ಲಿ ಉಜ್ವಲ ಭವಿಷ್ಯದ ಭರವಸೆಯನ್ನು ಕಾಣಬಹುದಾಗಿದೆ'' ಎನ್ನುತ್ತಾರೆ ಪ್ರೊಫೆಸರ್ ಹ್ಯಾವೆಲ್.

''ಭಾರತದ ಕಲಾಪ್ರಪಂಚದ ಆಳವಾದ ಅಭಿಪ್ರಾಯಗಳು ಜನಸಾಮಾನ್ಯರ ಕಂಗಳಿಗೆ ಅಗೋಚರ. ಇವರ ಆಧ್ಯಾತ್ಮಿಕ ಹಂಬಲ, ನೇರವಾಗಿ ಹೃದಯದಿಂದ ಹೊರಬರುವ ಸಂಕಲ್ಪ ಇವುಗಳು ಇವರ ಕಾವ್ಯ, ಸಂಗೀತ, ಚಿತ್ರ, ಶಿಲ್ಪಕಲೆಗಳಲ್ಲಿ ಸುಂದರವಾಗಿ ಮೂಡಿಬರುತ್ತವೆ. ಇದಕ್ಕೆ ಯಾರ ಅನುಮತಿಯಾಗಲಿ, ಅನುಕಂಪವಾಗಲಿ ಬೇಡ. ಆದ್ದರಿಂದ ಭಾರತೀಯ ಕಲೆಯ ಸಮಗ್ರ ಪರಿಚಯವಾಗಬೇಕಾದರೆ ಭಾರತೀಯರ ಆದರ್ಶಗಳ ಅರಿವು ಪ್ರಮುಖವಾಗಿ ಆಗಬೇಕಾಗಿದೆ.'' – ಇದು ಹ್ಯಾವೆಲ್‌ರ ಅನಿಸಿಕೆ. ಮಾತ್ರವಲ್ಲ ಭಾರತೀಯ ಕಲೆ ಗ್ರೀಕ್ ಸಂಸ್ಕೃತಿಯಿಂದ ಪ್ರಭಾವಿತವಾಗಿದೆ ಎಂಬ ಸಿದ್ಧಾಂತವನ್ನು ಅವರು ಖಂಡಿಸುತ್ತಾರೆ.

''ಭಾರತದ ಶಿಲ್ಪಶಾಸ್ತ್ರ ಸಂಪೂರ್ಣವಾಗಿ ತನ್ನದೇ ಆದ ಆದರ್ಶವನ್ನು ಹೊಂದಿದೆ. ಇಲ್ಲಿ ಒಂದು ಶಿಲ್ಪವನ್ನು ನಿರ್ಮಿಸುವಾಗ ಶಿಲ್ಪಿಯಾದವನು ಅದು ಸೊಗಸಾಗಿಯೂ, ನಾಜೂಕಾಗಿಯೂ, ಸೂಕ್ಷ್ಮ ವಿವರಣೆಗಳನ್ನೊಳಗೊಂಡಿರುವಂತೆಯೂ ಮಾಡಲು ಅಪೇಕ್ಷಿಸುತ್ತಾನೆ. ಕೇವಲ ಬಾಹ್ಯ ಸೌಂದರ್ಯಕ್ಕೆ ಬೆಲೆ ಕೊಡದ ಭಾರತದ ಶಿಲ್ಪಿ, ತನ್ನ ಶಿಲ್ಪ ಆಂತರಿಕ ಸೌಂದರ್ಯವನ್ನು ಹೊಂದಿದ್ದು, ಆಧ್ಯಾತ್ಮಿಕ ಮೌಲ್ಯವನ್ನು ಹೊಂದಿರಬೇಕು ಎಂಬ ಉನ್ನತ ಧ್ಯೇಯದೊಡನೆ ಕಲೆಯ ಆರಾಧನೆ ಮಾಡುತ್ತಾನೆ.'' ಇದು ಹ್ಯಾವೆಲ್‌ರ ಕಲಾ ವಿಮರ್ಶೆ.

ಭಾರತದ ಕಲಾಸಂಸ್ಕೃತಿ ಮತ್ತು ಸೌಂದರ್ಯ ಪಾಶ್ಚತ್ಯ ದೇಶಗಳಲ್ಲಿ ಬೀರಿದ ಪ್ರಭಾವವನ್ನು ಸೋದರಿ ನಿವೇದಿತಾ ವಿವರಿಸುತ್ತಾ, ''೬ನೆಯ ಶತಮಾನದ ಮಧ್ಯಭಾಗದಲ್ಲಿ ಭಾರತದೇಶ ದಕ್ಷಿಣ ಏಶಿಯಾದ ಅನೇಕ ದೇಶಗಳಿಗೆ ತನ್ನ ಚಿತ್ರಕಾರರನ್ನೂ, ಶಿಲ್ಪಿಗಳನ್ನೂ ಕಳಿಸಿ ಶ್ರೀಲಂಕಾ, ಸಯಾಮ್, ಕ್ಯಾಂಬೋಡಿಯಾ, ಚೀನಾ, ಕೊರಿಯಾ, ಜಪಾನ್ ದೇಶಗಳಲ್ಲಿ ತನ್ನ ಪ್ರಭಾವವನ್ನು ಬೀರಿತು. ಹೀಗೆ ಭಾರತದ ಕಲಾ ವೈಭವದ ಪ್ರಸಾರ ಬೇರೆ ದೇಶಗಳಿಗೆ ಪ್ರಭಾವ ಬೀರಿತೇ ಹೊರತು ಹೊರದೇಶದ ಕಲಾವಿದರ ಪ್ರಭಾವದ ಅಗತ್ಯ ನಮಗಿರಲಿಲ್ಲ. ಏಕೆಂದರೆ ಭಾರತ ದೇಶದ ಸಂಸ್ಕೃತಿ, ಸಾಹಿತ್ಯ, ಸಂಗೀತ, ಚಿತ್ರಕಲೆ, ಶಿಲ್ಪಕಲೆಯ ಕಾವು ಆಗಲೇ ಉತ್ತುಂಗದಲ್ಲಿತ್ತು. ಉಳಿದೆಡೆ ಇವು ಇನ್ನೂ ಶೈಶವಾವಸ್ಥೆಯಲ್ಲಿದ್ದವು'' ಎನ್ನುತ್ತಾಳೆ.

ಜೈಪುರದ ವಸ್ತುಸಂಗ್ರಹಾಲಯದಲ್ಲಿ ಯುಧಿಷ್ಠಿರ-ಕೌರವರ ಜೂಜಾಟದ ಪ್ರಸಂಗದ ಒಂದು ಅದ್ಭುತವಾದ, ಕಡುಕೆಂಪು ಬಣ್ಣ ಹಾಗೂ ಬಂಗಾರದ ಬಣ್ಣದ ಪ್ರಕಾಶಮಯವಾದ ಒಂದು ಚಿತ್ರ ಕಲೆಯನ್ನು ಕಂಡು, ''ಯಥಾದೃಷ್ಟರೂಪಣದ ಪರಿಚಯವಿಲ್ಲದ ಯಾವ ಆಧುನಿಕ ಕಲೆಗಾರನಿಂದಲೂ ಇದು ಸಾಧ್ಯವಿಲ್ಲ, ರೋಮನ್ ಕ್ಯಾಥೋಲಿಕ್ ಚರ್ಚಿನ ಚಿತ್ರಕಾರರಿಂದಲೂ ಇಂತಹ ಶೋಭೆ ಯುಳ್ಳ, ಇಷ್ಟು ನಿಗದಿತ ಸ್ಥಳದಲ್ಲಿ, ತಮ್ಮ ಚಿತ್ರವನ್ನು ರೂಪಿಸಲು ಸಾಧ್ಯವಿಲ್ಲ. ಭಾರತದಲ್ಲಿ ಇಂತಹ ರಾಷ್ಟ್ರೀಯ ಸಂಪ್ರದಾಯದ ಕಲೆಯಲ್ಲಿ ಯಾವ ಲೋಪವೂ ಇಲ್ಲ'' ಎಂದು ನಮ್ಮ ಚಿತ್ರಕಲಾ ಕೌಶಲವನ್ನು ವರ್ಣಿಸುತ್ತಾಳೆ.

ಕಲ್ಕತ್ತೆಯ ಆರ್ಟ್‌ಗ್ಯಾಲರಿಗೆ ಸೀತಾರಾಮ ಪಟ್ಟಾಭಿಷೇಕದ ಒಂದು ಅದ್ಭುತವಾದ ಚಿತ್ರವನ್ನು ಹೊಸದಾಗಿ ಕೊಂಡುಕೊಳ್ಳ ಲಾಗಿತ್ತು. ಚಿತ್ರಕಾರ ತನ್ನ ಹೆಸರನ್ನು ಹಾಕಿಕೊಳ್ಳಲು ಇಚ್ಛಿಸಿರಲಿಲ್ಲ. ಈ ಅಪರಿಚಿತ ವ್ಯಕ್ತಿಯ ಸುಂದರ ಚಿತ್ರದಲ್ಲಿ ಸೀತಾರಾಮನು ಕುಳಿತಿರುವ ಸಿಂಹಾಸನದ ಹಿನ್ನೆಲೆಯಲ್ಲಿ ಅಯೋಧ್ಯೆಯ ಅರಮನೆ ಕಂಗೊಳಿಸುತ್ತಿತ್ತು. ಅರಮನೆಯ ಹಿನ್ನೆಲೆಯಲ್ಲಿ ನದಿ, ದೋಣಿ, ಗದ್ದೆ, ಸೈನ್ಯ ಇವೆಲ್ಲವೂ ನಿಗದಿತ ಸ್ಥಳದಲ್ಲಿ ಚಿತ್ರಿತವಾಗಿತ್ತು. ಇದು ಹಿಂದಿನ ಮಹಾನ್ ಚಿತ್ರಕಾರರ ಪಂಕ್ತಿಗೆ ಸೇರಿಸಬಹುದಾದ ಉತ್ತಮ ಚಿತ್ರ. ಮಧ್ಯಕಾಲೀನ ಹಾಲೆಂಡ್ ಜನರ ಯಾವ ಚಿತ್ರದಲ್ಲೂ ಇಂತಹ ಸೂಕ್ಷ್ಮ ವಿವರಣೆಗಳುಳ್ಳ ಚಿತ್ರ ಸಿಗಲಾರದು. ಈ ಸೀತಾ ರಾಮರ ಚಿತ್ರದಲ್ಲಿ ಬಿಳಿಯ ಅಮೃತ ಶಿಲೆಯಿಂದ ಕಟ್ಟಲ್ಪಟ್ಟ ಕಟ್ಟಡ ಗಳು ಚಿತ್ರಿತವಾಗಿದೆ. ಭೂತಗನ್ನಡಿ ಹಿಡಿದು ನೋಡಿದರೆ ಹಸುಗಳು ಮೇಯುತ್ತಿರುವುದು, ಜೀನು ಧರಿಸಿ ನಿಂತಿರುವ ಕುದುರೆಗಳು, ಅಲಂಕೃತ ಆನೆ ಒಂಟೆಗಳು, ಧ್ವಜಗಳು, ಅರಮನೆಯ ಸುಂದರ ಅಂಗಳ ಹೀಗೆ ಸಣ್ಣಪುಟ್ಟ ವಿವರಗಳನ್ನು ಹೊಂದಿರುವ, ಕನಸಿನಲ್ಲಿ ಕಾಣುವ ಲೋಕದ ನಗರಿಯಂತಿರುವ ಸುಂದರ ಚಿತ್ರವನ್ನು ನಿವೇ ದಿತಾ ವರ್ಣಿಸುವ ಪರಿ ಅದ್ಭುತ!

ಕಲ್ಕತ್ತೆಯ ಸರ್ಕಾರಿ ಶಾಲೆಯಲ್ಲಿ ನಡೆದ ಒಂದು ವಸ್ತು ಪ್ರದ ರ್ಶನದಲ್ಲಿ ಪ್ರಾಚೀನ ಹಾಗೂ ಆಧುನಿಕ ಕಲಾವಸ್ತುಗಳ ಪ್ರದರ್ಶನ ವನ್ನು ವೀಕ್ಷಿಸಿದ ನಿವೇದಿತಾ ಅಲ್ಲಿನ ಅತ್ಯುತ್ತಮ ವರ್ಣಚಿತ್ರಗಳನ್ನು ತನ್ನ ಬರಹಗಳಲ್ಲಿ ಅತಿ ಸುಂದರವಾಗಿ ವರ್ಣಿಸುತ್ತಾಳೆ: ''ಭಾರ ತೀಯ ಚಿತ್ರಕಾರರ ಚಿತ್ರಗಳು ಧಾರ್ಮಿಕ ವಿಚಾರಗಳನ್ನು ಒಳ ಗೊಂಡಿರುತ್ತವೆ. ಇವುಗಳಲ್ಲಿರುವ ಅತ್ಯುನ್ನತ ಪರಿಕಲ್ಪನೆಗಳಿಗೆ ಯೂರೋಪಿನ ಬೇರೆ ಯಾವುದೇ ಚಿತ್ರಗಳು ಸರಿದೂಗಲಾರವು. ಆ ಪ್ರದರ್ಶನದಲ್ಲಿದ್ದ ಒಂದು ಚಿತ್ರ 'ಕೃಷ್ಣ-ಬಲರಾಮರ ಮಥುರಾ ಪ್ರವೇಶ.' ಇವರಿಬ್ಬರ ವೇಷಭೂಷಣಗಳು ಗೊಲ್ಲ ಬಾಲಕರಂತೆಯೇ ಇದೆ. ಚಿತ್ರದ ನಸುಬಣ್ಣ ಅತ್ಯಂತ ಕೋಮಲವಾಗಿದೆ. ರಜಪೂತರ ಅಥವಾ ಮೊಗಲರ ನಗರಕ್ಕೆ ಹೋಲುವ ಗೋಡೆಗಳು ಮತ್ತು ಮಹಾ ದ್ವಾರಗಳು ಬಾಲಕರಿಬ್ಬರೂ ಸರಳವಾದ ಆದರೆ ಆಹ್ಲಾದಕರವಾದ ಪೋಷಾಕುಗಳನ್ನು ಧರಿಸಿ ನಿಂತಿದ್ದಾರೆ. ಹಳ್ಳಿಗಾಡಿನವರಂತೆ ಕೆದರಿದ ಕೇಶ, ಚಿತ್ರಪಟದ ಮುಂಭಾಗದಲ್ಲಿ ಗೋವುಗಳ ಹಿಂಡು, ಚಿತ್ರದ ಸಂಪೂರ್ಣ ಕಲ್ಪನೆ ಎಷ್ಟೊಂದು ಸುಂದರವಾಗಿತ್ತೋ ಹಾಗೆಯೇ ಮರೆಯಲಸಾಧ್ಯವಾದ ವಿಲಕ್ಷಣತೆಯಿಂದಲೂ ಕೂಡಿತ್ತು.''

ಅವುಗಳಲ್ಲದೆ ನಿವೇದಿತೆಯನ್ನು ಆಕರ್ಷಿಸಿದ ಹತ್ತು ಹಲವು ಚಿತ್ರಗಳಲ್ಲಿ - ಪಾರ್ವತಿಯ ತಪಸ್ಸಿನ ಚಿತ್ರದಲ್ಲಿ ಹಿಮಾಲಯ ಪರ್ವತಗಳ ಹಿನ್ನೆಲೆ, ಕೈಲಾಸ ಶಿಖರ, ಪರಮಶಿವ ಬ್ರಹ್ಮಚಾರಿಯ ವೇಷದಲ್ಲಿ ಬಂದು ಪಾರ್ವತಿಯನ್ನು ಪರೀಕ್ಷಿಸುತ್ತಿರುವುದು ಮುಂತಾದವು. ಪ್ರಾಚೀನ ಕಲೆಯಿಂದ ಪ್ರೇರಿತರಾದ ಆಧುನಿಕ ಯುವ ಕಲಾವಿದರ ಅನೇಕ ವರ್ಣಚಿತ್ರಗಳಲ್ಲಿ ವೀಣೆಯನ್ನು ನುಡಿಸುತ್ತಿರುವ ಮಹಾಶ್ವೇತೆ, ಮರದಡಿಯಲ್ಲಿ ಸಂಧ್ಯಾದೀಪವನ್ನು ಹಚ್ಚುತ್ತಿರುವ ಲಲಿತಾಂಗಿ, ಪ್ರಿಯನಾಥ ಸಿನ್ಹಾರವರ ಶ್ರೀಕೃಷ್ಣ ಚೈತನ್ಯ, ದಿವಂಗತ ಸುರೇಂದ್ರ ನಾಥ ಗಂಗೂಲಿಯವರ ಬಂಗಾಳದ ರಾಜ ಲಕ್ಷ್ಮಣಸೇನನ ಪಲಾಯನ, ನಹುಷ ಮಹಾರಾಜನ ರಥ, ವಿಕ್ರಮನ ಸಿಂಹಾಸನ ಇವೆಲ್ಲವೂ ರಾಷ್ಟ್ರೀಯ ಕಲೆಗಳಾಗಿ ಬೆಳಗುತ್ತಿವೆ ಎಂದು ನಿವೇದಿತಾ ಅಭಿಪ್ರಾಯಪಡುತ್ತಾಳೆ.

### ಕಲೆಗಳ ಗುಣ ವಿವೇಚನೆ

**೧. ಅವನೀಂದ್ರನಾಥ ಠಾಕೂರ್:** ರಾಷ್ಟ್ರಕವಿ ರವೀಂದ್ರನಾಥ ಠಾಕೂರರ ಸೋದರ ಅವನೀಂದ್ರನಾಥ ಠಾಕೂರರು ಆಗ ಕಲ್ಕತ್ತೆಯ ಕಲಾಶಾಲೆಯ ಉಪ ಮುಖ್ಯೋಪಾಧ್ಯಾಯರಾಗಿದ್ದರು. ಪ್ರಖ್ಯಾತ ಚಿತ್ರಕಲಾವಿದರಾದ ಇವರ ಪ್ರಮುಖ ಚಿತ್ರಗಳಲ್ಲಿ 'ಭಾರತಮಾತಾ' ಒಂದು. ಇದು ಭಾರತೀಯ ಚಿತ್ರಕಲೆಗೆ ಆಧುನಿಕ ಯುಗದ ಹೊಸ ವಿಚಾರದೊಡನೆ ಪ್ರಾಚೀನ ಕಲೆಯ ಕಲ್ಪನೆಯನ್ನೇ ಭಾರತೀಯ ರೂಪದಲ್ಲೇ ಚಿತ್ರಿಸಿರುವ ಹೆಗ್ಗಳಿಕೆಯುಳ್ಳದ್ದು. ಭಾರತಮಾತೆ ತನ್ನ ನಾಲ್ಕು ಕೈಗಳಲ್ಲಿ ಶಿಕ್ಷಣ, ಶ್ರದ್ಧೆ, ಅನ್ನ ವಸ್ತ್ರ ಇವನ್ನು ಹಿಡಿದುಕೊಂಡು ದೈವೀ ಶಕ್ತಿಗಳಿಂದ ಕೂಡಿ, ಭಾರತದ ಮಕ್ಕಳಿಗೆ ಇವೆಲ್ಲವನ್ನೂ ಅನುಗ್ರಹಿಸುವ ಕರುಣಾಮೂರ್ತಿಯಾಗಿ ಶೋಭಿಸುತ್ತಿದ್ದಾಳೆ. ಅವ ಳೆದುರು ಇಬ್ಬನಿ ತುಂಬಿದ ಕಮಲಪುಷ್ಪಗಳು, ಪಾದ ಹಾಗೂ ಶಿರೋ ಭಾಗದಲ್ಲಿ ಗೋಚರಿಸುವ ಪ್ರಭಾವಳಿ ಇವೆಲ್ಲವೂ ಅವಳನ್ನು ದೈವಿಕ ವೆಂದು ಸಾರುತ್ತಿವೆ. ಇದರೊಡನೆಯೇ ಶಂಖದಿಂದ ತಯಾರಿಸಿದ ಅವಳ ಕೈಬಳೆಗಳು, ಸರಳವಾದ ಮೇಲ್ಮುಸುಕು, ಬರಿಗಾಲುಗಳು, ಪ್ರಾಮಾಣಿಕ ಮುಖಭಾವ, ಇವು ಆಕೆಯನ್ನು ನಮ್ಮ ಅತ್ಯಂತ ಸಮೀಪಕ್ಕೆ ಕರೆತರುವುದು - ಇದು ನಿವೇದಿತಾ ನೀಡುವ ವರ್ಣನೆ.

ಇವಲ್ಲದೆ ರಾವಣನ ಸೆರೆಯಲ್ಲಿರುವ ಸೀತೆ, ಶಹಜಹಾನ್ ಕಂಡ ಕನಸು - ತಾಜ್‌ಮಹಲ್ ಮುಂತಾದವು ಅವನೀಂದ್ರರ ಕುಂಚ ದಿಂದ ಮೂಡಿದ ಚಿತ್ರರತ್ನಗಳು.

ಭಾರತೀಯ ಕಲೆಯನ್ನು ಕೊಂಡಾಡುತ್ತಾ, ಭಾರತವನ್ನು ಮತ್ತೂ ವಿಶೇಷವಾಗಿ ಕೊಂಡಾಡುತ್ತ ಆರಾಧಿಸಿದಳು ಸೋದರಿ ನಿವೇದಿತಾ. ಗುರು ವಿವೇಕಾನಂದರ ವಿಶೇಷ ಕೃಪೆಗೆ ಪಾತ್ರಳಾಗಿ ಸಾಧನೆಯ ಪಥದಲ್ಲಿ ಬಹಳ ಮುಂದೆ ಸಾಗಿ ಅದ್ಭುತ ಪ್ರಭೆಯಿಂದ ಬೆಳಗುತ್ತಿದ್ದ ಈ ಕಲಾವಿಮರ್ಶಕಳ ಪ್ರಭಾವದಿಂದ ಕೇವಲ ಪಾಶ್ಚಾತ್ಯ ಕಲೆಗೆ ಮನಸೋತಿದ್ದ ಅವನೀಂದ್ರರು ಭಾರತೀಯ ಕಲೆಯ

ಸೌಂದರ್ಯ, ಅಂತರಾರ್ಥ, ಹಿರಿಮೆ ಗರಿಮೆಗಳನ್ನು ಅರಿತು ಎಚ್ಚತ್ತರು. ಮುಂದೆ ತಮ್ಮ ಆತ್ಮಕಥೆಯನ್ನು ಬರೆದ ಅವನೀಂದ್ರ ನಾಥರು ಹೀಗೆ ಹೇಳುತ್ತಾರೆ: ''ನಾನು ಪ್ರಥಮ ಬಾರಿ ನಿವೇದಿತಾ ಳನ್ನು ಭೇಟಿಯಾದಾಗ ಅವಳು ಕುತ್ತಿಗೆಯಿಂದ ಪಾದದವರೆಗೆ ಬರು ವಂತಹ ಶುಭ್ರ ಶ್ವೇತ ವರ್ಣದ ಉಡುಗೆಯನ್ನು ಧರಿಸಿದ್ದಳು. ಕೊರ ಳಲ್ಲಿ ಒಂದು ರುದ್ರಾಕ್ಷಿಮಾಲೆಯಿತ್ತು. ಅವಳು ಬಿಳಿಯ ಅಮೃತಶಿಲೆ ಯಿಂದ ಕಡೆದ ತಪಸ್ವಿನಿಯ ಮೂರ್ತಿಯಂತಿದ್ದಳು. ಕಂದು ಬಣ್ಣದ ತಲೆಗೂದಲನ್ನು ಎತ್ತಿಕಟ್ಟಿದ್ದಳು. ಅವಳು ಬಂದು ನಿಂತಾಗ ತಾರಾಗಣದ ಮಧ್ಯೆ ಚಂದ್ರನು ಉದಯಿಸಿದಂತಾಯಿತು. ಅಲ್ಲಿ ನೆರೆದಿದ್ದ ಸುಂದರ ಮಹಿಳೆಯರೆಲ್ಲರೂ ಗಣನೆಗೆ ಬಾರದಂತಾದರು. ನನ್ನ ದೃಷ್ಟಿಯಲ್ಲಿ ಅವಳು ಆದರ್ಶ ಸುಂದರಿ 'ಕಾದಂಬರಿ'ಯಲ್ಲಿ ಬರುವ ಮಹಾಶ್ವೇತೆಯೇ ಇವಳಾಗಿದ್ದಳು. ಈ ಸೌಂದರ್ಯ ಕೇವಲ ಬಾಹ್ಯ ಸೌಂದರ್ಯವಲ್ಲ, ಅವಳ ಆಂತರಿಕ ಸೌಂದರ್ಯ ಅವಳಿಗೆ ದಿವ್ಯಶೋಭೆಯನ್ನು ನೀಡಿತ್ತು!''

**೨. ನಂದಲಾಲ್ ಬಸು:** ಅವನೀಂದ್ರನಾಥ ಠಾಕೂರರ ಶಿಷ್ಯ ನಂದ ಲಾಲ್ ಬಸುರವರ ಚಿತ್ರಗಳನ್ನು ನಿವೇದಿತಾ ಅಪಾರವಾಗಿ ಮೆಚ್ಚು ತ್ತಿದ್ದಳು. ರಾಷ್ಟ್ರೀಯ ಕ್ರಾಂತಿಕಾರಿ ಚಳುವಳಿಗಳಿಗೆ ಹೇಗೆ ಚಿತ್ರ ಕಲೆಯೂ ಸಹಾಯಕವಾಗಬಹುದು ಎಂಬುದನ್ನು ಈ ಎಲ್ಲ ವರ್ಣ ಚಿತ್ರಕಾರರ ಅತ್ಯುತ್ತಮ ಚಿತ್ರಗಳಿಂದ ಪ್ರಮಾಣೀಕರಿಸಿದ್ದಾಳೆ ಈ ನಮ್ಮ ಸೋದರಿ.

ಉದಾಹರಣೆಗೆ 'ಸತಿ ಸಹಗಮನ'ದ ಅಪೂರ್ವ ಚಿತ್ರ: ''ಮದು ವಣಗಿತ್ತಿಯ ಪೂರ್ಣ ಅಲಂಕಾರದಲ್ಲಿ ನಿಂತಿರುವ ಸತಿಶಿರೋಮಣಿ. ತನ್ನ ವೈಭವಗಳನ್ನೆಲ್ಲಾ ಮರೆತು ತನ್ನ ಬುದ್ಧಿಮನಸ್ಸುಗಳನ್ನೆಲ್ಲಾ ಮುಂಬರುವ ವಿಜಯೋತ್ಸವಕ್ಕೆ ಕೇಂದ್ರೀಕರಿಸಿ ನಿಂತಿದ್ದಾಳೆ. ಭಾರ ತೀಯ ಚಿಂತಕರು ವಿವರಿಸುವಂತೆ ರಜೋಗುಣದ ಒಂದು ಕಣವೂ ಇಲ್ಲದ ಪೂರ್ಣ ಸಾತ್ವಿಕ ತೇಜಸ್ಸುಳ್ಳ ಈಕೆ ಉಜ್ವಲವಾಗಿ ಉರಿಯು ತ್ತಿರುವ ಚಿತಾಗ್ನಿಯ ನಡುವೆ ನಿರ್ಭಯಳಾಗಿ ಕುಳಿತಿದ್ದಾಳೆ. ಅವಳ ಪ್ರಾರ್ಥನೆಯಲ್ಲಿ ದುಃಖದ ಬಿಕ್ಕಳಿಕೆ ಇಲ್ಲ, ಅವಳ ಕಂಗಳಿಗೆ ಕೆಳಗಿನ ಅಗ್ನಿಜ್ವಾಲೆಯಾಗಲೀ, ಪ್ರೀತಿಯ ಬಂಧುಗಳಾಗಲೀ ಯಾವುದೂ ಗೋಚರಿಸುತ್ತಿಲ್ಲ. ಕೇವಲ ಮರಣಿಸಿರುವ ತನ್ನ ಪತಿಯ ಶರೀರ ಮತ್ತು ಅವನನ್ನೇ ಹೋಗಿ ಸೇರುವ ವಿಚಾರವಲ್ಲದೆ ಬೇರೆ ಇಲ್ಲ. ಅವಳ ಮನಸ್ಸು ನಿಶ್ಚಿಂತೆಯಿಂದ ಶಾಂತವಾಗಿ ಇದೆ.'' ಇದು ನಂದಲಾಲರ ಚಿತ್ರಕ್ಕೆ ನಿವೇದಿತಾ ಕೊಡುವ ಉತ್ತಮೋತ್ತಮ ವಿವರಣೆ.

ನಿವೇದಿತಾ ಮೆಚ್ಚಿದ ನಂದಲಾಲ್ ಬೋಸರ ಇನ್ನೊಂದು ಚಿತ್ರ ದಕ್ಷಿಣಭಾರತದ ಪ್ರಸಿದ್ಧ ನಟರಾಜ. ಆಕೆ ಇದನ್ನು ಹೀಗೆ ವಿವರಿಸು ತ್ತಾಳೆ: ''ಸಮಾಧಿಯ ಉನ್ನತಾವಸ್ಥೆಯಲ್ಲಿ ಮತ್ತನಾದ ಪರಶಿವನು ಮಹಾ ಪ್ರಳಯದ ನಾಟ್ಯದಲ್ಲಿ ತೊಡಗಿದ್ದಾನೆ. ಸ್ವರ್ಗಲೋಕದ ಸ್ತಂಭಗಳೂ, ದ್ವಾರಗಳೂ ಕೆಳಗುರುಳುತ್ತಿವೆ. ಪರಶಿವನ ತ್ರಿಶೂಲ ಅಗ್ನಿಜ್ವಾಲೆಯಂತೆ ಬೆಳಗುತ್ತಿವೆ. ಇಡೀ ವಿಶ್ವವೇ ಅಗ್ನಿಯಿಂದ ಆವೃತ ವಾಗಿದೆ. ಅದ್ಭುತ ಚಿತ್ರಕಲೆ!''

ನಂದಲಾಲ್ ಬೋಸರ ಅತ್ಯುತ್ತಮ ಚಿತ್ರ 'ಕೈಕೇಯಿ.' ''ರಾಮನ ಪಟ್ಟಾಭಿಷೇಕ ನಿರ್ಣಯವಾಗಿದೆ. ಕೈಕೇಯಿಗೆ ಯಾವ ತೀರ್ಮಾನ ವನ್ನೂ ತೆಗೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಗೂನಿ ಮಂಥರೆ ಕೈಕೇ ಯಿಯ ಮನಸ್ಸಿನಲ್ಲಿ ಪಾಪಬೀಜವನ್ನು ಬಿತ್ತಿ ಅವಳ ಸಾನ್ನಿಧ್ಯದಿಂದ ತೆರಳುತ್ತಿರುವುದು ಸಾಂಕೇತಿಕವಾಗಿ ಅಭಿವ್ಯಕ್ತಗೊಂಡಿದೆ. ಕೈಕೇಯಿ ಇನ್ನೂ ಕೋಪಗೃಹಕ್ಕೆ ತೆರಳಿಲ್ಲ. ಒಂದೆಡೆ ತನ್ನ ಮಹತ್ವಾಕಾಂಕ್ಷೆ ಯಾದರೆ, ಮತ್ತೊಂದೆಡೆ ರಾಜ ಮನೆತನದ ಘನತೆ ಗೌರವದ ಪ್ರಶ್ನೆ. ಚಿತ್ರದಲ್ಲಿ ಕೈಕೇಯಿಯ ಮುಖದಲ್ಲಿ ಈ ನೋವು, ಈ ದ್ವಂದ್ವ, ಈ ದುಃಖ ಸ್ಪಷ್ಟವಾಗಿದೆ. ತನ್ನ ಪತಿದೇವರ, ಪುತ್ರರ ಸಂತೋಷದ ಬಗ್ಗೆ ಉದಾಸೀನ ಮಾಡಿರುವ ಈಕೆ ಆನಂದದ ಸಮುದ್ರತಟದಿಂದ ದೂರವಾಗಿ, ಸ್ವಾರ್ಥವೆಂಬ ದೋಣಿಯಲ್ಲಿ ಬಹುದೂರ ಸಾಗುತ್ತಾ ಒಂಟಿಯಾಗಿಬಿಟ್ಟಿದ್ದಾಳೆ. ಈಗ ಅವಳ ಸೌಂದರ್ಯ ಕೋಮಲತೆ ಯನ್ನು ಕಳೆದುಕೊಂಡು ಗಡುಸಾಗಿದೆ. ಸಮುದ್ರದ ಅಲೆಗಳಂತೆ ಕೆದರಿ ಮುದುಡಿ ಹೋಗಿರುವ ಅವಳ ಸೀರೆಯ ನೆರಿಗೆಗಳು ವಕ್ರ ವಾಗಿದ್ದು, ಅದು ಮಹಾರಾಣಿಯ ಮಾನಸಿಕ ಆಂದೋಳನವನ್ನು ಸ್ಪಷ್ಟಪಡಿಸುತ್ತಿದೆ. ಕೈಕೇಯಿ ಈಗ ದೈವದ ಕೈಗೊಂಬೆಯಾಗಿದ್ದಾಳೆ.'' ಈ ರೀತಿ ಕಲೆಯನ್ನು ಕಲಾತ್ಮಕವಾಗಿ ವರ್ಣಿಸುವುದು ನಿವೇದಿತಾಳ ಒಂದು ವಿಶಿಷ್ಟ ಕಲೆ.

ನಿವೇದಿತಾ ನಂದಲಾಲ ಬೋಸರ ಮನಸೆಳೆಯುವ ಚಿತ್ರಗಳನ್ನು ಕೇವಲ ಹೊಗಳುವುದು ಮಾತ್ರವಲ್ಲ ಅವುಗಳಲ್ಲಿ ಸಣ್ಣ ಪುಟ್ಟ ನ್ಯೂನತೆಗಳು ಕಂಡುಬಂದರೆ ಅವುಗಳನ್ನು ಕಲಾವಿದನ ಗಮನಕ್ಕೆ ತರುತ್ತಿದ್ದಳು. ಉದಾಹರಣೆಗೆ 'ದಶರಥನ ಮರಣಶಯ್ಯೆ'ಯ ಸುಂದರ ಚಿತ್ರದಲ್ಲಿ ಕೌಸಲ್ಯೆ ದಶರಥನಿಗೆ ಗಾಳಿ ಹಾಕಲು ಇಟ್ಟು ಕೊಂಡಿರುವ ಬೀಸಣಿಗೆ ತಾಳೆಗರಿಯ ಬೀಸಣಿಗೆಯಾಗಿ ಚಿತ್ರಿತ ವಾಗಿದೆ. ಅರಮನೆಯ ಪಟ್ಟದ ರಾಣಿಯ ಕೈಯಲ್ಲಿ ಕಲಾತ್ಮಕವಾದ ದಂತದ ಬೀಸಣಿಗೆಯನ್ನು ಚಿತ್ರಿಸಬೇಕಿತ್ತು ಎಂದು ನಂದಲಾಲರನ್ನು ತಿದ್ದುತ್ತಾಳೆ. ಅದರೊಡನೆಯೇ ಆ ಚಿತ್ರದಲ್ಲಿ ಮೂಡಿ ಬಂದಿರುವ ಪ್ರಶಾಂತವಾದ ವಾತಾವರಣ ಶ್ರೀಮಾತೆಯ ಸಾನ್ನಿಧ್ಯದ ಶಾಂತಿ ಯನ್ನು ಹೋಲುತ್ತಿದೆ ಎಂದು ಹೃದಯ ಬಿಚ್ಚಿ ಹೊಗಳುತ್ತಾಳೆ.

ನಂದಲಾಲ್ ಬೋಸರ 'ಕಾಳಿ' ಚಿತ್ರವನ್ನು ನೋಡಿ, ''ಚಿತ್ರ ಬರೆಯುವ ಮುನ್ನ ಚೆನ್ನಾಗಿ ಧ್ಯಾನ ಮಾಡಿ ಚಿತ್ರ ಬರೆಯಿರಿ, ಇದು ಭಾರತೀಯ ಚಿತ್ರಕಲೆಯ ಸೂತ್ರ'' ಎಂದು ವಿವರಿಸುತ್ತಾ, ''ಕಾಳಿ ದಿಗಂಬರಳು, ವಿನಾಶಕಳು, ಹೆಚ್ಚು ವಸ್ತ್ರವನ್ನು ತೊಡಿಸುವ ಅಗತ್ಯ ವಿಲ್ಲ. ಸ್ವಾಮಿ ವಿವೇಕಾನಂದರು ಬರೆದಿರುವ 'Kali the Mother' ಪದ್ಯವನ್ನು ಓದಿ ಮನನ ಮಾಡಿ ಚಿತ್ರ ಬಿಡಿಸುತ್ತಾ ಹೋಗಿ'' ಎಂದು ಹೇಳುತ್ತಾಳೆ.

ನಂದಲಾಲರ ಮತ್ತೊಂದು ಚಿತ್ರ ಶ್ರೀಕೃಷ್ಣಚೈತನ್ಯ ಮಹಾ ಪ್ರಭುಗಳ ಶಿಷ್ಯರಾದ 'ಜಗಾಯ್-ಮಧಾಯ್'ರದು. ತಪ್ಪು ದಾರಿಯಲ್ಲಿ ಸಾಗುತ್ತಿದ್ದ ಇವರೀರ್ವರನ್ನು ಪ್ರಭುಗಳು ತಿದ್ದಿ ಅನು ಗ್ರಹ ಮಾಡಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತಾರೆ. ನಿವೇ ದಿತಾ ನಂದಲಾಲರನ್ನು, ಇವರಿಬ್ಬರ ಮುಖಭಾವವನ್ನು ನೀವು

ಹೇಗೆ ಕಲ್ಪಿಸಿದರೆಂದು ವಿಚಾರಿಸಿದಾಗ, ಶ್ರೀರಾಮಕೃಷ್ಣರಿಂದ ಅನುಗ್ರಹೀತರಾದ ಗಿರೀಶಚಂದ್ರ ಘೋಷರ ಮುಖಭಾವವನ್ನು ಧ್ಯಾನಿಸಿ ಬರೆದುದಾಗಿ ಹೇಳುತ್ತಾನೆ. ಆ ಚಿತ್ರದಲ್ಲಿದ್ದ ಒಂದು ಸೂಕ್ಷ್ಮ ದೋಷ ಅವಳ ತೀಕ್ಷ್ಣ ಕಣ್ಣುಗಳಿಗೆ ಕಂಡು ಬಂದುದನ್ನು ತೋರಿಸುತ್ತಾಳೆ. ಜಗಾಯ್-ಮಧಾಯ್‍ರ ಸೊಂಟದಲ್ಲಿ ತೋರಿಸಿರುವ ಹುಕ್ಕಾದೆಡೆ ಗಮನ ಸೆಳೆದು, ''ಅವರ ಕಾಲದಲ್ಲಿ ಹುಕ್ಕಾ ಎಲ್ಲಿತ್ತು? ಆಗಿನ್ನೂ ಈ ದೇಶಕ್ಕೆ ಹೊಗೆಸೊಪ್ಪು ಬಂದಿರಲಿಲ್ಲ. ಒಂದು ಚಿತ್ರ ಬರೆಯುವಾಗ ಆ ಕಾಲಕ್ಕೆ ಸಂಬಂಧಿಸಿದ ಆಚಾರ-ವಿಚಾರ ವ್ಯವಹಾರ, ಉಡುಪು, ಇತ್ಯಾದಿಗಳ ಪರಿಜ್ಞಾನ ಅಗತ್ಯ'' ಎಂದು ಎಚ್ಚರಿಸುತ್ತಾಳೆ.

ನಂದಲಾಲರ ಮಗದೊಂದು ಸುಂದರ ಚಿತ್ರ 'ರಾಜಾ ವಿಕ್ರಮಾದಿತ್ಯ ಮತ್ತು ಬೇತಾಳ.' ಇದನ್ನು ಸೋದರಿ ವಿವರಿಸುವ ಪರಿ ಅದ್ಭುತ. ''ಉಜ್ಜಯಿನಿ ರಾಜ್ಯದ ಅರಮನೆಯಲ್ಲಿ ವಿಕ್ರಮಾದಿತ್ಯ, ಗಾಣಿಗನೊಬ್ಬನ ಮನೆಯಲ್ಲಿ ಗಾಣಿಗನ ಮಗ, ಮತ್ತು ಒಬ್ಬ ತಾಂತ್ರಿಕ ಯೋಗಿ - ಈ ಮೂವರ ಜನನವೂ ಏಕಕಾಲದಲ್ಲಿ ಉಂಟಾಯಿತು. ತಾಂತ್ರಿಕ ಯೋಗಿಯಾದವನು ಗಾಣಿಗರ ಮಗನನ್ನು ಕೊಂದು ಅವನ ಶವವನ್ನು ಸ್ಮಶಾನದ ಒಂದು ಮರಕ್ಕೆ ನೇತು ಹಾಕುತ್ತಾನೆ. ವಿಕ್ರಮಾದಿತ್ಯನನ್ನು ಕೊಲ್ಲುವ ಉದ್ದೇಶದಿಂದ ತಾಂತ್ರಿಕನು ರಾಜನಿಗೆ ಸ್ಮಶಾನಕ್ಕೆ ಹೋಗಿ ಪ್ರೇತ ಆವರಿಸಿರುವ ಗಾಣಿಗನ ಮಗನ ಶವವನ್ನು ಮಧ್ಯರಾತ್ರಿ ತಂದೊಪ್ಪಿಸಿ ಕಾಳಿಯ ಪೂಜೆಗೆ ನೆರವಾಗಲು ಹೇಳುತ್ತಾನೆ. ಆ ಶವದ ಮೇಲೆ ಕುಳಿತು ರಾಜ ವಿಕ್ರಮನನ್ನೇ ಕಾಳಿಗೆ ಬಲಿಕೊಡುವುದು ಅವನ ದುರುದ್ದೇಶವಾಗಿತ್ತು. ಭಯವೆಂಬುದನ್ನೇ ಅರಿಯದ ವಿಕ್ರಮ ಆ ಬೇತಾಳನನ್ನು ಮರದಿಂದ ಇಳಿಸಿದಾಗ ಅದು ಅವನ ಬೆನ್ನೇರಿ, ಕೊರಳಿಗೆ ಸುತ್ತಿ ಹಿಡಿದುಕೊಂಡು ತಾನು ಹೇಳುವ ಕಥೆಗಳನ್ನು ಮೌನದಿಂದ ಕೇಳಬೇಕೆಂದು ನಿಬಂಧನೆ ಮಾಡಿ, ಕಥೆ ಮುಗಿಯುತ್ತಲೇ ರಾಜನಿಗೆ ಪ್ರಶ್ನೆ ಕೇಳುತ್ತದೆ. ರಾಜ ಸಮಾಧಾನ ಹೇಳುತ್ತಲೇ ಮತ್ತೆ ಹಾರಿಹೋಗಿ ಮರದಮೇಲೆ ನೇತು ಬೀಳುತ್ತದೆ. ಹೀಗೆಯೇ ಬೇತಾಳ ಪಂಚವಿಂಶತಿ ಎಂಬ ೨೫ ಕಥೆಗಳನ್ನು ಹೇಳುತ್ತದೆ. ಧೃತಿಗೆಡದೆ ವಿಕ್ರಮ ಪ್ರತಿಬಾರಿಯೂ ಶವವನ್ನು ಎತ್ತಿಕೊಂಡು ಬರುತ್ತಾನೆ. ಕೊನೆಯ ಕಥೆ ಮುಗಿಯುತ್ತಲೇ ಭೇತಾಳ ತಾಂತ್ರಿಕನ ದುರುದ್ದೇಶವನ್ನು ವಿಕ್ರಮನಿಗೆ ತಿಳಿಸಿ, ಅವನನ್ನು ವಧಿಸಿ ಕಾಳಿಯ ಕೃಪೆಗೆ ಪಾತ್ರನಾಗಲು ತಿಳಿಸುತ್ತದೆ. ಹಾಗೆಯೇ ಮಾಡಿದ ಛಲಬಿಡದ ವಿಕ್ರಮ ಇಡೀ ಭೂಮಂಡಲದ ಚಕ್ರಾಧಿಪತ್ಯವನ್ನು ವಹಿಸುತ್ತಾನೆ. ಇದು ಕಲಾವಿದನ ಕುಂಚದ ವಿಕಟರೂಪವಾಗಿದ್ದರೂ ಭಾರತೀಯರ ನಿರ್ಭಯತೆಯ ಪ್ರತೀಕವಾದ ಚಿತ್ರ.'' ಇದು ನಿವೇದಿತಾಳ ಅದ್ಭುತ ಕಥಾನಿರೂಪಣೆಯ ಸಾಮರ್ಥ್ಯ ಹಾಗೂ ಕೌಶಲತೆಯ ಸಾಕ್ಷಿ.

ಬಾಬು ಉಪೇಂದ್ರ ಕಿಶೋರ್ ರೇ ಎಂಬ ಚಿತ್ರಕಾರನ 'ಸಮುದ್ರ ಮಥನ' ಎಂಬ ಚಿತ್ರದಲ್ಲಿ ನಿವೇದಿತೆಗೆ ಅಸಂಬದ್ಧವೆನಿಸುವ ಅನೇಕ ನ್ಯೂನತೆಗಳು ಕಂಡುಬರುತ್ತವೆ. ಹಗ್ಗವಾಗಿ ಉಪಯೋಗಿಸಿರುವ ವಾಸುಕಿಯನ್ನು ಮಂದರಪರ್ವತದ ಅತಿ ಮೇಲಿನ ಭಾಗಕ್ಕೆ ಸುತ್ತಿರುವುದು ಮಥನಗೈಯುವ ಸ್ಥಾನಕ್ಕೆ ಸರಿಯಲ್ಲ ಮಾತ್ರವಲ್ಲ ವಾಸುಕಿಯ ತಲೆಯ ಭಾಗ ಅಷ್ಟು ಸಮಂಜಸವೆನಿಸದು, ಸಮುದ್ರದ ಅಲೆಗಳ ಸಮಮಟ್ಟದ ವರ್ಣ ಗೋಡೆಯಾಕಾರದಲ್ಲಿ ಎದ್ದು ನಿಂತಂತೆ ಕಾಣುತ್ತಿದೆ. ಹೀಗೆ ಚಿತ್ರದಲ್ಲಿ ಅನೇಕ ನ್ಯೂನತೆಗಳು ಗೋಚರಿಸಿದರೂ ಅವರ ಭವ್ಯವಾದ ಭಾರತೀಯ ಕಲ್ಪನೆಯನ್ನು, ಶಕ್ತಿ ಸಾಹಸವನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ವಿಕಟ ಶಕ್ತಿಯ ಅಸುರರೊಂದೆಡೆ, ಶಾಂತ ಸುಂದರ ಪ್ರತಿಷ್ಠಿತ ದೇವತೆಗಳು ಮತ್ತೊಂದೆಡೆ - ಇವರೀರ್ವರ ನಡುವೆ ನಡೆವ ಘರ್ಷಣೆ ಇದು ಚಿಂತನೆಗೆ ಅದ್ಭುತ ವಿಚಾರ ಎನ್ನುತ್ತಾಳೆ ಸೋದರಿ ನಿವೇದಿತಾ.

ಅಸಿತಕುಮಾರ ಹವಾಲ್ದಾರರ ಮತ್ತೊಂದು ಪುಟ್ಟ ಚಿತ್ರ ಅದ್ಭುತ. ಅದು ವೀಣೆ ನುಡಿಸುತ್ತಿರುವ ಸುಂದರಿಯ ವರ್ಣಚಿತ್ರ. ನಿವೇದಿತಾ ಈ ಚಿತ್ರದ ಸೌಂದರ್ಯವನ್ನು ಮೆಚ್ಚುತ್ತಾ, ''ಆ ಸುಂದರ ಸಂಧ್ಯಾ ಸಮಯ, ಶರತ್ಕಾಲದ ಆಕಾಶದ ನೀಲವರ್ಣ, ಮನೆಯ ಮೇಲ್ಛಾವಣಿಯಲ್ಲಿ ಏಕಾಂತದಲ್ಲಿ ಕುಳಿತಿರುವ ಆ ಸುಂದರ ಸ್ತ್ರೀ, ಕನಸಿನ ರಾಜ್ಯದಲ್ಲಿ ವಿಹರಿಸುತ್ತಿದ್ದಾಳೆ. ಹೃದಯದಿಂದ ಹೊರಬರುವ ಗಾನವನ್ನು ಅರಸುತ್ತಿರುವ ಅವಳ ಕಂಗಳಲ್ಲಿರುವ ವಾಣಿಯಿಂದ ಮಧುರ ನಾದ ಹೊರಬರುವುದನ್ನು ನಾವು ಕೇಳಬಹುದಾಗಿದೆ.'' ಅದ್ಭುತವಾದ ಈ ಚಿತ್ರದ ಕಲಾವಿದನಿಗೆ ಅಭಿನಂದನೆ ಸಲ್ಲಿಸುತ್ತಾಳೆ ನಿವೇದಿತಾ.

### ರಾಷ್ಟ್ರಧ್ವಜ - ವಜ್ರ

ರಾಷ್ಟ್ರೀಯ ಏಕತಾ ಭಾವನೆಯನ್ನು ಬೆಳೆಸಲು ನಿವೇದಿತಾ ರೂಪಿಸಿದ ರಾಷ್ಟ್ರಧ್ವಜ - ವಜ್ರ. ಅದು ದಧೀಚಿ ಮಹರ್ಷಿಯ ದಿವ್ಯ ತ್ಯಾಗದ ಸಂಕೇತ. ಋಷಿ ದಧೀಚಿ ದೇವತೆಗಳಿಗಾಗಿ ತನ್ನ ಪ್ರಾಣವನ್ನೇ ಅರ್ಪಿಸಿದ ಮಹಾತ್ಯಾಗಿ. ಅವನ ಶರೀರದ ಎಲುಬಿನಿಂದ ನಿರ್ಮಿಸಿದ ಶಕ್ತಿ ಭರಿತ ವಜ್ರಾಯುಧ ದೇವತೆಗಳ ಮಹತ್ಕಾರ್ಯಗಳಲ್ಲಿ ದೇವೇಂದ್ರನಿಂದ ವಿನಿಯೋಗಿಸಲ್ಪಟ್ಟಿತು. ಈ 'ವಜ್ರ' ತ್ಯಾಗ ಹಾಗೂ ಶಕ್ತಿಯ ಸಂಕೇತ. ನಿವೇದಿತಾ ಹೇಳುತ್ತಾಳೆ: ''ಇಲ್ಲಿವೆ ವಜ್ರದ ವೈಶಿಷ್ಟ್ಯ. ನಿಸ್ವಾರ್ಥ ವ್ಯಕ್ತಿಯೇ ವಜ್ರ. ನಾವು ನಿಸ್ವಾರ್ಥಿಯಾಗಿರಲು ಪ್ರಯತ್ನಿಸೋಣ. ಆಗ ದೇವತೆಗಳ ಅಸ್ತ್ರವಾಗುತ್ತೇವೆ'' ಎಂದು ಹೇಳುತ್ತಾ ಜಗನ್ಮಾತೆಯನ್ನು ಕುರಿತು, ''ತಾಯಿ, ನಮ್ಮೊಳಗಿಂದ ಸ್ವಾರ್ಥವನ್ನು ತೆಗೆದುಬಿಡು. ಕೀರ್ತಿಲಾಭ, ಸುಖ ಇವು ಯಾವುದೂ ನಮ್ಮ ಮೇಲೆ ಆಧಿಪತ್ಯ ಮಾಡದಿರಲಿ. ನಾವು-ನಮ್ಮದು ಎಂಬ ಸ್ವಾರ್ಥ ನಿನ್ನ ಪ್ರಖರ ಸೂರ್ಯಪ್ರಭೆಯ ಶಾಖದಿಂದ ಕರಗಿಹೋಗುವ ಮಂಜಿನಂತಾಗಲಿ'' ಎಂದು ಪ್ರಾರ್ಥಿಸುತ್ತಾಳೆ. ನಿವೇದಿತಾ ನಿರೂಪಿಸಿದ ಈ ರಾಷ್ಟ್ರಧ್ವಜದಲ್ಲಿ 'ವಂದೇ ಮಾತರಂ' ಹಾಗೂ 'ಯತೋ ಧರ್ಮಸ್ತತೋ ಜಯಃ', ಎಂಬ ಮಹಾವಾಕ್ಯಗಳಿವೆ. ಚೌಕಾಕಾರದ ಈ ಧ್ವಜದ ನಾಲ್ಕು ಅಂಚುಗಳಲ್ಲಿ ೧೦೮ ಜ್ಯೋತಿಯನ್ನು ಚಿತ್ರಿಸಲಾಗಿದೆ. ಇದು ಕಡುಗೆಂಪು ಬಣ್ಣ ವಿಜಯಕ್ಕೂ, ವಜ್ರಾಯುಧ ಶೌರ್ಯದ ಸಂಕೇತವೂ ಆಗಿದೆ. ಈ ಧ್ವಜ ೧೯೦೬ರ ಕಾಂಗ್ರೆಸ್ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿತವಾಗಿತ್ತು. ಡಾ.ಜೆ.ಸಿ.ಬೋಸರಂತಹ ಅನೇಕ ಗಣ್ಯರಿಂದ ಅದು ಪ್ರಶಂಸಿಸಲ್ಪಟ್ಟಿತು. 'ಮಾಡರ್ನ್ ರಿವ್ಯೂ' ಪತ್ರಿಕೆಯಲ್ಲೂ ಇದರ ವಿಷಯವಾಗಿ ಪ್ರಕಟವಾಗಿತ್ತು. ಭಾರತದ ಈ ಪ್ರಥಮ ಧ್ವಜವನ್ನು ಎಲ್ಲರೂ ಒಪ್ಪಿ

ಇದು ಹಲವೆಡೆ ಬಳಕೆಗೂ ಬಂದಿತ್ತು. ರಾಷ್ಟ್ರಭಕ್ತಿಯಲ್ಲೂ ಅರ್ಥಪೂರ್ಣ ಕಲೆಯನ್ನು ತುಂಬಿದ ಕೀರ್ತಿ ನಿವೇದಿತಾಳಿಗೆ ಸಲ್ಲುತ್ತದೆ. ಈ 'ವಜ್ರ'ದ ಚಿಹ್ನೆ ಕಲ್ಕತ್ತೆಯ 'Bose Institute' ನ ಲಾಂಛನವಾಗಿದೆ. ಹಾಗೆಯೇ 'North Bengal University' ಯ ಲಾಂಛನದ ನಡುವೆ 'ವಜ್ರ'ದ ಸಂಕೇತವಿದೆ.

ಮುಂದೆ ೧೯೪೭ರಲ್ಲಿ ರೂಪಿತವಾದ ಭಾರತದ ಸೈನ್ಯದ ರಕ್ಷಣಾ ಪಡೆಯ ಅತ್ಯುನ್ನತ ಶೌರ್ಯ ಪದಕವಾದ 'ಪರಮವೀರ ಚಕ್ರ' ಪ್ರಶಸ್ತಿಪದಕದ ಮೇಲೂ ಈ 'ವಜ್ರ'ದ ಸಂಕೇತವನ್ನು ಕಾಣಬಹುದು. ಇದೂ ನಿವೇದಿತೆಯ ರಾಷ್ಟ್ರಧ್ವಜದ ನಕ್ಷೆಯ ಪ್ರಭಾವದಿಂದಿರಬಹುದೆ?

ಹೀಗೆ ಭಾವನೆಗಳ ಗೊಂದಲವಿರದ ಭಾರತೀಯ ಕಲಾಕೃತಿಗಳೆಲ್ಲವೂ ಏಕೀಭಾವವನ್ನು ವ್ಯಕ್ತಗೊಳಿಸುತ್ತವೆ. ಕಾರಣ ಭಾರತೀಯ ಕಲೆ ಅಧ್ಯಾತ್ಮದ, ಧರ್ಮದ ಬುನಾದಿಯ ಮೇಲೆ ನಿಂತಿರುವುದರಿಂದ ಅದಕ್ಕೆ ಅಳಿವಿಲ್ಲ. ಹೀಗಾಗಿ ಇಲ್ಲಿನ ಚಿತ್ರ, ಶಿಲ್ಪ, ಕಾವ್ಯ, ಸಾಹಿತ್ಯ ಎಲ್ಲರನ್ನೂ ಹೃದಯದಾಳಕ್ಕೆ ಕರೆದೊಯ್ದು ಬೆಳಕನ್ನು ತೋರಿಸಬಲ್ಲ ಶಕ್ತಿಯನ್ನು ಪಡೆದಿರುತ್ತವೆ. ಕೇವಲ ನಯನಾನಂದಕರ ಮಾತ್ರವಲ್ಲ! ಹೀಗಾಗಿ ಇವೆಲ್ಲವೂ ಅಮರ ಶಿಲ್ಪಗಳು, ಅಮರ ಚಿತ್ರಗಳು, ಅಮರ ಕೃತಿಗಳು.

**ಭಾರತೀಯ ಚಿತ್ರಕಲೆ-ಪಾಶ್ಚಾತ್ಯ ಚಿತ್ರಕಲೆ**

ಭಾರತೀಯ ಚಿತ್ರಕಲೆಯ ಈ ಆಳವಾದ ಅರ್ಥವನ್ನೂ, ತತ್ತ್ವವನ್ನೂ ಅರಿತ ನಿವೇದಿತಾ ಪಾಶ್ಚಾತ್ಯ ಚಿತ್ರಕಾರರ ಮಹಾಕೃತಿಗಳನ್ನು ವಿಮರ್ಶಿಸಲು ಸರಿಸಮಾನವಾಗಿಯೇ ಸಮರ್ಥಳಾಗಿದ್ದಳು. ಭಾರತದ ಕಲಾವಿದರು ಕೇವಲ ಅಂಧಾನುಕರಣೆ ಮಾಡದೆ ಸರಿಯಾದ ಮಾರ್ಗದರ್ಶನದಲ್ಲಿ ಪಾಶ್ಚಾತ್ಯ ಚಿತ್ರಕಲೆಯನ್ನು ಕಲಿಯಲು ನಿವೇದಿತಾ ನೆರವಾದಳು. ಪಾಶ್ಚಾತ್ಯರ ಅತ್ಯುತ್ತಮ ಚಿತ್ರಗಳನ್ನು ಸೂಕ್ತ ವಿಮರ್ಶೆಗಳೊಡನೆ ನಮ್ಮ ಚಿತ್ರಕಲಾ ಪ್ರಪಂಚಕ್ಕೂ ಪರಿಚಯಿಸಿದ ಹಿರಿಮೆ ನಿವೇದಿತಾಳದು.



ಕಲಾಪ್ರಪಂಚದಲ್ಲಿ ನಿವೇದಿತಾಳಿಗಿದ್ದ ಸಂಪರ್ಕ ಅಪಾರ. ಸುಪ್ರಸಿದ್ಧ ಕಲಾವಿಮರ್ಶಕರಾಗಿದ್ದ ಆನಂದ ಕುಮಾರಸ್ವಾಮಿ, ಜಪಾನಿನ ಓಕಾಕುರ, ಕವಿ ರವೀಂದ್ರನಾಥ ಠಾಕೂರರು, ಕವಿ ಮತ್ತು ಕ್ರಾಂತಿಕಾರಿ ಸುಬ್ರಹ್ಮಣ್ಯ ಭಾರತಿ ಮುಂತಾದ ಅನೇಕ ಗಣ್ಯರು ಅವಳ ಆಪ್ತ ಮಿತ್ರರಾಗಿದ್ದರು. ಇವರ ಬಗ್ಗೆ ನಿವೇದಿತಾ 'ಮಾಡರ್ನ್‌ರಿವ್ಯೂ' ಪತ್ರಿಕೆಯಲ್ಲಿ ವಿಮರ್ಶೆಯನ್ನೂ ಪ್ರಕಟಿಸಿದಳು. ಅವರ ಪುಸ್ತಕಗಳಿಗೆ ಪೀಠಿಕೆಯನ್ನೂ ಬರೆದಿದ್ದಳು.

ಹೀಗೆ ಭಾರತೀಯರ ಏಳ್ಗೆಗಾಗಿ ವಿದೇಶದಿಂದ ಬಂದು ದುಡಿದ ನಿವೇದಿತಾ ಭಾರತೀಯ ಕಲಾವಿದರ ಏಳ್ಗೆಗೂ ಶ್ರಮಿಸಿದುದನ್ನು ನೋಡಿದ್ದೇನೆ. ಸ್ವಯಂ ಚಿತ್ರಕಾರ ನಂದಲಾಲ್ ಬೋಸರೇ ಹೀಗೆ ಹೇಳುತ್ತಾರೆ: ''ಅವಳ ಮನಸ್ಸಿನಲ್ಲಿ ಯಾವಾಗಲೂ ಭಾರತೀಯ ಕಲಾವಿದರ ಪ್ರಗತಿಯ ಯೋಚನೆಯೇ ತುಂಬಿರುತ್ತಿತ್ತು. ನಾನು ಅವಳಿಂದ ಪಡೆದ ಉತ್ತೇಜನದ ಬಗ್ಗೆ ಹೇಳಿ ಮುಗಿಸಲಾರೆ. ನನಗೆ ಶ್ರೀರಾಮಕೃಷ್ಣ, ವಿವೇಕಾನಂದರ ಭಾವನೆಗಳ ಪರಿಚಯವಾದದ್ದು ನಿವೇದಿತಾಳಿಂದಲೇ.'' ಅಸಿತ ಹಲಧರರು, ''ಅದು ಪ್ರಾಚೀನ ಭಾರತೀಯ ಕಲೆಯ ಪುನರುತ್ಥಾನದ ಕಾಲ. ಈ ರಾಷ್ಟ್ರೀಯ ಜಾಗೃತಿಯಿಂದ ನಿವೇದಿತಾ ಹರ್ಷಭರಿತಳಾಗಿದ್ದಳು. ನಂದಲಾಲ್ ಮತ್ತು ನಾನು ಅವಳನ್ನು ಸಂಧಿಸಲು ಅವಳ ಮನೆಗೇ ಹೋಗುತ್ತಿದ್ದೆವು. ಈ ಕಲಾಕ್ಷೇತ್ರವನ್ನು ಬಿಟ್ಟು ರಾಜಕೀಯದಲ್ಲಿ ಧುಮುಕಬೇಡಿರೆಂದು ನಮಗೆ ಯಾವಾಗಲೂ ಹೇಳುತ್ತಿದ್ದಳು. ತ್ವರಿತಗತಿಯಲ್ಲಿ ಅಳಿಸಿ ಹೋಗುತ್ತಿರುವ ಪ್ರಾಚೀನ ಭಾರತೀಯ ಕಲೆಯ ಪುನರುಜ್ಜೀವನ ನಮ್ಮನ್ನವಲಂಬಿಸಿದೆ ಮತ್ತು ಇದು ಸ್ವಾತಂತ್ರ್ಯ ಚಳುವಳಿಗೆ ನಮ್ಮ ದೊಡ್ಡ ಕೊಡುಗೆಯಾಗುವುದು, ಇದಕ್ಕಾಗಿ ಶಕ್ತಿಮೀರಿ ದುಡಿಯಬೇಕೆಂದು ಪ್ರೋತ್ಸಾಹಿಸುತ್ತಿದ್ದಳು'' ಎಂದು ಹೃದಯತುಂಬಿ ಅವಳನ್ನು ಸ್ಮರಿಸಿದ್ದಾರೆ.

**ನಿವೇದಿತೆಯ ಇತರ ಸಾಹಿತ್ಯ ಕೃಷಿ**

ಚಿತ್ರಕಲೆಯ ಕ್ಷೇತ್ರವಲ್ಲದೆ ಕಾವ್ಯ ಸಾಹಿತ್ಯ ಕ್ಷೇತ್ರಗಳಲ್ಲೂ, ಪತ್ರಿಕೋದ್ಯಮ ಕ್ಷೇತ್ರಗಳಲ್ಲೂ ಅವಳ ಕೊಡುಗೆ ಕಡಿಮೆಯೇನಲ್ಲ. The Master As I saw Him, Cradle Tales of Hinduism, Kali The Mother, Aggressive Hinduism, Studies from an Eastern Home, Siva and Buddha ಇವೇ ಮೊದಲಾದ ೧೫ಕ್ಕೂ ಮೇಲ್ಪಟ್ಟ ಕೃತಿಗಳು, ಸ್ವಾಮಿ ವಿವೇಕಾನಂದರೊಡನೆ ಉತ್ತರ ಭಾರತದ ಪ್ರವಾಸಗಳ ಅದ್ಭುತ ವರ್ಣನೆಯ ಬರಹಗಳು ಅತ್ಯಂತ ಸುಂದರವಾಗಿವೆ. ಭಾಷೆಯ ಮೇಲೆ ಪ್ರಭುತ್ವ ಪಡೆದಿದ್ದ ಅವಳ ಬರಹಗಳು ಗದ್ಯರೂಪದಲ್ಲಿದ್ದರೂ ಕಾವ್ಯದ ಸೊಗಸನ್ನು ಹೊಂದಿದ್ದವು. ಇವಲ್ಲದೆ ಅವಳ ಲೇಖನಿಯಿಂದ ಅನೇಕ ಸುಂದರ ಪದ್ಯಗಳೂ ಮೂಡಿ ಬಂದಿವೆ. ಇವುಗಳಲ್ಲಿ ಕೆಲವು 'A Fragment of the Litany of Love', 'The Cry of Mother to Indian Youth', 'Child-heart, Earth and water' ಮುಂತಾದವು.

'Footfalls of Indian History' ಎಂಬ ನಿವೇದಿತೆಯ ಕೃತಿಯಲ್ಲಿ 'The Footfalls' ಎಂಬ ಸುಂದರ ಕೃತಿಯಿದೆ. ಇದರ

ಸೊಗಸನ್ನು, ಲಾಲಿತ್ಯವನ್ನೂ ಇದರ ಕನ್ನಡ ಭಾವಾನುವಾದದಲ್ಲಿ ಅನುಭವಿಸೋಣ:

''ಹೆಜ್ಜೆ-ದನಿ''
ನಿನ್ನಯ ಹೆಜ್ಜೆಯ ದನಿ
ಕೇಳುತ್ತಿದೆ, ಓ ತಾಯಿ।
ಯುಗ ಯುಗಗಳ ಹಾಯ್ದು ಬಂದು
ಮೃದು ಮೃದು ಮೃದು ಮಧುರವಾಗಿ
ಅಲ್ಲಿ ಅಲ್ಲಿ ನೆಲವ ಮುಟ್ಟಿ
ನಿನ್ನಯ ಹೆಜ್ಜೆಯ ದನಿ
ಕೇಳುತ್ತಿದೆ, ಓ ತಾಯೆ!
ಇತಿಹಾಸದ ನಗರಗಳು
ಕಾವ್ಯ ಶಾಸ್ತ್ರ ದೇಗುಲಗಳು
ಧರ್ಮಕ್ಕಾಗಿ ನಡೆದ ಯುದ್ಧ
ಎಲ್ಲವೂ ಇವೆಲ್ಲವೂ
ನಿನ್ನ ಹೆಜ್ಜೆ ಪೂಜೆಗಿಟ್ಟ
ಅಸಂಖ್ಯಾತ ಕಮಲಗಳು!
ಕರೆದೊಯ್ಯುತ್ತಿವೆ ಇನ್ನೆಲ್ಲಿಗೆ ಓ ತಾಯಿ
ನಿನ್ನಯ ಹೆಜ್ಜೆಗಳು?
ಅದರರ್ಥವ ಹೀರುವ ಶಕ್ತಿಯ ಕೊಡು ತಾಯಿ
ಮನುಜನ ಮತಿಯಾಚೆಯ
ಆ ದರ್ಶನವನು ನೀಡು
ಕರೆದೊಯ್ಯುವೆ ಇನ್ನೆಲ್ಲಿಗೆ ಓ ತಾಯಿ
ನಿನ್ನಯ ಹೆಜ್ಜೆಗಳು?
ಬಾ ತಾಯಿ, ಮುಕ್ತಿಯ ನೀಡುವ ಓ ತಾಯಿ,
ಬಾ ನಿನ್ನೀ ಶಿಶುಗಳ ಬಳಿಗೆ।
ನಮ್ಮೀ ಹೃದಯಗಳಾಗಲಿ
ನೀನಡಿಯಿಡುವಾ ಸ್ಥಾನ
ನಿನ್ನವರೇ ನಾವು ಓ ಭೂಮ್ಯಾದೇವಿ।
ಎಲ್ಲಿಗೆ, ಇನ್ನೆಲ್ಲಿಗೆ ಕರೆದೊಯ್ಯುವೆ, ಓ ತಾಯಿ
ನಿನ್ನಾ ಹೆಜ್ಜೆಗಳು।
*('ನಿವೇದಿತಾ' – ಪ್ರಭುಶಂಕರ)*

### ಪತ್ರಿಕೋದ್ಯಮಿ ನಿವೇದಿತೆ

ಗುರುವಿನಲ್ಲಿ ಶ್ರದ್ಧೆ, ದೈವಭಕ್ತಿ, ರಾಷ್ಟ್ರಭಕ್ತಿ, ಭಾರತೀಯ ಲಲಿತ ಕಲೆಗಳಲ್ಲಿ ಆಸಕ್ತಿ ಇವೆಲ್ಲ ಕ್ಷೇತ್ರಗಳಲ್ಲಿ ಪಳಗಿದ್ದ ನಿವೇದಿತಾ ಪತ್ರಿಕೋದ್ಯಮ ಕ್ಷೇತ್ರದಲ್ಲಿ ನುರಿತ ವ್ಯಕ್ತಿ. ಈ ಕ್ಷೇತ್ರದಲ್ಲೂ ಅವಳ ಕೊಡುಗೆ ಅಪಾರ. ಅವಳ ಶಕ್ತಿಭರಿತ ಲೇಖನಗಳು New India Modern Review, Prabuddha Bharata, Indian Review, Mysore Review, The Bengali, East & West, Sindh Journal, Bala Bharathi, Amrita Bazar, Statesman, Maratha, Times of India, Bombay Chronical, ಮುಂತಾದ ವೃತ್ತ ಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ಪ್ರಕಟಗೊಂಡು ಜನ ಜಾಗೃತಿಯನ್ನುಂಟುಮಾಡಿದವು. ಈ ಎಲ್ಲ ಪತ್ರಿಕೆಗಳಿಂದ ನಿವೇದಿತಾಳ ಬರಹಗಳಿಗೆ ನಿರಂತರ ಬೇಡಿಕೆ ಇರುತ್ತಿತ್ತು. ತನ್ನದೇ ಆದ ಪತ್ರಿಕೆಯೊಂದನ್ನು ಹೊರಡಿಸಬೇಕೆಂಬ ಇಚ್ಛೆಯೂ ಅವಳಿಗಿತ್ತು.

ಪತ್ರಿಕೋದ್ಯಮಕ್ಕೆ ಅವಳ ಅಪಾರ ಕೊಡುಗೆಯನ್ನು ಸ್ಮರಿಸುತ್ತಾ ರಾಮಾನಂದ ಚಟರ್ಜಿ, ''ಅವಳು ಹುಟ್ಟು ಪತ್ರಿಕೋದ್ಯಮಿ ಎಂದು ಹೇಳಬಹುದು. ಅವಳ ಎಲ್ಲ ಬರಹಗಳು ಪ್ರತಿಭಾಪೂರ್ಣವೂ, ಶಕ್ತಿಯುತವೂ, ಸ್ವತಂತ್ರವೂ ಆಗಿದ್ದವು. ಅವಳಿಗೆ ಯಾವ ವಿಷಯದ ಮೇಲಾದರೂ ಅತ್ಯಂತ ಲೀಲಾ ಜಾಲವಾಗಿಯೂ, ಸ್ಫೂರ್ತಿಯುತವಾಗಿಯೂ ಬರೆಯುವ ಸಾಮರ್ಥ್ಯವಿತ್ತು. ಆದ್ದರಿಂದ ಅನೇಕ ಸಂಪಾದಕರ ಬೇಡಿಕೆಗಳನ್ನು ಅವಳು ಪೂರೈಸುವಂತಾಯಿತು'' ಎಂದು ಹೃದಯ ತುಂಬಿ ಶ್ಲಾಘಿಸುತ್ತಾರೆ.

ಪ್ರಸಿದ್ಧ ನಾಟಕಕಾರ ಗಿರೀಶಚಂದ್ರ ಘೋಷ್ ತಾವು ಅಸೌಖ್ಯದಿಂದಿದ್ದರೂ ತಮ್ಮ ಕೊನೆಯ ನಾಟಕ 'ತಪೋಬಲ' ಬರೆಯುತ್ತಿದ್ದಾಗ ನಾಟಕಪ್ರೇಮಿ ನಿವೇದಿತಾ ತನ್ನ ಕೊನೆಯ ದಿನಗಳಲ್ಲಿ ಗಿರೀಶಚಂದ್ರರನ್ನು ಭೇಟಿಯಾಗಿ ಈ ನಾಟಕವನ್ನು ಶೀಘ್ರವಾಗಿ ಬರೆದು ಮುಗಿಸಿ, ''ನಾನು ಡಾರ್ಜಿಲಿಂಗ್‌ನಿಂದ ಹಿಂದಿರುಗಿದ ಮೇಲೆ ಬಂದು ಓದುತ್ತೇನೆ'' ಎಂದಿದ್ದಳು. ಆದರೆ ವಿಧಿ ಅವಳನ್ನು ತನ್ನೆಡೆಗೆ ಕರೆಸಿಕೊಂಡು ಬಿಟ್ಟಿತ್ತು. ಗಿರೀಶರು ತಮ್ಮ ನಾಟಕ 'ತಪೋಬಲ'ವನ್ನು ನಿವೇದಿತಾಳಿಗೆ ಅರ್ಪಿಸುತ್ತಾ, ''ಮಗು, ನಿವೇದಿತಾ, ನನ್ನ ಹೊಸ ನಾಟಕ ಪ್ರದರ್ಶಿತವಾದಾಗಲೆಲ್ಲ ನೀನು ನೋಡಿ ಆನಂದಿಸುತ್ತಿದ್ದೆ. ನನ್ನ ಹೊಸ ನಾಟಕ ಈಗ ಪ್ರದರ್ಶಿತವಾಗುತ್ತಿದೆ, ಆದರೆ ನೀನೆಲ್ಲಿರುವೆ?... ನೀನೇಕೆ ನನ್ನನ್ನು ನೋಡಲು ಬರುತ್ತಿಲ್ಲ? ಈಗ ದೇವಕಾರ್ಯದಲ್ಲಿ ತೊಡಗಿರುವ ನಿನಗೆ ಇನ್ನು ನನ್ನ ನೆನಪಿರುವುದಾದರೆ ನನ್ನ ಈ ಅಶ್ರುತರ್ಪಣ ಕಾಣಿಕೆಯನ್ನು ಸ್ವೀಕರಿಸು'' ಎನ್ನುತ್ತಾರೆ. ಒಬ್ಬ ನಿಜ ಕಲಾವಿದ, ಆಧುನಿಕ ಬಂಗಾಳೀ ನಾಟಕ ಪಿತಾಮಹನಿಂದ ಒಬ್ಬ ಕಲಾವಿಮರ್ಶಕಳಿಗೆ ನಿಜ ಕಲೆಯ ಕಾಣಿಕೆ! ಇದಕ್ಕಿಂತ ದೊಡ್ಡ ಕಾಣಿಕೆ ಉಂಟೆ?

ನಿವೇದಿತಾ ಇಹಲೋಕದ ವ್ಯಾಪಾರವನ್ನು ಮುಗಿಸುವಾಗ, ''ನಶ್ವರವಾದ ಈ ದೋಣಿಯು ಮುಳುಗುತ್ತಿದೆ. ಆದರೂ ನಾನು ಸೂರ್ಯೋದಯವನ್ನು ನೋಡುತ್ತೇನೆ'' ಎಂದು ಕಲಾಪೂರ್ಣವಾಗಿಯೂ, ಅರ್ಥಪೂರ್ಣವಾಗಿಯೂ ನುಡಿದು ಮೃತ್ಯುವನ್ನು ಗೆದ್ದಳು!

### ಗ್ರಂಥಋಣ:


1. *The Complete Works of Swami Vivekananda*
2. *Complete Works of Sister Nivedita*
೩. *'ಸೋದರಿ ನಿವೇದಿತಾ' – ಸ್ವಾಮಿ ನಿತ್ಯಸ್ಥಾನಂದ*
೪. *'ನಿವೇದಿತಾ' – ಡಾ. ಪ್ರಭುಶಂಕರ*
೫. *'ಸೋದರಿ ನಿವೇದಿತಾ' – ಪ್ರವ್ರಾಜಿಕಾ ಅಮಲಪ್ರಾಣಾ*
೬. *'ಸೋದರಿ ನಿವೇದಿತಾ' – ಡಾ.ಹೆಚ್.ಪಾಂಡುರಂಗ ವಿಠಲ*
7. *'Sister Nivedita' - Pravrajika Atmaprana* ❖

# ನಿವೇದಿತಾ ಕೃತಿ: 'Cradle Tales of Hinduism'

ಸ್ವರ್ಣಗೌರಿ

ಕಥೆ ಹೇಳುವ ಕಲೆ ಕೆಲವರಿಗೆ ಮಾತ್ರ ಕರಗತವಾಗಿರುತ್ತದೆ; ಅದರಲ್ಲೂ ಬರಹದ ಮೂಲಕ ಕಥೆಯನ್ನು ನಿರೂಪಿಸುವವರು ಇನ್ನೂ ಅಪೂರ್ವ. ನಿವೇದಿತಾ ಅತ್ಯುತ್ತಮ ಕಥಾನಿರೂಪಕಿ; ಅವಳ ಅನೇಕ ಕೃತಿಗಳಲ್ಲಿ ಇದಕ್ಕೆ ಉತ್ತಮ ನಿದರ್ಶನಗಳಿವೆ. ಈ ಕೃತಿಯುದ್ದಕ್ಕೂ ಭಾರತೀಯ ಪರಂಪರೆಯ ಕಥೆಗಳ ಸುಂದರ ನಿರೂಪಣೆಯಿದೆ. ಈ ಕುರಿತು ಬರೆದಿರುವ ಲೇಖಕಿ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು. ಅನೇಕ ಲೇಖನಗಳನ್ನು ಬರೆದಿರುವ ಅವರು ಕೆಲವು ಗ್ರಂಥಗಳನ್ನೂ ರಚಿಸಿದ್ದಾರೆ.




ಸ್ವಾಮಿ ವಿವೇಕಾನಂದರು ದಿವ್ಯ ಭಾರತಮಾತೆಯ ಪ್ರೇಮಾರಾಧನೆಗೆಂದು ಬಹುದೂರದಿಂದ ಅತಿಪ್ರಯಾಸದಿಂದ ಹುಡುಕಿ ತಂದ ಸುಗಂಧ ಕುಸುಮ ನಿವೇದಿತಾ. ಸ್ವಾಮೀಜಿಯವರ ವೀರೋಚಿತ ವ್ಯಕ್ತಿತ್ವಕ್ಕೆ ಮಾರುಹೋದ ಎಲಿಜಬೆತ್ ಮಾರ್ಗರೆಟ್ ನೋಬಲ್ ಭಾರತ ದೇಶದ ಪ್ರಜೆಗಳ ಪ್ರೀತಿಯ ಆಳಾಗಲು ಬಯಸಿ ಬಂದು ಸ್ವಾಮಿ ವಿವೇಕಾನಂದರ ಆಧ್ಯಾತ್ಮಿಕ ಪುತ್ರಿ ಹಾಗೂ ಪ್ರಿಯ ಶಿಷ್ಯೆ ಎಂಬ ಗೌರವಕ್ಕೆ ಪಾತ್ರಳಾದಳು. ಅವಳ ಎಲ್ಲ ಕೆಲಸ, ಎಲ್ಲ ಆಲೋಚನೆ ಮತ್ತು ಎಲ್ಲ ಭಾವನೆಗಳು ಭಾರತದ ಭರವಸೆ, ಆಕಾಂಕ್ಷೆ ಹಾಗೂ ಉದ್ದೇಶಗಳ ಸುತ್ತಲೇ ಸುತ್ತುತ್ತಿದ್ದವು. ''ಪ್ರಾಚೀನ ಋಷಿಯೊಬ್ಬರ ಮುಕ್ತ ಆತ್ಮವೊಂದು ಅವಳ (ಪಾಶ್ಚಿಮಾತ್ಯ) ದೇಹದಲ್ಲಿ ಪುನರ್ಜನ್ಮವೆತ್ತಿ, ಪಶ್ಚಿಮದ ಜೀವನದಿಂದ ಉಜ್ಜೀವನಗೊಂಡು, ಅವಳು ಮತ್ತೊಮ್ಮೆ ತನ್ನ ಪರಿಚಿತ ಪರಿಸರದಲ್ಲಿ ತನ್ನ ಪ್ರಾಚೀನ ಪ್ರೀತಿಯ ಜನರಿಗಾಗಿ ದುಡಿಯಲು ಅನುವಾಗಿರುವಂತೆ ಇತ್ತು'' ಎನ್ನುತ್ತಾರೆ ಸ್ವಾತಂತ್ರ್ಯ ಹೋರಾಟಗಾರ ಸುರೇಂದ್ರನಾಥ ಬ್ಯಾನರ್ಜಿ.

ಭಾರತದ ಕನಸೇ ನಿವೇದಿತಾಳ ಕನಸಾಗಿತ್ತು. ಭಾರತೀಯ ಮನಸ್ಸನ್ನು ತಿಳಿದು ಒಪ್ಪಿ, ಕ್ರೋಡೀಕರಿಸುವ ಅವಳ ಅದ್ಭುತ ಸಾಮರ್ಥ್ಯವನ್ನು ಅವಳ ಬರಹದ ಪ್ರತಿಯೊಂದು ಪದವೂ ಪ್ರಕಟಪಡಿಸುವುದು. ತನ್ನ ಬರಹ ಹಾಗೂ ಪ್ರಖರವಾದ ಭಾಷಣಗಳಿಂದ ಮಲಗಿದ್ದ ಭಾರತೀಯರನ್ನು ಎಚ್ಚರಿಸಿದಳು. ಅವರಲ್ಲಿ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಜಾಗೃತಗೊಳಿಸಲು ತನ್ನೆಲ್ಲ ಸಮಯ, ಸಾಮರ್ಥ್ಯಗಳನ್ನು ಉಪಯೋಗಿಸಿದಳು. ಈ ದಿಕ್ಕಿನಲ್ಲಿ ಅವಳ ಪರಿಶ್ರಮವನ್ನು ಕುರಿತು ರಾಸ್‌ಬಿಹಾರಿ ಘೋಷ್‌ರವರು ''ಶುಷ್ಕ ಅಸ್ಥಿಗಳು ಒಂದು ವೇಳೆ ಅಲುಗಾಡಲು ಪ್ರಾರಂಭಿಸಿದರೆ ಅದಕ್ಕೆ ಕಾರಣ, ನಿವೇದಿತೆಯು ಅವುಗಳಲ್ಲಿ ಪ್ರಾಣವಾಯುವನ್ನು ಸಂಚರಿಸುವಂತೆ ಮಾಡಿರುವುದೇ ಆಗಿದೆ'' ಎಂದಿದ್ದಾರೆ.

ತನ್ನ ಬರವಣಿಗೆಯಿಂದ ನಿವೇದಿತಾ ಪರಿಚಿತರ ಪರಿಧಿಯನ್ನು ವಿಸ್ತರಿಸಿದಳು. ಯುವಕರು ಅವಳನ್ನು ಹಿತೈಷಿಯಂತೆ, ಸ್ನೇಹಿತೆಯಂತೆ ಮತ್ತು ಮಾರ್ಗದರ್ಶಿಯಂತೆ ಕಾಣುತ್ತಿದ್ದರು. ಈ ಯುವಕರಿಗೆ ಅವಳು ತನ್ನಿಂದ ಸಾಧ್ಯವಾದ ಎಲ್ಲಾ ಸಹಾಯವನ್ನೂ ಮಾಡುತ್ತಿದ್ದಳು. ಅನೇಕ ಲೇಖನಗಳನ್ನು ಬರೆದು ವಾರ್ತಾಪತ್ರಿಕೆ ಮತ್ತು ಮಾಸಪತ್ರಿಕೆಗಳಿಗೆ ಕಳುಹಿಸುತ್ತಿದ್ದಳು. ಇದಲ್ಲದೆ ಅನೇಕ ಪುಸ್ತಕಗಳನ್ನು ಬರೆದಿರುವಳು. ಅವುಗಳ ಸಂಖ್ಯೆ ಹದಿನಾರರಷ್ಟಾಗುತ್ತದೆ. ಈ ಎಲ್ಲ ಕೃತಿಗಳೊಂದಿಗೆ ಸೋದರಿ ನಿವೇದಿತಾಳ ಅನೇಕ ಭಾಷಣಗಳನ್ನೂ, ಲೇಖನಗಳನ್ನೂ ಸಂಗ್ರಹಿಸಿ 'Complete works of Sister Nivedita' ಎಂದು ಐದು ಸಂಪುಟಗಳಲ್ಲಿ ಪ್ರಕಟಿಸಿರುವರು.

ತನ್ನ ಗುರುಗಳಾದ ಸ್ವಾಮಿ ವಿವೇಕಾನಂದರ ಕುರಿತು, 'ನಾ ಕಂಡಂತೆ ನನ್ನ ಗುರುದೇವ' ಹಾಗೂ ಅವರೊಡನೆ ಭಾರತದ ಪವಿತ್ರ, ಪುಣ್ಯಕ್ಷೇತ್ರಗಳ ಸಂದರ್ಶನ ಕುರಿತು 'Notes of some wanderings with Swami Vivekananda' ಎಂಬ ಪುಸ್ತಕದಲ್ಲಿ ತನ್ನ ಭಾವನೆಗಳನ್ನು ಸೊಗಸಾಗಿ ಚಿತ್ರಿಸಿದ್ದಾಳೆ. ಈ ಪುಸ್ತಕಗಳು

ನಮಗೆ ಸ್ವಾಮೀಜಿಯವರ ಉನ್ನತ ವ್ಯಕ್ತಿತ್ವದ ಪರಿಚಯವನ್ನು ಹತ್ತಿರದಿಂದ ಕಾಣಲು ಅನುವು ಮಾಡಿಕೊಡುತ್ತದೆ. ಉದಾಹರಣೆಗೆ, ''ನನ್ನನ್ನು ಹಡಗಿನ ಹತ್ತಿರ ಕಂಡ ದಿನದಿಂದ ಹಿಡಿದು ಗೋಧೂಳಿ ಸಮಯದ ಪ್ರಶಾಂತ ವೇಳೆಯಲ್ಲಿ ಪ್ರಪಂಚವೆಂಬ ಹಳ್ಳಿಯಿಂದ ದೇಹವೆಂಬ ವಸನವನ್ನು ಮಡಚಿಟ್ಟು ಹೋಗುವವರೆಗೆ ಅವರಲ್ಲಿ ಈ ಆಂತರಿಕ ಘರ್ಷಣೆಯನ್ನು ನೋಡುತ್ತಿದ್ದೆ, ಒಂದು ಪಂಜರದಲ್ಲಿ ಸಿಕ್ಕಿ ವ್ಯಥಾ ತಪ್ಪಿಸಿಕೊಳ್ಳಲು ಹೋರಾಡುವ ಕೇಸರಿಯಂತೆ.'' *(ಪು. ೨೬)*

''ನಾನು ವಿವೇಕಾನಂದರನ್ನು ಓದುವುದರ ಮೂಲಕ ಭಾರತವನ್ನು ಪ್ರೀತಿಸಲು ಕಲಿತೆ ಮತ್ತು ನಿವೇದಿತಾಳ ಬರಹಗಳಿಂದ ವಿವೇಕಾನಂದರನ್ನು ಅರ್ಥ ಮಾಡಿಕೊಂಡೆ'' ಎನ್ನುತ್ತಾರೆ ನೇತಾಜಿ ಸುಭಾಷ್ ಚಂದ್ರ ಬೋಸ್.

ಭಾರತೀಯ ಜೀವನ ಮತ್ತು ಆಲೋಚನೆಗಳನ್ನು ತಿಳಿಸುವ ಅವಳ ಮೂರು ಪ್ರಸಿದ್ಧ ಪುಸ್ತಕಗಳೆಂದರೆ 'The Web of Indian Life', 'Studies from an Eastern Home' ಮತ್ತು 'An Indian Study of Love and Death', ತಾನು ಅರ್ಥ ಮಾಡಿಕೊಂಡಂತೆ ಹಿಂದೂಧರ್ಮದ ಭಾವನೆಗಳನ್ನು 'Religion & Dharma', 'Lambs Among Wolves' ಎಂಬ ಪುಸ್ತಕದಲ್ಲಿ ಸೊಗಸಾಗಿ ಬರೆದಿರುವಳು. ಅವಳ ಹಿಮಾಲಯ ಪ್ರವಾಸದ ಮಾಹಿತಿ ನೀಡುವ ಪುಸ್ತಕವೆಂದರೆ 'Kedarnath and Badri narayan: A Piligrim's Dairy'. ಇವುಗಳಲ್ಲದೆ ಶಿಕ್ಷಣದ ಬಗ್ಗೆ, ಭಾರತದ ಇತಿಹಾಸದ ಬಗ್ಗೆ ಮತ್ತು ಭಾರತದ ರಾಷ್ಟ್ರೀಯ ಆದರ್ಶದ ಬಗ್ಗೆ ಬರೆದಿರುವಳು. ಇವು 'Hints on National Education in India','Footfalls of Indian History' ಹಾಗೂ 'Civic of National Ideas' ಎಂಬೀ ಪುಸ್ತಕಗಳಲ್ಲಿವೆ. ಇದಲ್ಲದೆ ಹಿಂದೂ ಪುರಾಣಶಾಸ್ತ್ರಗಳ ಬಗ್ಗೆ ದೇವ-ದೇವಿಯರ ಬಗ್ಗೆ ಸುಂದರ ಪುಸ್ತಕಗಳಾದ 'Kali the Mother','Shiva and Buddha', 'The Cradle Tales of Hinduism' ಮತ್ತು 'Myths and Legends of the Hindus and Buddhists' ಪ್ರಕಟಗೊಂಡವು.

ಕ್ರಿ.ಶ. ೧೯೦೬ ಜುಲೈನಲ್ಲಿ ಪೂರ್ವಬಂಗಾಳ ಮೊದಲು ಬರ ಪೀಡಿತವಾಗಿ, ಡಿಸೆಂಬರ್‌ನಲ್ಲಿ ಅತಿವೃಷ್ಟಿಗೆ ಒಳಗಾಯಿತು. ಜನರ ಕಷ್ಟದಿಂದ ಮೃದುಹೃದಯಿ ನಿವೇದಿತಾ ಮನನೊಂದು ಅಲ್ಲಿಗೆ ಹೋಗಿ ತನ್ನ ಕೈಲಾದ ಸೇವೆ ಸಲ್ಲಿಸಿದಳು. ಜನರೂ ಅವಳ ಈ ತ್ಯಾಗದಿಂದ ನಿಬ್ಬೆರಗಾಗಿ ಮನೆ, ಹೊಲ, ಬಂಧುಬಳಗ ಕಳೆದುಕೊಂಡ ದುಃಖವನ್ನು ಮರೆತು ಅವಳ ಪ್ರೀತಿಗೆ ಪ್ರತಿಸ್ಪಂದಿಸಿದರು. ತೀವ್ರ ಕಾರ್ಯ ಚಟುವಟಿಕೆಯಿಂದಾಗಿ ಮಲೇರಿಯಾ ಜ್ವರ ಪೀಡಿತಳಾದಳು. ಜೊತೆಗೆ ಹಿಂದಿನ ಮೆನೆಂಜೈಟಿಸ್ ಮರುಕಳಿಸಿ ಅವಳ ಆರೋಗ್ಯ ತೀರ ಹದಗೆಟ್ಟಿತು. ಆರೋಗ್ಯ ಸುಧಾರಿಸಿದ ನಂತರ ಬರವಣಿಗೆಯತ್ತ ಗಮನ ಹರಿಸಿದಳು. ಈ ಸಂದರ್ಭದಲ್ಲಿ ತಾನು ಪ್ರತಿತಿಂಗಳೂ ಬರೆಯುತ್ತಿದ್ದ 'ಪ್ರಬುದ್ಧ ಭಾರತ'ದ ಸಂಪಾದಕೀಯವಲ್ಲದೆ 'The Master As I saw Him','Cradle Tales of Hinduism' ಪುಸ್ತಕಗಳನ್ನು ಬರೆದಳು.

ನಿವೇದಿತೆಯ ಲೇಖನಗಳು ಗದ್ಯರೂಪದಲ್ಲಿದ್ದರೂ ಸಹ ಅವು ಸಹಜತೆ ಮತ್ತು ಕಾವ್ಯದ ತಾಜಾತನವನ್ನು ಹೊಂದಿರುತ್ತಿದ್ದವು. ಅವಳಿಗೆ ಭಾಷೆಯ ಮೇಲೆ ವಿಶೇಷ ಪ್ರಭುತ್ವವಿತ್ತು. ಭಾರತೀಯರಿಗೆ ಚಿರಪರಿಚಿತ ವಿಷಯಗಳ ಮೇಲೆ ಬರೆದರೂ ಸಹ ಓದುಗರಿಗೆ ಅದು ಸಾಮಾನ್ಯ ವಿಷಯಗಳೆಂದು ಅನಿಸುತ್ತಿರಲಿಲ್ಲ. ''ಅತಿ ಸಾಧಾರಣ ವಿಷಯಗಳೂ ಸಹ ಅವಳ ಲೇಖನಿಯಿಂದ ಮೂಡಿಬಂದಾಗ ಹೊಸ ಶಕ್ತಿ ಮತ್ತು ಶೋಭೆಯನ್ನು ಹೊಂದಿರುತ್ತಿದ್ದವು'' ಎನ್ನುವ ರಾಮಾನಂದ ಚಟರ್ಜಿಯವರು ನುಡಿಯ ಸತ್ಯಾಂಶವು ನಿವೇದಿತಾಳ ಕೃತಿಗಳನ್ನು ಓದಿದ ಯಾರಿಗಾದರೂ ವೇದ್ಯವಾಗದಿರಲು ಸಾಧ್ಯವಿಲ್ಲ.

''ಎಲ್ಲ ದೇಶಭಾಷೆಗಳಲ್ಲಿಯೂ ಮಹಾಕೃತಿಗಳನ್ನು ರಚಿಸಬೇಕಾಗಿದೆ. ಈ ಸಾಹಿತ್ಯ ಭೂತಕಾಲಕ್ಕೆ ಧ್ವನಿಯಾಗಬೇಕು, ವರ್ತಮಾನವನ್ನು ಅನುವಾದಿಸಬೇಕು ಹಾಗೂ ನಾಳಿನ ಭವಿಷ್ಯವನ್ನು ಮುಂಗಾಣಬೇಕು'' ಎನ್ನುವ ಸೋದರಿ ನಿವೇದಿತಾ ಭಾರತೀಯರ ನರನಾಡಿಯಾದ ರಾಮಾಯಣ, ಮಹಾಭಾರತವೆಂಬ ಮಹಾಕಾವ್ಯಗಳಿಂದ, ಪುರಾಣ, ಕಾಳಿದಾಸನ ಕುಮಾರಸಂಭವ ಇತ್ಯಾದಿಗಳಿಂದ ಆಯ್ದು ಬರೆದ ಕಥಾಸಂಕಲನವೇ 'Cradle Tales of Hinduism.' ಮಕ್ಕಳಿಗಾಗಿ ೩೩೧ ಪುಟಗಳಲ್ಲಿ ಮೂವತ್ತಮೂರು ಕಥೆಗಳುಳ್ಳ ಸುಂದರ ಕಥಾಗುಚ್ಛ. ಪುರಾತನ ಭಾರತೀಯರ ಆಚಾರ, ವ್ಯವಹಾರ, ಸಾಮಾಜಿಕ ಸ್ಥಿತಿ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಕಥೆಗಳಿವು.

ರಾಮಾಯಣ, ಮಹಾಭಾರತದಲ್ಲಿ ಬರುವ ನೂರಾರು ಪಾತ್ರಗಳು ಸಾವಿರಾರು ವರ್ಷಗಳಿಂದ ಹಿಂದೂಗಳಿಗೆ ಸಂಸ್ಕೃತಿಯ ಪುಣ್ಯನಿಧಿಯಾಗಿವೆ. ಇವೇ ಅವರ ಭಾವನೆ, ನೀತಿ ಧರ್ಮಗಳಿಗೆ ಮೂಲವಾಗಿವೆ. ರಾಮಾಯಣ, ಮಹಾಭಾರತಗಳೆರಡೂ ಪುರಾತನ ಆರ್ಯರ ಜೀವನ ಮತ್ತು ಧರ್ಮವನ್ನು ವಿವರಿಸುವ ವಿಶ್ವಕೋಶಗಳಾಗಿವೆ. ಪ್ರಪಂಚದಲ್ಲೇ ಮಹಾಭಾರತ ಅತಿ ದೊಡ್ಡ ಗ್ರಂಥ. ೧೮ ಪರ್ವಗಳುಳ್ಳ ಒಂದು ಲಕ್ಷ ಶ್ಲೋಕಗಳಿರುವ ಈ ಮಹಾಕಾವ್ಯ ಹೋಮರನ ಕಾವ್ಯ ಗ್ರೀಕರ ಮೇಲೆ ಯಾವ ಪ್ರಭಾವ ಬೀರಿತೋ ಅದೇ ರೀತಿಯ ಪ್ರಭಾವವನ್ನು ಭಾರತೀಯರ ಮೇಲೆ ಬೀರಿತು ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. ಈ ಮಹಾಕಾವ್ಯದಿಂದ ಸರ್ಪಗಳ ರಾಜ ತಕ್ಷಕ, ಪರೀಕ್ಷಿತ್ ರಾಜ, ಜನಮೇಜಯ, ಭೀಷ್ಮ, ಯುಧಿಷ್ಠಿರ ಇವರನ್ನು ಕುರಿತಂತೆ ಐದು ಕಥೆಗಳಿವೆ. ಸಾವಿತ್ರಿ ಹಾಗೂ ನಳ-ದಮಯಂತಿಯರ ಕಥೆಗಳೂ ಇವೆ. ಯುಧಿಷ್ಠಿರನ ನರಕ ದರ್ಶನದ ಕಥೆಯು ನಿಜಕ್ಕೂ ಓದುಗರಲ್ಲಿ ಕೊನೆಯವರೆಗೂ ಕುತೂಹಲ ಕೆರಳಿಸುತ್ತದೆ. ನಳದಮಯಂತಿಯರ ವಿಯೋಗ ಹಾಗೂ ಒಂದುಗೂಡುವಿಕೆಯ ದೃಶ್ಯಗಳ ವಿವರಣೆ ಅದ್ವಿತೀಯವಾದದ್ದು, ಓದುಗರನ್ನು ಯಾವುದೋ ಬೇರೆಯೇ ಲೋಕಕ್ಕೆ ಒಯ್ಯುತ್ತದೆ. ಮಕ್ಕಳಿಗೆ ಏಕೆ, ದೊಡ್ಡವರಿಗೂ ಸಹ ಕುತೂಹಲ ಕೆರಳುವಂತಿದೆ ಕಥಾಶೈಲಿ.

ನೂರಾರು ವರ್ಷಗಳಿಂದ ಸ್ತ್ರೀಯರ ವ್ಯಕ್ತಿತ್ವವನ್ನು ರೂಪಿಸುತ್ತಿರುವ, ಪ್ರಭಾವ ಬೀರುತ್ತಿರುವ, ಸ್ತ್ರೀಯರಿಗೆ ಆದರ್ಶವಾದ

ರಾಮಾಯಣದ ಆಧಾರದಿಂದ ಬರೆದ ನಾಲ್ಕು ಕಥೆಗಳಿವೆ. ಭಾರತೀಯರ ಆದರ್ಶಮೂರ್ತಿ ಸೀತೆಯ ಜೀವನದ ಸನ್ನಿವೇಶಗಳನ್ನು ಇಲ್ಲಿನ ನಿರೂಪಣೆ ಸೊಗಸಾಗಿ ಚಿತ್ರಿಸಿದೆ. ಶಾಂತಳಾದ, ಸಹಿಷ್ಣುತಾ ಮೂರ್ತಿಯಂತಿರುವ, ಪತಿವ್ರತೆಯಾದ, ನಿತ್ಯನಿರ್ಮಲಳಾದ ಸೀತೆಯಂತಾಗುವುದೇ ಪ್ರತಿಯೊಬ್ಬ ಭಾರತೀಯ ಸ್ತ್ರೀ ಆದರ್ಶ. ಶ್ರೀರಾಮನ ವನವಾಸ ನಿರ್ಗಮನ, ಸೀತಾಪಹರಣ, ರಾವಣನ ವಧೆ ಮುಂತಾದ ಎಲ್ಲ ಪ್ರಸಂಗಗಳು ಸುಲಲಿತ ಶೈಲಿಯಲ್ಲಿದ್ದು ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ. ಅಳಿಲಿನ ಸೇವೆಯ ವೃತ್ತಾಂತ ಮನಕ್ಕೆ ಮುದ ನೀಡುತ್ತದೆ. ರಾಮನ ಸಮಚಿತ್ತತೆ ಕುರಿತು ಸೊಗಸಾದ ನಿರೂಪಣೆ ಇದೆ. ದುಃಖಿತ ರಾಜ ದಶರಥನ ಹಿಂದೆ ನಿಂತ ರಾಣಿ ಕೈಕೇಯಿ ರಾಜ ತನಗಿತ್ತ ಎರಡು ವರಗಳ ಕುರಿತು ಹೇಳಿದಾಗ ಚಿಕ್ಕ ಪ್ರಾಯದ ರಾಮನ ಮುಖದಲ್ಲಿ ಒಂದೇ ಒಂದು ನೋವಿನ ಗೆರೆಯೂ ಮೂಡಲಿಲ್ಲವೆಂಬುದನ್ನು ಅದೆಷ್ಟು ಮನೋಜ್ಞ ವಾಗಿ ಚಿತ್ರಿಸಿದೆ ಎಂದರೆ ಓದುಗರ ಕಣ್ಮುಂದೆ ಆ ಪ್ರಶಾಂತ ರಾಮನ ಮುಖ ಮೂಡುತ್ತದೆ. ಉಮಾ ಹೈಮವತಿಯು ಶಿವನಿಗಾಗಿ ಮಾಡಿದ ತಪಸ್ಸಿನ ವೃತ್ತಾಂತದ ಕಥೆಯೂ ರಾಮಾಯಣ ಆಧಾರಿತವೇ.

ನಮ್ಮ ದೇಶದ ಧಾರ್ಮಿಕ ಸಾಹಿತ್ಯದಲ್ಲಿ ಪುರಾಣಗಳಿಗೆ ವಿಶಿಷ್ಟ ಸ್ಥಾನವಿದೆ. ಪುರಾಣಗಳಲ್ಲಿ ಮಹಾಪುರಾಣ ಶ್ರೀಮದ್ಭಾಗವತ. 'ಶ್ರೀಮದ್ಭಾಗವತಂ ಪುರಾಣಮಮಲಂ ಶ್ರೀಕೃಷ್ಣಲೀಲಾಮೃತಂ' – ಶ್ರೀಕೃಷ್ಣನ ಲೀಲಾಕಥನವೆಂಬ ಅಮೃತವನ್ನು ಹೊಂದಿರುವ ಭಾಗವತವು ಪುರಾಣಗಳಲ್ಲಿಯೇ ಪುಣ್ಯತಮವಾದದ್ದು ಎಂಬ ಪ್ರಸಿದ್ಧ ಉಕ್ತಿಯಿದೆ. ಪ್ರತಿಯೊಬ್ಬರಿಗೂ ತೃಪ್ತಿಯನ್ನು ನೀಡುವಂತಹ ಸುಂದರವಾದ ನುಡಿಗಳು ಪ್ರಪಂಚಕ್ಕೆ ಪ್ರಥಮ ಬಾರಿ ಬಂದದ್ದು ಶ್ರೀಕೃಷ್ಣನ ವದನದ ಮೂಲಕ. ಅದೇ ಹಿಂದೂಗಳೆಲ್ಲರಿಗೂ ಆಪ್ಯಾಯಮಾನವಾದ 'ಭಗವದ್ಗೀತೆ'. ಆ ಗೀತಾಚಾರ್ಯನ ಜನನ, ಬಾಲ್ಯ, ಲೀಲೆ, ಸಾರಥಿಯಾದ ವೃತ್ತಾಂತ ಹಾಗೂ ಇಹಲೀಲೆ ಸಮಾಪ್ತಿ ಇತ್ಯಾದಿ ವೃತ್ತಾಂತಗಳು ರೋಚಕವಾಗಿ ಹತ್ತು ಕಥೆಗಳಲ್ಲಿ ಮೂಡಿಬಂದಿದೆ. ಕಥೆಗಳಲ್ಲಿನ ವಿವರಗಳನ್ನು ಓದಿದಾಗ ವಿದೇಶಿ ಮಹಿಳೆಯೊಬ್ಬಳು ನಮ್ಮ ಮಹಾಕಾವ್ಯಗಳನ್ನು, ಪುರಾಣ, ಸ್ಮೃತಿಗಳ ದೀರ್ಘ ಹಾಗೂ ಕೂಲಂಕಷ ಅಧ್ಯಯನ ಮಾಡಿರುವುದು ನಿಜಕ್ಕೂ ಸೋಜಿಗವುಂಟುಮಾಡುತ್ತದೆ. ಇವನ್ನು ಬಹುಶಃ ಭಾರತೀಯರಲ್ಲೇ ಅನೇಕರು ಅಧ್ಯಯನ ಮಾಡಿರಲಾರರು. ನಮ್ಮ ದೇಶದ ರಾಣಿ ಯಾರೆಂದು ಒಮ್ಮೆ ನಿವೇದಿತಾ ಪ್ರಶ್ನಿಸಿದಾಗ ಅವಳ ಶಾಲೆಯ ಮಕ್ಕಳು 'ಎಲಿಜಬೆತ್' ಎಂದು ಉತ್ತರಿಸಿದ್ದರು. ಈ ಉತ್ತರದಿಂದ ನಿವೇದಿತಾ ಉದ್ವಿಗ್ನಳಾಗಿ, 'ಸೀತೆ' ನಮ್ಮ ದೇಶದ ರಾಣಿ ಎಂದು ಮಕ್ಕಳನ್ನು ತಿದ್ದುವಾಗ ಆ ಪವಿತ್ರಾತ್ಮಳ ಹೆಸರನ್ನು ಮತ್ತೆ ಮತ್ತೆ ಉಚ್ಚರಿಸುತ್ತಾ ಭಾವಪರವಶಳಾದಳು! ಆದರೆ ಈಗಲೂ ಈ ಪ್ರಶ್ನೆಗೆ ಮಕ್ಕಳು 'ಎಲಿಜಬೆತ್' ಎಂಬ ಉತ್ತರ ನೀಡುತ್ತಿರುವುದನ್ನು ಕೇಳಿದರೆ ನಿವೇದಿತಾಳ ಮನಸ್ಸಿಗೆ ಅದೆಷ್ಟು ನೋವಾಗಬಹುದೊ!

ಭಾಗವತ ಪುರಾಣದಿಂದ ಉಮೆ, ಸತಿಯ ಕಥೆಗಳು ಮೂಡಿಬಂದಿವೆ. ಇವಕ್ಕೆ ಹಿನ್ನೆಲೆಯಾಗಿ ಪ್ರಥಮತಃ ಶಿವನ ಜೀವನ ಕುರಿತ ಸೊಗಸಾದ ವಿವರಣೆಯಿದೆ. ಅನೇಕ ವ್ರತಾಚರಣೆಗಳ ಹಿಂದಿರುವ ಭಾವಾರ್ಥವನ್ನು ಗ್ರಹಿಸದೆ ಆಚರಿಸುತ್ತಿರುವುದರಿಂದ ಭಾರತದಲ್ಲಿ ಅವು ಮೂಢನಂಬಿಕೆಗಳಾಗಿ ಪರಿವರ್ತಿತವಾಗಿವೆ. ಆದರೆ ನಿವೇದಿತೆಯ ತೀಕ್ಷ್ಣ ಬುದ್ಧಿಯು ಆ ಆಚರಣೆಗಳ ಹಿಂದಿರುವ ಭಾವಾರ್ಥವನ್ನು ಗ್ರಹಿಸಿದ್ದಲ್ಲದೆ, ಬರವಣಿಗೆಯಲ್ಲೂ ಅದು ಮೂಡಿ ಬಂದಿದೆ. ಉದಾಹರಣೆಗೆ, ಉಮಾ ಹೈಮವತಿಯ ಕಥೆಯಲ್ಲಿ ಭಾರತೀಯ ಸ್ತ್ರೀಯರು ಚಿನ್ನದ ನೂಪುರವನ್ನು ಕಾಲಿಗೆ ಏಕೆ ಧರಿಸುವರು ಎಂಬುದನ್ನು ಪು. ೫೩ ರಲ್ಲಿ ವಿವರಿಸಿದೆ. ಇದು ನಿಜಕ್ಕೂ ಶ್ಲಾಘನೀಯ ಅಂಶ. ಬಾಲಕ ಭಕ್ತರಾದ ಪ್ರಹ್ಲಾದ, ಧ್ರುವನ ಕಥೆಗಳಂತೂ ಮಕ್ಕಳಿಗೆ ಆದರ್ಶಪ್ರಾಯವಾದವು. ವಿಷ್ಣುಪುರಾಣದಿಂದ ಆಯ್ದ ಈ ಎರಡು ಕಥೆಗಳು ಮಕ್ಕಳೇ ಏಕೆ, ದೊಡ್ಡವರ ಮನಸ್ಸು, ಹೃದಯಗಳನ್ನು ಅಪಹರಿಸುವಂತೆ ಮೂಡಿಬಂದಿದೆ. ಉದಾಹರಣೆಗೆ ಪು.೨೫೬–೫೭ರಲ್ಲಿ ತಂದೆ–ಮಗನ ನಡುವಿನ ಸಂಭಾಷಣೆ ಕುತೂಹಲ ಕೆರಳಿಸುತ್ತದೆ. ಗುರುಕುಲದಲ್ಲಿ ಬಾಲಕ ಪ್ರಹ್ಲಾದನಿಗೆ ತನ್ನ ತಂದೆ ಹಿರಣ್ಯಕಶಿಪುವನ್ನೇ ಪೂಜಿಸಬೇಕೆಂಬ ತರಬೇತಿ ಕೊಡುವುದರಲ್ಲಿ ಸೋತ ಗುರುಗಳು ಬಾಲಕನನ್ನು ತಂದೆಯ ಬಳಿಗೆ ಹಿಂದಿರುಗಿಸಿ ಕಳುಹಿಸಿಬಿಟ್ಟರು. ಓದುಗರಲ್ಲಿ ಕುತೂಹಲ ಕೆರಳಿಸಲು ಅದರ ಅನುವಾದವನ್ನಿಲ್ಲಿ ನೀಡಲಾಗಿದೆ:

ಹಿರಣ್ಯಕಶಿಪು: ''ನೀನು ಕೃಷ್ಣನನ್ನು ಪೂಜಿಸುತ್ತಿದ್ದೀಯಂತೆ, ಹೌದೆ?''

ಅವನು ಹೀಗೆ ಗರ್ಜಿಸಿದಾಗ, ಆಗತಾನೇ ತನ್ನ ಪಾಠಶಾಲೆಯಿಂದ ಕರೆತರಲಾಗಿದ್ದ ಪುಟ್ಟ ಬಾಲಕ ಪ್ರಹ್ಲಾದ, ಸಿಂಹಾಸನದ ಮುಂದೆ ನಿಂತು, ''ಹೌದಪ್ಪಾ, ಹಾಗೆ ಮಾಡಿದೆ'' ಎಂದ.

''ಇನ್ನು ಮುಂದೆ ಹಾಗೆ ಮಾಡಲಾರೆ ಅಂತ ನೀನು ಪ್ರತಿಜ್ಞೆ ಮಾಡಿ ಹೇಳುವೆಯಾ?'' ಎಂದು ರಾಜ ಕೇಳಿದ. ಅವನ ಕಿರೀಟದ ಮಣಿಗಳು ಮಿನುಗುತ್ತಿದ್ದಂತೆ, ಅವನ ನೋಟ ಭಯಂಕರವಾಗಿತ್ತು. ''ಇಲ್ಲಪ್ಪಾ, ನಾನು ಹಾಗೆ ಪ್ರತಿಜ್ಞೆ ಮಾಡಲಾರೆ'' ಎಂದ ಪ್ರಹ್ಲಾದ.

''ಏನು, ಪ್ರತಿಜ್ಞೆ ಮಾಡಲಾರೆಯಾ?'' ಎಂದು ಅವನ ತಂದೆ ಕೋಪದಿಂದ ನುಡಿದ. ಹುಡುಗನ ಧೈರ್ಯ ಅವನನ್ನು ಕಂಗೆಡಿಸಿತು. ''ನಿನ್ನನ್ನು ಈಗಲೇ ಕೊಂದುಬಿಡುತ್ತೇನೆ'' ಎಂದ.

''ಅದೇ ಕೃಷ್ಣನ ಇಚ್ಛೆಯಾಗಿದ್ದರೆ ಹಾಗೇ ನಡೆಯುವುದು. ಇಲ್ಲದಿದ್ದರೆ ಇಲ್ಲ.'' ಎಂದ ಪ್ರಹ್ಲಾದ. ''ಇರಲಿ, ಕಾದು ನೋಡೋಣ'' ಎಂದ ಹಿರಣ್ಯಕಶಿಪು. ತನ್ನ ಮಗನನ್ನೇ ಸಮುದ್ರಕ್ಕೆಸೆದು, ಅವನ ಮೇಲೆ ಕಲ್ಲುಬಂಡೆಗಳ ರಾಶಿ ಹಾಕಲು ಅವನು ತನ್ನ ಬಂಟರಿಗೆ ಆಜ್ಞಾಪಿಸಿದ..

ಪ್ರಾಚೀನ ಕಾಲದಲ್ಲಿನ ನ್ಯಾಯ, ನೀತಿ, ಧರ್ಮಗಳ ಬಗ್ಗೆ ತಿಳುವಳಿಕೆ ನೀಡುವ ಸ್ವಾರಸ್ಯಕರವಾದ ರಾಜರ ಕಥೆಗಳೂ ಇವೆ. ಗಿಡುಗನಿಂದ ಪಾರಿವಾಳವನ್ನು ರಕ್ಷಿಸಲು, ಶರಣಾಗಿ ಬಂದ ಪಾರಿವಾಳಕ್ಕಾಗಿ ತನ್ನ ದೇಹದ ಮಾಂಸವನ್ನೇ ಕೊಡಲು ತಯಾರಿದ್ದ ರಾಜ ಶಿಬಿಯ ಕಥೆ, 'ಮುಂದೇನಾಗುವುದೊ!' ಎಂಬ ಕುತೂಹಲ ಕೆರಳಿಸುವ ಸಂಭಾಷಣೆ ಮಕ್ಕಳ ಮನಸ್ಸನ್ನು ಮಂತ್ರಮುಗ್ಧಗೊಳಿಸುತ್ತದೆ. ಆಸೆಯೇ ಪುನರ್ಜನ್ಮಕ್ಕೆ ಕಾರಣ ಎಂಬ ತತ್ತ್ವ ತಿಳಿಸುವ ಭರತ ರಾಜನ ಕಥೆ: ಪುಟ್ಟ ಜಿಂಕೆಗಾಗಿ ರಾಜನಾದರೂ ಸಹ ಭರತ ಮತ್ತೆರಡು ಬಾರಿ ಜನ್ಮವೆತ್ತಿ ಬರಬೇಕಾದ ಪ್ರಸಂಗ ಮನೋಜ್ಞವಾಗಿದೆ. ಭಾರತೀಯ

ರಲ್ಲಿ ಮನೆಮಾತಾಗಿರುವ ಉಜ್ಜಯನಿಯ ರಾಜ ವಿಕ್ರಮಾದಿತ್ಯನ ಕಥೆ ಹಾಗೂ ಪೃಥ್ವಿರಾಜನ ಕಥೆಗಳೂ ಸೇರಿ ನಮ್ಮ ಪೂರ್ವಿಕರ ಕಿರು ಪರಿಚಯ ಮಕ್ಕಳಿಗೆ ಮಾಡಿಕೊಡಲಾಗಿದೆ, ಮುಂದೆರಡು ಕಥೆ ಗಳಲ್ಲಿ. ಹಿಂದೂ ರಾಜರುಗಳಲ್ಲಿ ಕೊನೆಯವನಾದ ಪೃಥ್ವಿರಾಜ ಹಾಗೂ ರಾಣಿ ಸಂಯುಕ್ತೆಯ ಸ್ವಯಂವರ ಮತ್ತು ಸತಿ ಸಹಗಮನದ ಪ್ರಸಂಗಗಳ ಸುಂದರ ನಿರೂಪಣೆ ಓದುತ್ತಾ ಹೋದಂತೆ, ಇದು ಕಥೆ ಎಂಬುದು ಮರೆತು ಆ ಕಥಾಲೋಕದ ಪಾತ್ರಗಳು ನೈಜವಾಗುತ್ತವೆ.

ಒಟ್ಟಿನಲ್ಲಿ ಇದೊಂದು ಸಂಗ್ರಹಯೋಗ್ಯ ಕೃತಿ. ವಿದೇಶಿ ಮಹಿಳೆ ಯೊಬ್ಬಳ ದೃಷ್ಟಿಕೋನದಿಂದ ಭಾರತೀಯ ಸಂಸ್ಕೃತಿಯ ಪರಿಚಯ ಇಷ್ಟು ರಸವತ್ತಾಗಿ, ಸುಲಲಿತವಾಗಿ ಓದಿಸಿಕೊಂಡು ಹೋಗುವ ಇಂಗ್ಲಿಷ್ ಭಾಷೆಯಲ್ಲಿ ವರ್ಣಿಸಿರುವ ಹೊತ್ತಗೆ ಮತ್ತೊಂದಿಲ್ಲ ವೆನಿಸುತ್ತದೆ. ಮಕ್ಕಳಿಗಂತೂ ಇದೊಂದು ರೋಚಕವಾದ ಪುಸ್ತಿಕೆ. ಸೋದರಿ ನಿವೇದಿತಾ ಉಪನಿಷತ್ತಿನಲ್ಲಿ ಬರುವ ಕಥೆಗಳನ್ನು ಹೀಗೆ ಸಂಗ್ರಹಿಸಬಾರದಿತ್ತೇ ಎಂಬ ಅನಿಸಿಕೆ ಮೂಡದಿರಲು ಸಾಧ್ಯವಿಲ್ಲ. ಅನೇಕ ವರ್ಷಗಳಿಂದ ಅನೇಕರಿಗೆ ಸ್ಫೂರ್ತಿದಾಯಕವಾದ ಈ ಪುಸ್ತಕ ವನ್ನು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ, ಕಾಲೇಜಿನ ವಿದ್ಯಾರ್ಥಿ ಗಳಿಗೆ ಹಾಗೂ 'ಶಾಲೆಗಳಿಗೆ ಮೌಲ್ಯಾಧಾರಿತ ಶಿಕ್ಷಣ' ಎಂಬ ಯೋಜನೆಯಡಿಯಲ್ಲಿ ೮ ರಿಂದ ೧೨ನೇ ತರಗತಿಯ ಮಕ್ಕಳಿಗೆ ಕೇಂದ್ರ ಸರ್ಕಾರದ ಆರ್ಥಿಕ ಬೆಂಬಲದಿಂದ, ಕೇವಲ ರೂ. ೧೩/– ಬೆಲೆಗೆ ಪುಸ್ತಕ ಲಭ್ಯವಾಗಿತ್ತು. ಸ್ವಾಮಿ ವಿವೇಕಾನಂದರ ೧೫೦ ನೇ ಜನ್ಮದಿನೋತ್ಸವದ ಅಂಗವಾಗಿ, ಈ ಪುಸ್ತಕದ ಮೂಲಬೆಲೆ ರೂ. ೭೦/–. ೩೩೧ ಪುಟಗಳಿರುವ ೨೦ಕ್ಕೂ ಹೆಚ್ಚು ಆಕರ್ಷಕ ಚಿತ್ರಗಳುಳ್ಳ, ಭಾರತೀಯ ಸಂಸ್ಕೃತಿ, ಅಧ್ಯಾತ್ಮಗಳಿಗೆ ಕನ್ನಡಿಯಂತಿರುವ ಇದಕ್ಕೆ, ಈ ಬೆಲೆಯೂ ಸಹ ಅತ್ಯಂತ ಕಡಿಮೆ ದರವೇ ಎನ್ನಬಹುದು. ಇಲ್ಲಿಯವರೆಗೆ ಈ ಪುಸ್ತಕದ ಸಾವಿರಾರು ಪ್ರತಿಗಳು ಮಾರಾಟ ವಾಗಿವೆ. ಅದ್ವೈತ ಆಶ್ರಮ, ಕೊಲ್ಕತ್ತಾದಿಂದ ಪ್ರಕಟವಾದ ಈ ಕೃತಿಯ ಮುಖಪುಟದ ವಿನ್ಯಾಸ ಶ್ರೀಯುತ ವಿಶ್ವರಂಜನ್ ಚಕ್ರ ವರ್ತಿಗಳಿಂದ ರಚಿಸಲ್ಪಟ್ಟಿದೆ. ಈ ಬರವಣಿಗೆಯಲ್ಲಿ ಸಹಾಯಹಸ್ತ ನೀಡಿದ ಶ್ರೀರಾಮಕೃಷ್ಣರ ಸ್ತ್ರೀಭಕ್ತರಲ್ಲಿ ಅಗ್ರಗಣ್ಯಳಾದ ಯೋಗಿನ್ ಮಾ ಹಾಗೂ ಶ್ರೀರಾಮಕೃಷ್ಣರ ನೇರಶಿಷ್ಯರಾದ ಸ್ವಾಮಿ ಶಾರದಾ ನಂದರಿಗೆ ತನ್ನ ಕೃತಜ್ಞತೆ ಸಲ್ಲಿಸುವಲ್ಲಿ ಸೋದರಿಯ ವಿನಯ ವಂತಿಕೆಯ ಪರಿಚಯವಾಗುತ್ತದೆ.

ಭಾರತೀಯ ಹೆಣ್ಣುಮಕ್ಕಳು ಅವಿದ್ಯಾವಂತರೆ? ಹಾಗಾದರೆ ಪ್ರತಿಯೊಂದು ಭಾರತೀಯ ತಾಯಿ, ಅಜ್ಜಿ ತನ್ನ ಮಕ್ಕಳು, ಮೊಮ್ಮಕ್ಕ ಳಿಗೆ ರಾಮಾಯಣ, ಮಹಾಭಾರತ, ಪುರಾಣಗಳಿಂದ ಕಥೆಗಳನ್ನು ಉದಾಹರಿಸುವುದೇನು ಅವಿದ್ಯಾವಂತರ ಲಕ್ಷಣವೇನು? ಬರವಣಿ ಗೆಯೇ ಸಂಸ್ಕೃತಿಯ ಲಕ್ಷಣವಲ್ಲ, ಅದೊಂದು ಆಕಸ್ಮಿಕ ಫಲಿತಾಂಶ ವಷ್ಟೆ ಎನ್ನುವ ಸೋದರಿ ನಿವೇದಿತಾಳಲ್ಲಿ ನಮ್ಮ ಸಂಸ್ಕೃತಿಯ ಬಗ್ಗೆ ಇರುವ ಒಲವಿನ ಪರಿಚಯವಾಗುತ್ತದೆ. ಯಾರ ಅರಿವಿಗೂ ಬಾರದ ಮುಂಜಾನೆಯ ಹಿಮಮಣಿ ಅತಿ ಸುಂದರವಾದ ಗುಲಾಬಿಯನ್ನು ಅರಳಿಸುವಂತೆ ಓದುಗರ ಮೇಲೆ ಪ್ರಭಾವ ಬೀರುವ ಇದು ಒಟ್ಟಿನಲ್ಲಿ ಒಂದು ಸಂಗ್ರಹಯೋಗ್ಯ ಕೃತಿ. ❖

# ‘ಭಾರತೀಯ ರಾಷ್ಟ್ರೀಯ ಶಿಕ್ಷಣದ ಬಗ್ಗೆ ಕೆಲವು ಸೂಚನೆಗಳು’

## ನಿವೇದಿತಾ ಅವರ ‘*Hints on National Education in India*’ ಗ್ರಂಥವನ್ನು ಕುರಿತು

**ಪ್ರವ್ರಾಜಿಕಾ ಯೋಗಾತ್ಮಪ್ರಾಣಾ**



ಭಾರತದಲ್ಲಿ ಹೊಸ ಬಗೆಯ ಶಿಕ್ಷಣವನ್ನು ಕುರಿತು ನಿವೇದಿತಾ ಅತ್ಯಂತ ಕ್ರಿಯಾತ್ಮಕವಾಗಿ ಚಿಂತಿಸಿದ್ದಳು. ತನ್ನ ಚಿಂತನೆಗಳಿಗೆ ಮೂರ್ತರೂಪ ಕೊಡುವಂತೆ, ತಾನೇ ಒಂದು ಹೆಣ್ಣುಮಕ್ಕಳ ಶಾಲೆಯನ್ನು ತೆರೆದು ಅಲ್ಲಿ ತನ್ನ ಶೈಕ್ಷಣಿಕ ವಿಚಾರಗಳನ್ನು ಆಚರಣೆಗೆ ತರಲು ಯತ್ನಿಸಿದ್ದಳು. ಈ ವಿಷಯಕ್ಕೆ ಸಂಬಂಧಿಸಿದಂತೆ ಬರೆದಿರುವ ಲೇಖಕಿ, ಶ್ರೀಶಾರದಾ ಮಠದ ಶೈಕ್ಷಣಿಕ ಸೇವಾಕೇಂದ್ರವಾದ ಜುಂಜರಾಮನ ಹಳ್ಳಿಯಲ್ಲಿರುವ ನಿವೇದಿತಾ ವಿದ್ಯಾಪೀಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**‘ಭಾರತೀಯ ರಾಷ್ಟ್ರೀಯ ಶಿಕ್ಷಣದ ಬಗ್ಗೆ ಕೆಲವು ಸೂಚನೆಗಳು’ (Hints on National Education in India)** - ಈ ಪುಸ್ತಕವು ಸೋದರಿ ನಿವೇದಿತೆಯ ಕೆಲವು ಲೇಖನಗಳ ಸಂಕಲನ. ಶಿಕ್ಷಣದ ಬಗ್ಗೆ ಅವಳ ಸಮಗ್ರ ನಿಲುವನ್ನು ತಿಳಿಸುವ ಈ ಪುಸ್ತಕವು ಈಗಲೂ ಅಂದರೆ ೧೧೦ ವರ್ಷಗಳ ನಂತರವೂ ವಿಚಾರ ಯೋಗ್ಯವಾಗಿದೆ ಅಲ್ಲದೇ ಅವಳ ದೂರದೃಷ್ಟಿಯನ್ನು ಸ್ಪಷ್ಟವಾಗಿ ಎತ್ತಿ ತೋರುತ್ತದೆ. ಸೋದರಿಯು ಹೇಳಿರುವ ಕೆಲವು ವಿಚಾರಗಳು ಈಗಲೂ, ಹಲವು ಕ್ಷೇತ್ರಗಳಲ್ಲಿ ಇಂದಿಗೆ ಇನ್ನೂ ಹೆಚ್ಚು ಅನುಷ್ಠಾನ ಯೋಗ್ಯವಾಗಿವೆ.

**ಪ್ರಾಥಮಿಕ ಶಿಕ್ಷಣ : ‘ಮೊದಲ ಹೆಜ್ಜೆ ಇಡುವವರಿಗೊಂದು ಕರೆ’** ಎಂಬ ಲೇಖನದಲ್ಲಿ ಸೋದರಿಯು ಹೇಳುವ ವಿಚಾರಗಳಲ್ಲಿ ಕೆಲವು ಇಂತಿವೆ: ‘‘ಭವ್ಯಭಾರತದ ಭವಿಷ್ಯವು ವಿದ್ಯಾಭ್ಯಾಸದ ಮೇಲೆಯೇ ನಿಂತಿದೆ. ಲೌಕಿಕ ವಿದ್ಯೆ, ತಾಂತ್ರಿಕ ವಿದ್ಯೆ, ಎರಡೂ ಆವಶ್ಯಕ. ವಿದ್ಯಾಭ್ಯಾಸದ ಮೂಲಕ ನಾವು ದೇಶದ ಐಕ್ಯಮತ್ಯವನ್ನು ಸಾಧಿಸಬಹುದು. ‘ಜನತೆ’ಯ ವಿದ್ಯಾಭ್ಯಾಸವೆಂದರೆ ಓದು-ಬರಹ-ಲೆಕ್ಕ. ಇದನ್ನು ನಮ್ಮ ಸಣ್ಣ ಪ್ರಯತ್ನದಿಂದ ಪ್ರಾರಂಭಿಸಬೇಕು. **ನಮ್ಮ ಪ್ರಯತ್ನವು** ಯಾವುದೇ ಹೊರಗಿನ ಆಗು-ಹೋಗುಗಳಿಂದ ಪ್ರಭಾವಿತವಾಗುವುದಿಲ್ಲವಾದ್ದರಿಂದ ಆ ಬಲವು ಯಾವುದೇ ಕೇಂದ್ರೀಕೃತ ಸಂಘಟನೆಗಿಂತ ಅನಂತ ಪಾಲು ಹೆಚ್ಚು ಫಲದಾಯಕವಾದದ್ದು.’’ ಇಲ್ಲಿ ನಿವೇದಿತೆಯು **ನಮ್ಮ ಪ್ರಯತ್ನ** ಎಂಬ ಪದ ಬಳಸಿ ಸ್ವ-ಇಚ್ಛೆಯಿಂದ ಸೇವೆ ಸಲ್ಲಿಸುವವರ ನಿಸ್ವಾರ್ಥವಾದ ಸಣ್ಣ ಹೆಜ್ಜೆಯೂ ಕೂಡ ಸರ್ಕಾರದ ಯಾವುದೇ ಹಿರಿಯ ಯೋಜನೆಗಿಂತ ಹೆಚ್ಚು ಎನ್ನುವ ಅಭಿಮತವನ್ನು ವ್ಯಕ್ತಪಡಿಸಿದ್ದಾಳೆ.

ನಿವೇದಿತೆಯು ‘‘ಶಿಕ್ಷಣ ನೀಡುವುದು ನಮ್ಮ ಪವಿತ್ರ ಕರ್ತವ್ಯಗಳಲ್ಲೊಂದು ಹಾಗೂ ಶಿಕ್ಷಣವು ನಮ್ಮ ನಾಗರಿಕತೆಯ ಮೂಲಗಳ

ಲ್ಲೊಂದು ಎಂಬ ಭಾವನೆಯನ್ನು ನಮ್ಮ ಜನರಲ್ಲಿ ಬೆಳಸಬೇಕು'' ಎನ್ನುತ್ತಾಳೆ. ಶಿಕ್ಷಣವನ್ನು ಜನತೆಗೆ ತಲುಪಿಸಲು ಯೋಜನೆಯೊಂದನ್ನು ಉತ್ತಮ ಉದಾಹರಣೆಯ ಮೂಲಕ ನೀಡುತ್ತಾಳೆ– ''ಕೆಲವೊಂದು ದೇಶಗಳಲ್ಲಿ ಯುವಕರು ವಿದ್ಯಾಭ್ಯಾಸ ಮುಗಿಸಿದ ನಂತರ ಸೇನೆಗೆ ಸೇರಿ, ಕೆಲವು ವರ್ಷ ಅಲ್ಲಿ ಸೇವೆ ಸಲ್ಲಿಸುವುದು ಕಡ್ಡಾಯ. ಯುವಕನೊಬ್ಬ ತನ್ನ ಅವಧಿಯನ್ನು ಮುಗಿಸಿ ಹೊರ ಬರುವಷ್ಟರಲ್ಲಿ ಯುದ್ಧವಿದ್ಯೆಯನ್ನು ಕಲಿತಿರುತ್ತಾನೆ. ಅಲ್ಲದೇ ಇಡೀ ಜೀವನ ಆತನು ಯುದ್ಧದ ಕರೆಗೆ ಸಜ್ಜಾಗಿಯೇ ಇರುತ್ತಾನೆ. ಹಾಗೆಯೇ ನಾವೇಕೆ ಒಂದು ಶಿಕ್ಷಣ ಸೇನೆಯನ್ನು ಸಜ್ಜುಗೊಳಿಸಬಾರದು? ಅದು ಅಸಾಧ್ಯವಾದದ್ದೇನಲ್ಲ.. ಪ್ರತಿಯೊಬ್ಬ ವಿದ್ಯಾರ್ಥಿಯೂ ತನ್ನ ವಿದ್ಯಾಭ್ಯಾಸ ಮುಗಿಸಿದ ನಂತರ ೩ ವರ್ಷಗಳನ್ನು ಸಾಮಾನ್ಯರಿಗೆ ಶಿಕ್ಷಣ ನೀಡಲು ಮುಡಿಪಾಗಿಡುವುದು. ಇಂತಹ ಯುವಕರನ್ನು ಹಳ್ಳಿಯ ಜನರು ಸುಲಭವಾಗಿಯೇ ಸಾಕಬಲ್ಲರು. ತನ್ನ ಅವಧಿ ಮುಗಿದಾಗ ಈ ಯುವಕ ತನಗೆ ಪರಿಚಯವಿರುವ ಇತರ ವಿದ್ಯಾರ್ಥಿಗಳನ್ನು ಆ ಸ್ಥಳಕ್ಕೆ ಪರಿಚಯಿಸುವುದು. ಕೆಲವರು ಹಳ್ಳಿಯ ಜೀವನವನ್ನು ಇಷ್ಟಪಟ್ಟು ಅಲ್ಲಿಯೇ ನೆಲಸಲೂಬಹುದು. ಆಗ 'ಕಲಿಸುವವ ಮತ್ತು ಕಲಿಯುವವ' ಸಮಾಜದ ಒಂದು ಉತ್ತಮ ಅಂಗವಾಗಬಲ್ಲರು!''

ಇಷ್ಟು ಹೇಳಿ ನಿವೇದಿತಾ ಇನ್ನೂ ಒಂದು ಸಲಹೆಯನ್ನು ನೀಡುತ್ತಾಳೆ. ''ಕಲಿತವನಿಗೆ, ತಾನೂ ಸಹ ಮತ್ತೊಬ್ಬರಿಗೆ ಕಲಿಸಬೇಕು ಎಂಬ ಜವಾಬ್ದಾರಿಯ ಬಗ್ಗೆಯೂ ಅರಿವು ನೀಡಬೇಕು ಮತ್ತು ಆ ಅರಿವು ಮುಂದುವರಿಯಬೇಕು. ಇದು ನಾವು ಎಲ್ಲಿ ಎಡವಿದ್ದೇವೆ ಎಂಬುದರ ಬಗ್ಗೆಯೂ ಕಣ್ಣು ತೆರೆಸುತ್ತದೆ. ಸರ್ಕಾರ, ಸಂಸ್ಥೆಗಳು, ಎಲ್ಲಕ್ಕಿಂತ ಹೆಚ್ಚಾಗಿ ಸ್ವಯಂಪ್ರೇರಿತ–ವ್ಯಕ್ತಿಗಳು ಈ ನಿಟ್ಟಿನಲ್ಲಿ ನಿಸ್ವಾರ್ಥವಾಗಿ ಶ್ರಮಿಸಿದ್ದರೂ ಕೂಡ, ಪ್ರತಿಯೊಬ್ಬ ವ್ಯಕ್ತಿಯೂ ತಾನು ಪಡೆದದ್ದನ್ನು ಸಮಾಜಕ್ಕೆ ಮತ್ತೊಂದು ರೀತಿಯಲ್ಲಿ ಹಿಂದಿರುಗಿಸಬೇಕು; ಇದೊಂದು ಜವಾಬ್ದಾರಿ ಎಂಬ ಭಾವನೆಯನ್ನು ಬಿತ್ತುವುದರಲ್ಲಿ ಬಹುಶಃ ನಾವು ಸೋತಿದ್ದೇವೆ. ಇದರ ಕಡೆಗೆ ಎಲ್ಲರ ಗಮನ ಸೆಳೆಯುವುದು ಅತ್ಯಗತ್ಯವಾಗಿದೆ. ಏಕೆಂದರೆ ದೇಶದ ಸಂಪತ್ತನ್ನೆಲ್ಲಾ ಸುರಿದು ಒಬ್ಬ ವ್ಯಕ್ತಿಯನ್ನು ಎಲ್ಲ ರೀತಿಯಲ್ಲಿ ಶ್ರೀಮಂತನನ್ನಾಗಿಸಲು ಪ್ರಯತ್ನಪಟ್ಟರೂ, ಪಡೆದವನು ಅದನ್ನು ಇನ್ನೊಬ್ಬರಿಗೆ ಹರಿಸುವ, ಹಂಚಿಕೊಳ್ಳುವ ಜವಾಬ್ದಾರಿಯಲ್ಲಿ ಬಡವನಾದರೆ ಏಳ್ಗೆ ಎಲ್ಲಿಂದ?''

ಶಿಕ್ಷಣದ ಬಗ್ಗೆ ಬರೆದಿರುವ ಐದು ಪ್ರಬಂಧಗಳಲ್ಲಿ ನಿವೇದಿತೆಯು ಕೆಲವು ವಿಷಯಗಳನ್ನು ಹೀಗೆ ಮಂಡಿಸಿದ್ದಾಳೆ – ''ಚರಿತ್ರೆಯ ಬೇರೆ ಬೇರೆ ಕಾಲಗಳಲ್ಲಿ ದೇಶವು ಅಂದಿನ ಕಾಲಕ್ಕೆ ಅಗತ್ಯವಾದದ್ದನ್ನು (ಬೇರೆ ಬೇರೆ ತರಬೇತಿಗಳನ್ನು) ತಮ್ಮ ಮಕ್ಕಳಿಗೆ ಆರಿಸಿ ಕೊಡುತ್ತದೆ.. ಉದಾಹರಣೆಗೆ, ಬಂಗಾಳದಲ್ಲಿ ಗುಪ್ತರ ಕಾಲದಲ್ಲಿ ಸಂಸ್ಕೃತದ ನವೋದಯವಾಗಿತ್ತು. ಆಗ ಸಂಸ್ಕೃತ ಭಾಷೆ ಮತ್ತು ಸಾಹಿತ್ಯವೇ ಸಭ್ಯತೆಯ ಕುರುಹಾಗಿತ್ತು. ಸಾವಿರ ವರ್ಷಗಳ ನಂತರ ಅದೇ ಸ್ಥಾನದಲ್ಲಿದ್ದ ಒಬ್ಬ ಮನುಷ್ಯ ಸಂಸ್ಕೃತದೊಂದಿಗೆ ಪರ್ಷಿಯನ್ ಭಾಷೆಯನ್ನೂ ಸಹ ಕಲಿತಿರಬೇಕಾಗಿತ್ತು. ಇಂದು ಇಂಗ್ಲಿಷ್ ಕಲಿಕೆಯು ಸಭ್ಯತೆಯ ಪ್ರಮಾಣವಾಗಿದೆ. ಹೀಗೆ ಬೇರೆ ಬೇರೆ ಯುಗದಲ್ಲಿ ಅಥವಾ ಸಮಯದಲ್ಲಿ ಮಾನಸಿಕ ಮತ್ತು ಸಾಮಾಜಿಕ ಸಭ್ಯತೆಯ ಮಾನದಂಡವು ಬದಲಾಗುತ್ತಿರುತ್ತದೆ.''

''ಅದೃಷ್ಟವೆಂದರೆ ಭಾರತೀಯರು ಯಾವಾಗಲೂ ವಿಧಾನಗಳ ಹಿಂದಿರುವ ಮನವನ್ನು ಮತ್ತು ಶಿಕ್ಷಣವು ಅದಕ್ಕೆ ಗಮನವೀಯಬೇಕೆಂಬುದನ್ನು ಕಂಡುಕೊಂಡಿದ್ದಾರೆ. ಯುವ ಮನಸ್ಸಿಗೆ ನೇರವಾಗಿ ಏಕಾಗ್ರತೆಯಲ್ಲಿ ತರಬೇತು ನೀಡುವ ಪದ್ಧತಿ ಚಾಲ್ತಿಯಲ್ಲಿರುವವರೆಗೂ ಭಾರತವು ಯಾವುದೇ ಕ್ಷಿಪ್ರ ಬದಲಾವಣೆಗಳಿಗೆ ಸಮನಾಗಿ ನಡೆಯಬಲ್ಲದು. ಇದನ್ನು ಕಳೆದುಕೊಂಡರೆ ಜನಾಂಗವು ಶುದ್ಧವಾಗಿದ್ದರೂ ಸಹ ಮನದ ಕಸುವು ಅಥವಾ ಓಜಸ್ಸನ್ನು ಕಳೆದುಕೊಂಡು ನವೀನ ಜನಾಂಗದವರಂತಾಗಿ ಏರಿಳಿತಕ್ಕೆ ಒಳಗಾಗುವುದು. ಆದ್ದರಿಂದ ಈ ವಿಷಯದಲ್ಲಿ (ಮನಸ್ಸಿನ ಏಕಾಗ್ರತೆ) ಪಾಶ್ಚಿಮಾತ್ಯ ಶಿಕ್ಷಣ ತಜ್ಞರು ಭಾರತೀಯರಿಗೆ ಹೇಳಿಕೊಡುವುದೇನಿಲ್ಲ. ಆದರೆ ಪಾಶ್ಚಿಮಾತ್ಯರು ಯಾವುದೇ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಲು ತಮ್ಮ ಪ್ರಯತ್ನವನ್ನು ಒಗ್ಗೂಡಿಸುತ್ತಾರೆ. ಅಂತಹ ಪ್ರಯತ್ನದ ಬೆಲೆಯನ್ನು ನಾವಿನ್ನೂ ಅರಿಯಬೇಕಿದೆ.'' ಎನ್ನುತ್ತಾಳೆ. ಈ 'ಒಗ್ಗೂಡಿಸಿ ಮಾಡುವ ಪ್ರಯತ್ನ'ದ ಬಗ್ಗೆ ನಿವೇದಿತೆ ಅಡಿಗಡಿಗೂ ಹೇಳುತ್ತಾಳೆ.

ಪ್ರಾಥಮಿಕ ಶಿಕ್ಷಣದ ಬಗ್ಗೆ ಈ ಕೆಲವೊಂದು ವಿಷಯಗಳನ್ನು ಹೇಳುತ್ತಾಳೆ – ''ನಮ್ಮ ಕಲ್ಪನೆಯ ಶಿಕ್ಷಣಕ್ಕೊಂದು ಆತ್ಮವಿರಬೇಕು. ಅದು ಮಗುವಿನ ಇಚ್ಛಾಶಕ್ತಿ, ಮನಸ್ಸು ಹಾಗೂ ಹೃದಯವನ್ನೂ ನೋಡಿಕೊಳ್ಳುವಂತಿರಬೇಕು. ಮಗುವಿಗೆ ನಾವು ನೀಡುವ ಪ್ರತಿಯೊಂದು ಮಾಹಿತಿಯೊಂದಿಗೆ ಅದರ ಹೃದಯಸ್ಪರ್ಶಿ ಗುಣವೊಂದನ್ನು ಸಹ ಕಲಿಸಬೇಕು.''

''ಆಧುನಿಕ ಶಿಕ್ಷಣದಲ್ಲಿ ಸಹಾನುಭೂತಿಯ ಬೆಳವಣಿಗೆಗೆ ಅವಕಾಶವೇ ಇಲ್ಲವಾಗಿದೆ. ಅಂತಃಕರಣದ ತರಬೇತಿಗೆ (Training of heart) ಹೆಚ್ಚು ಗಮನವೀಯಬೇಕು. ನಮ್ಮ ಶಿಕ್ಷಕನು ವಿದ್ಯಾಭ್ಯಾಸದ ಪ್ರಮೇಯ, ತಾರ್ಕಿಕ ಊಹೆ ಮುಂತಾದವುಗಳಲ್ಲಿ ಪ್ರವೀಣನಲ್ಲದಿದ್ದರೂ, ತಾನಾಡುವ ಕೆಲವು ಸಾಮಾನ್ಯ ಪದಗಳಿಂದ ವಿದ್ಯಾರ್ಥಿಯಲ್ಲಿ ಆಧ್ಯಾತ್ಮಿಕ ವೃತ್ತಿಗಳನ್ನು ಮೀಟಬಲ್ಲ. ಇಲ್ಲಿ ಅತ್ಯಂತ ಒಳ್ಳೆಯ ಉದ್ದೇಶ ಹೊಂದಿದ, ಪಳಗಿದ ವಿದೇಶಿ ಶಿಕ್ಷಕನು ಕೂಡ ವಿಫಲನಾಗುತ್ತಾನೆ.''

''ಪ್ರಪಂಚ ಜ್ಞಾನವಿಲ್ಲದ ತಾಯಿಯೊಬ್ಬಳು ತನ್ನ ಮಗುವಿನಲ್ಲಿ ಹೃದಯವಂತಿಕೆಯನ್ನು ಬೆಳಸಿದಲ್ಲಿ ಅದೇ ಅತ್ಯುಚ್ಚ ಶಿಕ್ಷಣವಾದೀತು.'' ಎನ್ನುತ್ತಾಳೆ ನಿವೇದಿತಾ. ಮತ್ತೊಂದು ಪ್ರಬಂಧದಲ್ಲಿ ಬಾಲೋದ್ಯಾನ (Kinder-garten) ದ ಬಗ್ಗೆಯೂ ವಿಸ್ತಾರವಾಗಿ ತನ್ನ ವಿಚಾರಗಳನ್ನು ಅಭಿವ್ಯಕ್ತಗೊಳಿಸಿದ್ದಾಳೆ.

**'ಭಾರತೀಯ ಶಾಲೆಗಳಲ್ಲಿ ಬಾಲೋದ್ಯಾನ'** ಎಂಬ ಲೇಖನದಲ್ಲಿ ''ಭಾರತೀಯರು ಆಚರಿಸುವ ವ್ರತಗಳು ಮಕ್ಕಳಿಗೆ ಎಷ್ಟೊಂದು ವಿಷಯಗಳನ್ನು ಕಲಿಸುತ್ತವೆ – ಅದರಲ್ಲಿವೆ ಕಥೆ, ಹಾಡು, ವಸ್ತುಗಳು, ಆಟ ಇತ್ಯಾದಿ. ಬಾಲೆಯೊಬ್ಬಳು ತುಳಸೀದಳವನ್ನು ತೆಗೆ

ಯುವ ಮೊದಲು ಗಿಡದ ಮುಂದೆ ನಿಂತು, 'ಓ ವಿಷ್ಣುಪ್ರಿಯೆ ತುಳಸಿ, ನನ್ನನ್ನು ಹರಿಪಾದಕ್ಕೊಯ್ಯುವ ಭಾಗ್ಯ ನೀಡು' ಎಂದು ಪ್ರಾರ್ಥಿಸುತ್ತಾಳೆ... ಈ ಸಂಸ್ಕಾರಗಳೆಲ್ಲ ಮಕ್ಕಳನ್ನು ಸಂವೇದನಾ ಶೀಲರನ್ನಾಗಿ ಮಾಡುತ್ತವೆ.'' ಹೀಗೆಂದು ಹೇಳಿ ಮಕ್ಕಳಿಗೆ ವ್ರತ, ನಿಯಮಗಳ ಮೂಲಕ ಸಿಗುತ್ತಿದ್ದ ಶಿಕ್ಷಣವನ್ನು ಪ್ರಶಂಸಿಸುತ್ತಾಳೆ. ಈಗಿನ ಕಾಲಕ್ಕೆ ಬಾಲೋದ್ಯಾನ ಪದ್ಧತಿಯನ್ನು ಭಾರತೀಯರಿಗೆ ಹೊಂದುವಂತೆ ಹೇಗೆ ಅಳವಡಿಸಿಕೊಳ್ಳಬಹುದು ಎಂದು ಸವಿಸ್ತಾರ ವಾಗಿ ಚರ್ಚಿಸಿದ್ದಾಳೆ.

**'ರಾಷ್ಟ್ರ ನಿರ್ಮಾಣ'** ಎಂಬ ತನ್ನ ಬರಹದಲ್ಲಿ ರಾಷ್ಟ್ರೀಯ ಶಿಕ್ಷಣ ವೆಂದರೇನೆಂದು ಹೇಳುತ್ತಾ,''ಮಗುವು ತಾನು ಕಲಿತಿದ್ದೆಲ್ಲವನ್ನೂ ಮನೆ ಹಾಗೂ ದೇಶಕ್ಕೆ ಹೊಂದಿಸುವಂತಹದ್ದಾಗಿರಬೇಕು. ಅದಕ್ಕೆ ತನ್ನದೇ ಆದಂತಹ ಉಜ್ವಲ ಪ್ರಕಾಶವಿರಬೇಕು. ಸಮಯದ ಕರೆಗೆ ಅನುಗುಣವಾಗಿ ರಾಷ್ಟ್ರೀಯ ಶಿಕ್ಷಣವು ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳಬೇಕು. ಆದರೆ ಈ ಬದಲಾವಣೆಗಳ ಮೂಲಕ ಚಾರಿತ್ರ್ಯವು ಬಲಗೊಳ್ಳುವಂತಿರಬೇಕು. ರಾಷ್ಟ್ರೀಯ ಭಾವನೆ ಎಂದರೆ ಮತ್ತೇನೋ ಅಲ್ಲ, ಇತರರಿಗಾಗಿ ಭಾವಿಸುವುದು.'' ಅದನ್ನು ಹೇಗೆ ಕಲಿಸಬಹುದು ಎನ್ನುವುದಕ್ಕೆ ಹೀಗೆ ಹೇಳುತ್ತಾಳೆ: ''ತನ್ನ ಹಿರಿಯರು ಯಾವಾಗಲೂ ತಮ್ಮ ಒಳಿತಿಗೆ ಬದಲು ಎಲ್ಲರ ಒಳಿತಿಗಾಗಿ ಚಿಂತಿಸು ವುದನ್ನು, ಕುಟುಂಬವೊಂದು ತನ್ನ ಹಿತವನ್ನು ಬದಿಗಿಟ್ಟು ಗ್ರಾಮ ಕ್ಕಾಗಿ ತ್ಯಾಗ ಮಾಡುವುದನ್ನು, ಸತ್ಯ-ನ್ಯಾಯಕ್ಕಾಗಿ ತನ್ನ ತಂದೆ ತನ್ನನ್ನೇ ಸಮರ್ಪಿಸಿಕೊಳ್ಳುವುದನ್ನು ನೋಡಿದಾಗ ಮಗುವಿಗೆ ಅತ್ಯಂತ ಬಲವಾದ ರಾಷ್ಟ್ರ-ನಿರ್ಮಾಣದ ಶಿಕ್ಷಣ ದೊರೆತಂತಾಗು ತ್ತದೆ.''

''ನಾವು ನೀಡುವ ಆದರ್ಶಗಳು ನಮ್ಮ ಪರಂಪರೆಯಲ್ಲಿ ರೂಪು ಗೊಂಡದ್ದಾಗಿರಬೇಕು. ನಮ್ಮ ಕಲ್ಪನೆಗಳು ಧೀರ, ಉದಾತ್ತ ಕಾವ್ಯ ಗಳಿಂದ ಬಂದದ್ದಾಗಿರಬೇಕು. ನಮ್ಮ ಆಸೆ-ನಿರೀಕ್ಷೆಗಳು ನಮ್ಮದೇ ಇತಿಹಾಸದಿಂದ ನೇಯ್ದದ್ದಾಗಿರಬೇಕು.'' ಎನ್ನುತ್ತಾಳೆ ಸೋದರಿ. ನಾವು ಈ ವಿಷಯದಲ್ಲಿ ಎಷ್ಟು ದೂರ ಸರಿದಿದ್ದೇವೆ! ವಿದ್ಯಾರ್ಥಿಯ ೧೦-೧೨ ವರ್ಷಗಳ ತನ್ನ ಪಠ್ಯಕ್ರಮದಲ್ಲಿ ಅಲ್ಲೊಂದು ಇಲ್ಲೊಂದು ರಾಮಾಯಣ-ಮಹಾಭಾರತದ ಪಾತ್ರಗಳ ಬಗ್ಗೆ ಓದುತ್ತಾನೆಯೇ ಹೊರತು, ಈ ಮಹತ್ತಾದ ಕಾವ್ಯಗಳ ಬಗ್ಗೆ ಸಮಗ್ರವಾದ ತಿಳಿ ವಿರುವುದಿಲ್ಲ. ಇದೆಲ್ಲವೂ ''ನಮ್ಮದು ಜಾತ್ಯಾತೀತ ರಾಷ್ಟ್ರ'' ಎಂಬು ದನ್ನು ನಾವು ತಪ್ಪಾಗಿ ಅರ್ಥೈಸಿಕೊಂಡದ್ದರ ಫಲವಲ್ಲವೆ? ಇದ ರಿಂದಾಗಿ ನಮ್ಮ ಶಿಕ್ಷಣ ನೀತಿಯು ನೈತಿಕ ಶಿಕ್ಷಣ ನೀಡುವಲ್ಲೂ ಸೋತಿದೆಯೆಂಬುದು ಅದೆಷ್ಟು ವಿಷಾದಕರ! ಸೋದರಿಯ ವಿಚಾರ ಗಳನ್ನು ತಿಳಿಯುತ್ತಾ ಹೋದಂತೆಲ್ಲಾ ''ಅಯ್ಯೋ! ಇಂತಹ ಶಿಕ್ಷಣ ಮುತ್ಸದ್ದಿಯನ್ನು ಪಡೆಯುವ ಅದೃಷ್ಟವಿದ್ದೂ ಅವಳ ವಿಚಾರಗಳನ್ನು ಅಳವಡಿಸಿಕೊಳ್ಳದಿರುವುದು ಎಂತಹ ದುರದೃಷ್ಟ!'' ಎಂಬ ಉದ್ಗಾರ ಮನವನ್ನು ಗೊತ್ತಿಲ್ಲದಂತೆ ಪ್ರವೇಶಿಸಿ ನಮ್ಮನ್ನು ಖೇದಕ್ಕೀಡು ಮಾಡುತ್ತದೆ. ಅವಳ ರಾಷ್ಟ್ರೀಯತೆಯ ಭಾವನೆಯ ಲಕ್ಷದ ಒಂದಂಶ ವಾದರೂ ನಮ್ಮಲ್ಲಿದ್ದಿದ್ದರೆ!! ಎಂದು ಮನಸ್ಸು ಚೀರುತ್ತದೆ.

**'ಭವಿತವ್ಯದ ಭಾರತೀಯ ನಾರೀ ಶಿಕ್ಷಣ'**ದ ಬಗ್ಗೆ ಹೇಳುತ್ತಾ, ''ಮಾನವೀಯತೆ ಮತ್ತು ಮೃದುತ್ವವನ್ನು ತೆಗೆದುಹಾಕುವಂತಹ ಶಿಕ್ಷಣವು ಶಿಕ್ಷಣವೇ ಅಲ್ಲ. ಹೃದಯ ಮತ್ತು ಬುದ್ಧಿಯನ್ನು ಸರಿ ದೂಗಿಸಿಕೊಂಡು ಹೋಗುವಂತಹ ಶಿಕ್ಷಣವನ್ನು ನಮ್ಮ ಸ್ತ್ರೀಯರಿಗೆ ನೀಡಬೇಕು. ಭಾರತವು ಈ ನಿಟ್ಟಿನಲ್ಲಿ ಅದೃಷ್ಟ ಹೊಂದಿದೆ ಏಕೆಂದರೆ ಭರತಖಂಡವು ಶ್ರೇಷ್ಠ ನಾರಿಯರ ನಾಡು.'' ಎಂದು ಹೇಳಿ ಒಂದೇ ಉಸಿರಿನಲ್ಲಿ ಅನೇಕ ಸ್ತ್ರೀರತ್ನಗಳನ್ನು ಹೆಸರಿಸುತ್ತಾಳೆ: ''ವೀರ ಮಹಿಳೆಯೆ? ಪದ್ಮಿನಿ, ಚಾಂದ್‌ಬೀಬಿ, ಝಾನ್ಸಿರಾಣಿ ಇಲ್ಲವೆ? ಸಾಧ್ವಿ, ಕವಯಿತ್ರಿ ಬೇಕೆ? ಮೀರಾಬಾಯಿ ಇದ್ದಾಳೆ. ಸತೀತ್ವ ಪ್ರತಿ ಪಾದಿಸುವವರೆ? ಸತಿದೇವಿ, ಸಾವಿತ್ರಿ, ಸೀತೆ ಇದ್ದಾರೆ..'' ಎಲ್ಲಾ ಸನ್ನಿವೇಶಗಳನ್ನು ದಕ್ಷತೆಯಿಂದ ನಿಭಾಯಿಸುವುದನ್ನು ನಮ್ಮ ಶಿಕ್ಷಣವು ಸ್ತ್ರೀಯರಿಗೆ ಕಲಿಸಬೇಕಾಗಿದೆ.'' ಎನ್ನುತ್ತಾಳೆ.

ಒಂದು ವಿಷಯವನ್ನು ನಿವೇದಿತೆ ಮತ್ತೆ ಮತ್ತೆ ಹೇಳುತ್ತಾಳೆ. ಅದೆಂದರೆ ವಿಜ್ಞಾನ, ಇತಿಹಾಸ ಮತ್ತು ಭೂಗೋಳಶಾಸ್ತ್ರದ ತಿಳುವಳಿಕೆ ಎಲ್ಲರಿಗೂ ಇರಬೇಕು. ಏಕೆಂದರೆ ಆಧುನಿಕರ ಮನಸ್ಸು ಇವು ಗಳ ಮೂಲಕವೇ ಎಲ್ಲಾ ವಿಷಯಗಳನ್ನು ಗ್ರಹಿಸುವುದರಿಂದ ರಾಷ್ಟ್ರೀಯ ಜಾಗರಣೆಗೆ ಇವುಗಳ ಮೂಲಕವೇ ಪ್ರಯತ್ನಿಸ ಬೇಕಾಗಿದೆ. ''ಆದ್ದರಿಂದ ಭಾರತೀಯ ಇತಿಹಾಸವನ್ನು, ಭಾರತದ ಭೂ-ವಿಭಾಗಗಳನ್ನು ನಾವು ತಿಳಿಯಬೇಕು. ಇದಕ್ಕೆ ದೃಶ್ಯಾವಳಿಗಳು ಹೆಚ್ಚು ಪರಿಣಾಮಕಾರಿ ಹಾಗೂ ಈ ತಿಳುವಳಿಕೆಯನ್ನು ಆಡುಭಾಷೆ ಯಲ್ಲಿ ನೀಡಬೇಕು. ಹೀಗೆ ನೀಡಿದ ಶಿಕ್ಷಣವು ಕಲ್ಪನೆಗೆ, ತಿಳುವಳಿಕೆಗೆ ಹೆಚ್ಚು ಉಪಕಾರಿ. ಇದಲ್ಲದೆ ಪುಸ್ತಕಗಳು, ಪತ್ರಿಕೆಗಳು ಯಾವುದೇ ಶಿಕ್ಷಕನು ಹೋಗದೆಡೆಗೂ ತೂರಬಲ್ಲವು. ಆದ್ದರಿಂದ ಇವೆಲ್ಲವೂ ಮಾತೃಭಾಷೆಯಲ್ಲಿರಬೇಕೆಂಬುದು ಸ್ಪಷ್ಟ. ಇಲ್ಲದಿದ್ದರೆ ಅತಿ ಸಾಮಾನ್ಯರೂ, ಸ್ತ್ರೀಯರೂ ಭಾರತೀಯ ಇತಿಹಾಸವನ್ನೂ, ಬುದ್ಧ, ಅಶೋಕ, ಚಂದ್ರಗುಪ್ತನ ಬಗ್ಗೆ ತಿಳಿಯುವುದಾದರೂ ಹೇಗೆ?'' ಎಂದು ಪ್ರಶ್ನಿಸುತ್ತಾಳೆ. ಈಗಿನ ನಮ್ಮ ಇಂಗ್ಲಿಷ್ ವ್ಯಾಮೋಹವನ್ನು ಕಂಡು ನಿವೇದಿತೆಗೆ ಏನನ್ನಿಸುವುದೋ ಏನೋ! ತಮಗೆ ಇಂಗ್ಲೀಷ್ ಮಾಧ್ಯಮ ಶಾಲೆಗೆ ಸೇರಿಸಲು ಆರ್ಥಿಕವಾಗಿ ಸಾಧ್ಯವಿಲ್ಲದಿದ್ದರೂ, ಮಗುವಿಗೆ ತಿಳಿಯದಿದ್ದ 'ಹೋಂವರ್ಕ್' ವಿಷಯದಲ್ಲಿ ಸಹಕರಿಸಲು ಆಗದಿದ್ದರೂ ಸಾಲ-ಸೋಲ ಮಾಡಿ ಮಕ್ಕಳನ್ನು ICSE, CBSE ಶಾಲೆ ಗಳಿಗೆ ಸೇರಿಸಿ ಒದ್ದಾಡುವ ಪೋಷಕರನ್ನು ಕಂಡು ಕನಿಕರಿಸದೇ ಇರಲು ಸಾಧ್ಯವಿಲ್ಲ; ಹಾಗೆಯೇ ಬೇಸರಗೊಳ್ಳದೇ ಇರಲೂ ಸಾಧ್ಯ ವಿಲ್ಲ! ಇಂತಹವರಿಗೆಲ್ಲಾ ನಿವೇದಿತೆಯ ದೇಶಾಭಿಮಾನದ ಸೋಂಕನ್ನು ಸ್ವಲ್ಪವಾದರೂ ತಗುಲಿಸಲು ಸಾಧ್ಯವಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!

**ನೈಜ ಶಿಕ್ಷಣದಲ್ಲಿ ವಿದೇಶೀ ಸಂಸ್ಕೃತಿಯ ಸ್ಥಾನ** ಎಂಬ ತನ್ನ ಲೇಖನದಲ್ಲಿ, ''ವಿದೇಶೀ ಸಂಸ್ಕೃತಿಗೆ ಅಗತ್ಯಕ್ಕಿಂತ ಉನ್ನತ ಸ್ಥಾನವ ನ್ನಿತ್ತು ನಾವು ವಿದೇಶೀ ವಿಲಾಸವನ್ನು ಬಯಸುತ್ತಿಲ್ಲವಷ್ಟೆ?'' ಎಂದು ಪ್ರಶ್ನಿಸುತ್ತಾಳೆ. ''ತಮ್ಮ ಶ್ರಮದಿಂದ ಗಳಿಸದಿದ್ದದ್ದನ್ನು ಪಡೆ ಯಲು ಬಯಸುವುದು ಆತ್ಮಾಭಿಮಾನಕ್ಕೆ ಧಕ್ಕೆ ತರುತ್ತದೆ. ಹಾಗೆ ಮಾಡುವು ದಾದರೆ ಅಂತಹ ಸಂಸ್ಕೃತಿಯು ಭಾರತೀಯ ಪುರುಷರನ್ನು

ಯೂರೋಪೀಯ ಮಹಿಳೆಯನ್ನಾಗಿಸುತ್ತದೆ'' ಎಂದು ಖಾರವಾಗಿಯೇ ಹೇಳುತ್ತಾಳೆ. ಮುಂದುವರೆಸುತ್ತಾ, ''ಒಬ್ಬನು ಕಷ್ಟವನ್ನು ಸಹಿಸಲು ಅಸಮರ್ಥ, ಪ್ರಾಮಾಣಿಕನಾಗಿರಲು ಅಸಮರ್ಥ, ತನ್ನ ನಡೆ-ನುಡಿಯಲ್ಲಿ ಮಾನವನಂತಿರಲು ಅಸಮರ್ಥನಾಗಿದ್ದರೆ ಇವೆಲ್ಲವೂ.. 'ವಿಲಾಸತೆ' ಎಂಬ ಮರದ ಫಲಗಳು'' ಎನ್ನುತ್ತಾಳೆ.

ಶಿಕ್ಷಣವನ್ನು ಸುತ್ತುವರಿದಿರುವ ಯಾವ ವಿಷಯವನ್ನೂ ಸೋದರಿ ಬಿಟ್ಟಿಲ್ಲ; ಪ್ರತಿಯೊಂದು ವಿಷಯಕ್ಕೂ ತನ್ನ ಧ್ಯಾನವನ್ನು ಹರಿಸಿ, ಚಿಂತನೆಗೈದು ಅದನ್ನು ಲೇಖನಿಯಿಂದಿಳಿಸಿದ್ದಾಳೆ. ಅದರಲ್ಲಿ ಒಂದೆರೆಡು ವಿಷಯಗಳನ್ನು ಆಚರಣೆಗೆ ತಂದರೂ ಸಾಕು, ಧ್ಯೇಯಕ್ಕೆ ನಾವು ಬಹಳ ಹತ್ತಿರವಾಗುತ್ತೇವೆ. ಭಾರತದ ವಿವೇಕಾನಂದ ಸೊಸೈಟಿಗಳಿಗೆ ಸಲಹೆ ನೀಡುತ್ತಾ, ''ಹಸಿದವರಿಗೆ ಅನ್ನ ನೀಡುವುದು, ಬಾಯಾರಿದವರಿಗೆ ನೀರೊದಗಿಸುವುದು, ದಾರಿಗರಿಗೆ ತಂಗಲು ಛತ್ರಗಳನ್ನು ಕಟ್ಟಿಸುವುದು ಇತ್ಯಾದಿಗಳನ್ನು ಭಾರತೀಯರು ಅನಾದಿ ಕಾಲದಿಂದಲೂ ಮಾಡುತ್ತಲೇ ಬಂದಿದ್ದಾರೆ. ಇಂತಹವರಿಗೆ ಧರ್ಮ ಬೋಧಿಸುವುದು ಗುಡ್ಡಕ್ಕೆ ಕಲ್ಲು ಹೊತ್ತಂತೆ'' ಎನ್ನುತ್ತಾಳೆ. ಆದ್ದರಿಂದ ವಿವೇಕಾನಂದರ ಹೆಸರಿನಲ್ಲಿ ಏನಾದರೂ ಮಾಡಬೇಕೆಂದಿರುವವರಿಗೆ ನಶಿಸಿ ಹೋಗುತ್ತಿರುವ ಜಾನಪದ ಕಲೆಗಳನ್ನು ಊರ್ಜಿತಗೊಳಿಸಲು ಹೇಳುತ್ತಾಳೆ. ಆಧುನಿಕ ಆಟಗಳಾದ ಕ್ರಿಕೆಟ್, ಟೆನ್ನಿಸ್‌ಗಳೊಂದಿಗೆ ದೇಶೀಯ ಆಟಗಳಾದ ಕುಸ್ತಿ, ಲಾಠಿ ತಿರುಗಿಸುವುದು, ಗದೆ ತಿರುಗಿಸುವುದು ಮುಂತಾದವುಗಳನ್ನು ಚಾಲ್ತಿಗೆ ತರಬೇಕೆನ್ನುತ್ತಾಳೆ. ಯುವಕರೆಲ್ಲ ಸೇರಿ ಸ್ವಾಮಿ ವಿವೇಕಾನಂದರ ಭಾಷಣಗಳನ್ನು ಓದುವುದು, ಪ್ರಪಂಚದ ಚರಿತ್ರೆಯನ್ನು ಅಧ್ಯಯನ ಮಾಡುವುದು, ಸೂಕ್ಷ್ಮದರ್ಶಕವನ್ನು ತೆಗೆದುಕೊಂಡು ಹೋಗಿ ವಿದ್ಯಾರ್ಥಿಗಳಿಗೆ ತೋರುವುದು – ಹೀಗೆ ಅನೇಕ ಸಲಹೆಗಳನ್ನು ನೀಡಿದ್ದಾಳೆ.



**'ಶಿಕ್ಷಣದಲ್ಲಿ ಕೈಕಸುಬಿನ ತರಬೇತಿ'** ಎಂಬ ಲೇಖನದಲ್ಲಿ ಕೈಕಸುಬಿನ (ಮರಗೆಲಸ, ಕಾಗದದಲ್ಲಿ ಕೆಲವಸ್ತುಗಳ ತಯಾರಿಕೆ ಇತ್ಯಾದಿ) ಬಗ್ಗೆ ಹೀಗೆ ಬರೆದಿದ್ದಾಳೆ: ''ಕೈಕಸುಬಿನ ತರಬೇತಿಯು ಶಾಲೆಯಲ್ಲಿ ಇರಬೇಕೇ ಬೇಡವೇ ಎಂಬ ಚರ್ಚೆ ನಡೆಯುತ್ತಲೇ ಇದೆ. ಏಕೆಂದರೆ ಇದು ಶಾಲಾ-ಅವಧಿಯ ಅರ್ಧ ಸಮಯವನ್ನು ತೆಗೆದುಕೊಂಡು



ಬಿಡುತ್ತದೆ. ಅಲ್ಲದೇ ಅದಕ್ಕೆ ತಗಲುವ ಖರ್ಚು ಸಹ ಹೆಚ್ಚು. ಕೈಕಸುಬಿನ ತರಬೇತಿಯ ಮುಖ್ಯ ಉದ್ದೇಶ ಮನಸ್ಸಿನ ಸ್ಪಷ್ಟತೆ ಮತ್ತು ಬುದ್ಧಿಯ ಕುಶಾಗ್ರತೆ. ಈ ತರಬೇತಿ ಪಡೆದವನಿಗೆ ಆಲೋಚನೆಯ ತಾಜಾತನ ಮತ್ತು ಹುರುಪು ಇರುತ್ತದೆ. ಏಕೆಂದರೆ ಅವನಿಗೆ ಗಮನಿಸುವ ಮತ್ತು ತನಗಾಗಿ ಆಲೋಚಿಸುವ ಶಕ್ತಿ ಬೆಳೆದಿರುತ್ತದೆ.'' ಮುಂದುವರೆಸುತ್ತಾ ಹೇಳುತ್ತಾಳೆ, ''ಗಡಿಯಾರ ತಯಾರಿಕೆಯಲ್ಲಿ ಒಬ್ಬನನ್ನು ತರಬೇತುಗೊಳಿಸುವುದು ಹಾಗೂ ಗಡಿಯಾರದಲ್ಲಿನ ಚಕ್ರದ ಹಿಂದಿನ ತತ್ತ್ವವೇನು ಎಂದು ತಿಳಿಸಿಕೊಡುವುದು ಎರಡೂ ಬೇರೆ ಬೇರೆಯೇ. ಏಕೆಂದರೆ ತತ್ತ್ವವನ್ನು ಕಲಿತವನು ಅದನ್ನು ಬೇರೆ ಸಂದರ್ಭದಲ್ಲಿ ಅಳವಡಿಸಿಕೊಳ್ಳಲೂ ಬಲ್ಲ.''

ಭಾರತದ ಕುಲಕಸುಬಿನ ಪದ್ಧತಿಯ ಉಪಯೋಗವನ್ನು ಮನಗಂಡ ಸೋದರಿ ಹೇಳುತ್ತಾಳೆ, ''ಈ ಪದ್ಧತಿ ಇರುವುದರಿಂದ ಮಕ್ಕಳು ಸುಲಭವಾಗಿ ಆಯಾ ವೃತ್ತಿಯಲ್ಲಿ ನಿರತರಾಗಬಲ್ಲರು. ಆದರೆ ಇದನ್ನು ಬುದ್ಧಿಪೂರ್ವಕವಾಗಿ ಬಳಸಿಕೊಳ್ಳಲು ತರಬೇತಿ ನೀಡಬೇಕು. ಕೈಕಸುಬಿನ ತರಬೇತಿಯನ್ನು ಪಡೆದ ಹುಡುಗ ತನ್ನ ವಿದ್ಯಾಭ್ಯಾಸ ಮುಗಿಸಿ ಹೊರಬಂದಾಗ ಒಬ್ಬ ರಾಜಕೀಯ ಮುತ್ಸದ್ದಿಯೋ, ಉತ್ತಮ ನಾಯಕನೋ ಆಗಬಲ್ಲ ಎಂದು ಖಡಾಖಂಡಿತವಾಗಿ ಹೇಳಬಲ್ಲೆ'' ಎನ್ನುತ್ತಾಳೆ. ಅಷ್ಟೇ ಅಲ್ಲದೇ, ಚಾರಿತ್ರಿಕ ಅನ್ವೇಷಣೆ ಹೇಗಿರಬೇಕು, ಯಾವ ದಿಕ್ಕಿನಲ್ಲದು ಸಾಗಬೇಕು ಎಂಬುದನ್ನೂ ತಿಳಿಸುತ್ತಾಳೆ.

ನಿವೇದಿತೆಯು ತಾನು ತೆರೆದ ಶಾಲೆಗೆ ಚಂದಾ ಎತ್ತಲು ೧೮೯೯ರಲ್ಲಿ ಇಂಗ್ಲೆಂಡ್ ಮತ್ತು ಅಮೇರಿಕೆಗೆ ಹೋದಳು. ಆಗ ಶಾಲೆಯ ಉದ್ದೇಶಗಳನ್ನು ತಿಳಿಸಲು 'ಶ್ರೀರಾಮಕೃಷ್ಣ ಬಾಲಕಿಯರ ಶಾಲಾ-ಯೋಜನೆ' ಎಂಬ ಕಿರುಪುಸ್ತಕವನ್ನು ಪ್ರಕಟಿಸಿದಳು. ಅದರಲ್ಲಿ ಭಾರತೀಯ ನಾರಿಯರ ಮೃದುಸ್ವಭಾವ, ಪರಿಶುದ್ಧ ಹೃದಯದ ಬಗ್ಗೆ ತಿಳಿಸಿ, ಅಂದಿನ ವಿಧವೆಯರ ಪರಿಸ್ಥಿತಿಯನ್ನು ವಿವರಿಸುತ್ತಾ-''ಕಲ್ಕತ್ತೆಯ ಗಂಗಾದಡದಲ್ಲಿ ಒಂದು ಮನೆ ಮತ್ತು ಸ್ವಲ್ಪ ಭೂಮಿಯನ್ನು ಖರೀದಿಸಿ ಅಲ್ಲಿ ಶ್ರೀಶಾರದಾದೇವಿಯವರ ಮಾರ್ಗದರ್ಶನದಲ್ಲಿ ಇಪ್ಪತ್ತು ವಿಧವೆಯರನ್ನು, ಇಪ್ಪತ್ತು ಅನಾಥ ಬಾಲಕಿಯರನ್ನು ಇರಿಸಿಕೊಳ್ಳುವುದು. ನಂತರ ಇದಕ್ಕೆ ಕೈಕಸುಬಿನ ಉತ್ತಮ ತರಬೇತಿ

ಯನ್ನು ನೀಡುವ ಶಾಲೆಯೊಂದನ್ನು ಸೇರಿಸುವುದು. ಶಾಲೆಯ ಮತ್ತೊಂದು ಕಾರ್ಯವೇನೆಂದರೆ ೧೮-೨೦ ವಯಸ್ಸಿನ ವಿಧವೆಯರಿಗೆ ಸ್ಥಳೀಯ ಜ್ಯಾಮ್, ಉಪ್ಪಿನಕಾಯಿ, ಚಟ್ನಿ ಮುಂತಾದವುಗಳನ್ನು ಮಾಡಲು ಕಲಿಸಿಕೊಟ್ಟು, ಅದಕ್ಕೆ ಭಾರತ, ಇಂಗ್ಲೆಂಡ್, ಅಮೇರಿಕಾಗಳಲ್ಲಿ ಮಾರುಕಟ್ಟೆಯನ್ನು ಕಲ್ಪಿಸಿಕೊಡುವುದು.'' ಮತ್ತೂ ಹೇಳುತ್ತಾಳೆ, ರಾಷ್ಟ್ರೀಯತೆಗೆ ಕುಂದುಂಟಾಗದಿದ್ದಲ್ಲಿ, ಈ ಶಾಲೆಯಲ್ಲಿ ಕಲಿತವರಿಗೆ ತಮ್ಮ ಜೀವನವನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ನೀಡುವಂತಾಗಬೇಕು – ವೈವಾಹಿಕ ಜೀವನವೇ ಅಥವಾ ಸೇವೆಯೆ? ಸ್ವ-ಇಚ್ಛೆಯಿಂದ ಯಾರಾದರೂ ಸೇವೆಯನ್ನು ಆರಿಸಿಕೊಂಡು ರಾಷ್ಟ್ರಕ್ಕೆ ತಮ್ಮನ್ನು ಸಮರ್ಪಿಸಿಕೊಳ್ಳುವುದಾದರೆ ಅಂತಹವರನ್ನು ಹಿರಿಯ ಮಹಿಳೆಯರ ರಕ್ಷಣೆಯಲ್ಲಿ ದೇಶದ ಇತರೆಡೆ ರಾಮಕೃಷ್ಣ ಶಾಲೆಯನ್ನು ತೆರೆಯಲು ಕಳುಹಿಸಿಕೊಡುವುದು'' ಎಂದು.

ಸೋದರಿ ಪ್ರಾರಂಭಿಸಿದ ಶಾಲೆಯು ಈಗ ಕೊಲ್ಕತ್ತಾದಲ್ಲಿ 'ರಾಮಕೃಷ್ಣ ಶಾರದಾ ಮಿಷನ್ ಸಿಸ್ಟರ್ ನಿವೇದಿತಾ ಗರ್ಲ್ಸ್ ಸ್ಕೂಲ್' ಎಂಬ ಹೆಸರಿನಲ್ಲಿ ನಡೆಯುತ್ತಿದೆ. ಅವಳ ಕನಸು ನನಸಾಗಿದೆ, ಶ್ರಮ ಸಾರ್ಥಕವಾಗಿದೆ.

ನಿವೇದಿತೆಯು ೧೦೦ ವರ್ಷಗಳಿಗೂ ಹಿಂದೆ ಕಂಡುಕೊಂಡ ಸತ್ಯ, ಶಿಕ್ಷಣಕ್ಷೇತ್ರದಲ್ಲಿ ಅವಳಿಗಿದ್ದ ಕಾಳಜಿ ಮತ್ತು ರಾಷ್ಟ್ರ ನಿರ್ಮಾಣದ ಬಗ್ಗೆ ಅವಳಿಗಿದ್ದ ನಿಚ್ಚಳ ಕಲ್ಪನೆಗಳು ಬಹಳ ಗಮನಾರ್ಹ. ದುಃಖದ ವಿಷಯವೆಂದರೆ ಶತಮಾನ ಕಳೆದರೂ ಅವಳು ಸಮಸ್ಯೆಗೆ ಕಂಡುಕೊಂಡ ಸಮಾಧಾನವನ್ನು ನಾವು ಅಳವಡಿಸಿಕೊಳ್ಳಲಾಗದೆ ಇರುವುದು. ಸ್ವಾಮಿ ವಿವೇಕಾನಂದರು, ''ಇನ್ನು ೫೦ ವರ್ಷಗಳು ಭರತಖಂಡವೇ ನಿಮ್ಮ ಆರಾಧ್ಯ ದೇವತೆಯಾಗಲಿ...!'' ಎಂದದ್ದು ಯಾವ ನಿಟ್ಟಿನಲ್ಲಿ ಎಂಬುದು ನಿವೇದಿತೆಯ ಆಲೋಚನೆಗಳಿಂದ ಸ್ಪಷ್ಟತೆ ಪಡೆಯುತ್ತದೆ. ಸುಧಾರಣೆಯು ಎಲ್ಲಿ ಆವಶ್ಯಕ ಎಂಬುದು ಅರಿವಾಗುತ್ತದೆ.

ಯಾರಾದರೂ ಸ್ವಾಮೀಜಿಯವರಿಗೆ, ''ಸ್ವಾಮಿ ನಾನು ನಿಮಗೇನು ಸಹಾಯ ಮಾಡಲಿ?'' ಎಂದು ಕೇಳಿದರೆ, ''ಭಾರತವನ್ನು ಪ್ರೀತಿಸು'' ಎನ್ನುತ್ತಿದ್ದರು. ನಿವೇದಿತೆಯ ಬಗ್ಗೆ ತಿಳಿಯುತ್ತಾ ಹೋದಂತೆಲ್ಲಾ ಅನ್ನಿಸುತ್ತದೆ, ಇವಳ ಭಾರತ ಪ್ರೀತಿಯ ಮುಂದೆ ಯಾವ ತುಲನೆಯೂ ಇಲ್ಲ. ಇವಳು ಹೇಳಿರುವ ಒಂದೆರಡು ಸಲಹೆಯನ್ನು ಶಿಕ್ಷಣ ಪಡೆಯಲು, ನೀಡಲು ನಾವು ಅನುಸರಿಸಿದ್ದೇ ಆದರೆ ಸ್ವಾಮೀಜಿಯವರಿಗೆ ನಾವು ಹೆಚ್ಚು ಹತ್ತಿರವಾಗುತ್ತೇವೆ. ಆಗ ನಾವು ನಿಜವಾಗಿ ಭಾರತಾಂಬೆಯ ಸೇವೆ ಮಾಡಿದಂತಾಗುತ್ತದೆ. ಆಗ ಅವಳ ಆತ್ಮ ಎಷ್ಟು ಕುಣಿದಾಡುವುದೋ ಏನೋ! ❖

**ವಂದೇ ಮಾತರಮ್!**

# ಸೋದರಿ ನಿವೇದಿತಾಳ ಸಮಗ್ರ ಕೃತಿಶ್ರೇಣಿ

## ಒಂದು ಪಕ್ಷಿನೋಟ

**ಸರಗೂರು ರಮೇಶ್**

ಅತ್ಯಂತ ವಿಸ್ತಾರವಾದ ನಿವೇದಿತಾಳ ಬರಹಗಳನ್ನು ಒಂದೆಡೆ ಕಲೆಹಾಕಿ, ಕ್ರಮಬದ್ಧವಾಗಿ ಐದು ಸಂಪುಟಗಳಲ್ಲಿ ಪ್ರಕಟಿಸಲಾದ ಕೃತಿಯೇ 'The Complete Works of Sister Nivedita'. ಈ ಕೃತಿಯನ್ನು ಪರಿಚಯಿಸಿ, ವಿಶ್ಲೇಷಿಸಿರುವ ಲೇಖಕರು ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲಯಲ್ಲಿ ಆಂಗ್ಲ ಉಪನ್ಯಾಸಕರು; ಅವರು ಉತ್ತಮ ಭಾಷಣಗಾರರು ಹಾಗೂ ಬರಹಗಾರರಾಗಿದ್ದಾರೆ.

**ಸೋ**ದರಿ ನಿವೇದಿತಾಳ ಸಮರ್ಪಿತ ಜೀವನವು ಭವ್ಯವಾಗಿರುವಂತೆ ಅವಳು ನೀಡಿರುವ ವಿಪುಲ ಸಾಹಿತ್ಯವೂ ಮಹತ್ವಪೂರ್ಣವಾಗಿದೆ. ಸೋದರಿ ನಿವೇದಿತಾಳ ಕೃತಿಶ್ರೇಣಿಯನ್ನು ಐದು ಸಂಪುಟಗಳಲ್ಲಿ ಮಾಯಾವತಿಯ ಅದ್ವೈತ ಆಶ್ರಮವು ೧೯೬೭ ರಲ್ಲಿ ಪ್ರಕಟ ಮಾಡಿದೆ. ಆಕೆ ಪ್ರಜ್ವಲಿಸುತ್ತಿದ್ದ ಅಗ್ನಿಯಾಗಿದ್ದಳು ಎಂಬುದನ್ನು ಅವಳ ಬರಹಗಳು ರುಜುವಾತು ಮಾಡುತ್ತವೆ. ಭಾರತೀಯ ಸ್ತ್ರೀಯರ ಉದ್ಧಾರಕ್ಕಾಗಿ ಅವಿರತವಾಗಿ ಶ್ರಮಿಸುತ್ತಿದ್ದ ನಿವೇದಿತಾಗೆ ಭಾರತೀಯ ತತ್ತ್ವಶಾಸ್ತ್ರ, ಸಾಹಿತ್ಯ, ಪುರಾಣ, ಇತಿಹಾಸ ಮತ್ತು ಸಂಸ್ಕೃತಿಗಳನ್ನು ಅಧ್ಯಯನ ಮಾಡಿ ಅರಗಿಸಿಕೊಳ್ಳಲು ಸಮಯ ದೊರೆತದ್ದಾದರೂ ಹೇಗೆ ಎಂದು ಆಶ್ಚರ್ಯವಾಗುತ್ತದೆ. ಭಾರತದ ಸಂಸ್ಕೃತಿಯ ಹಿರಿಮೆ, ವೈಭವ ಮತ್ತು ಸಾರಸತ್ವವನ್ನು ಭಾರತೀಯರಿಗೇ ಪರಿಚಯಿಸಿ ಅವರ ಅರಿವನ್ನು ವಿಸ್ತಾರಗೊಳಿಸುವ ಮಹಾ ಕಾರ್ಯವನ್ನು ಆಕೆ ಮಾಡಿದಳು ಎಂಬುದು ನಿರ್ವಿವಾದ. ಆಕೆಯ ಸಮಗ್ರ ಕೃತಿಗಳನ್ನು ಪೂರ್ಣವಾಗಿ ಅಲ್ಲದಿದ್ದರೂ ಒಂದು ಪಕ್ಷಿನೋಟಕ್ಕೆ ದಕ್ಕುವಂತೆ ಪರಿಚಯಿಸುವುದು ಈ ಲೇಖನದ ಉದ್ದೇಶ.

ಸೋದರಿ ನಿವೇದಿತಾಳ ಸಮಗ್ರ ಕೃತಿಶ್ರೇಣಿಯ ಪ್ರಥಮ ಸಂಪುಟದಲ್ಲಿ '**ನಾ ಕಂಡಂತೆ ನನ್ನ ಗುರುದೇವ**' (The Master as I Saw Him) ಎಂಬ ಪ್ರಧಾನ ಭಾಗವಿದೆ. ೧೮೯೫ ನವೆಂಬರ್‌ನಲ್ಲಿ ಲಂಡನ್ನಿನಲ್ಲಿ ಆಕೆ ಮೊದಲ ಬಾರಿಗೆ ಸ್ವಾಮಿ ವಿವೇಕಾನಂದರನ್ನು ಭೇಟಿ ಮಾಡಿದ ಸ್ಪಷ್ಟ ಚಿತ್ರಣವಿದೆ. ಆ ಸಮಯದಲ್ಲಿ ನಿವೇದಿತಾ ಧರ್ಮದ ಪ್ರಾಯೋಗಿಕ ಮತ್ತು ಸಾಕ್ಷಾತ್ಕಾರದ ಆಯಾಮಗಳನ್ನು ಕುರಿತಂತೆ ಬಹಳ ಗಂಭೀರವಾದ ಜಿಜ್ಞಾಸೆಯಲ್ಲಿ ಮುಳುಗಿದ್ದಳು. ಜೀವನದ ಹಲವಾರು ಕ್ಷೇತ್ರಗಳು ಆಕೆಯ ಬೌದ್ಧಿಕ ಸಾಮರ್ಥ್ಯ ಮತ್ತು ಆಸಕ್ತಿಗಳನ್ನು ಜಾಗೃತಗೊಳಿಸಿದ್ದವು. ಅಂತಹ ಸಂದಿಗ್ಧ ಸಮಯದಲ್ಲಿ ಸ್ವಾಮಿ ವಿವೇಕಾನಂದರು ವೇದಾಂತದ ಸನಾತನ ಸತ್ಯಗಳನ್ನು ಸಂದೇಶವಾಗಿ ನೀಡಲು ಲಂಡನ್‌ಗೆ ಬಂದಿದ್ದರು. ಬಾಯಾರಿಕೆಯಿಂದ ಬಳಲಿ ಸಾವಿನಂಚಿಗೆ ಹೋದ ಜನರಿಗೆ ಜೀವ ಜಲವು ಪ್ರಾಪ್ತವಾದಂತೆ ತನಗೆ ಸ್ವಾಮೀಜಿಯವರ ಸನ್ನಿಧಿ ಮತ್ತು ಸಂದೇಶಗಳು ದೊರಕಿದವು ಎಂದು ಆಕೆ ಕೃತಜ್ಞತೆಯಿಂದ ಸ್ಮರಿಸಿದ್ದಾಳೆ. ಆ ಹಿಂದೂ ಯೋಗಿಯು ಮಾತಿನ ಮಧ್ಯೆ ಮಧ್ಯೆ ಉದ್ಧರಿಸುತ್ತಿದ್ದ ಸಂಸ್ಕೃತದ ಶ್ಲೋಕಗಳು ತನ್ನ ಹೃದಯದಲ್ಲಿ ವಿಲಕ್ಷಣವಾದ ಪ್ರಭಾವವನ್ನು ಬೀರುತಿದ್ದವು. ಸ್ವಾಮೀಜಿಯವರ ಮಾತುಗಳನ್ನು ಆಲಿಸಿದ ಹಲವರು, ''ಅದರಲ್ಲಿ ಹೊಸತೇನೂ ಇಲ್ಲ'' ಎಂದು ಸಾಧಾರಣ ಪ್ರತಿಕ್ರಿಯೆ ನೀಡಿದರು. ಆದರೆ ಗಂಭೀರವಾಗಿ ಚಿಂತಿಸಿದ ನಿವೇದಿತಾಗೆ ಅಂತಹ ತೀರ್ಮಾನ ಅನುದಾರವೂ, ಅನ್ಯಾಯವೂ ಆಗಿ ಕಂಡಿತಂತೆ. ''ಭಿನ್ನ ಸಂಸ್ಕೃತಿಯ ಪ್ರತಿನಿಧಿಗಳಾಗಿ, ಒಂದು ಹೊಸ ಮನಸ್ಸಿನಿಂದ ಸ್ವಾಮೀಜಿಯವರು ಯಾವ ಆದರ್ಶವನ್ನು ತಾನು ಉನ್ನತ ಮತ್ತು ಶ್ರೇಷ್ಠ ಎಂದು ಭಾವಿಸಿದ್ದರೋ ಅದನ್ನೇ ಅಭಿವ್ಯಕ್ತಿಸಿದರು'' ಎಂದು ಬರೆದಿದ್ದಾಳೆ ಆಕೆ. ಸ್ವಾಮೀಜಿಯವರ ಧೀರ ಸ್ವಭಾವ ಮತ್ತು ಚಾರಿತ್ರ್ಯವನ್ನು ಆಕೆ ಮುಕ್ತಕಂಠದಿಂದ ಶ್ಲಾಘಿಸಿದ್ದಾಳೆ. ಸ್ವಾಮೀಜಿಯವರು ಪ್ರತಿಪಾದಿಸಿದ ಆತ್ಮವಿಚಾರ ಮತ್ತು ಕರ್ಮ, ಭಕ್ತಿ, ಜ್ಞಾನವೆಂಬ ಜೀವಾತ್ಮದ ಮುಕ್ತಿಯ ಮೂರು ಮಾರ್ಗಗಳ ಸಂದೇಶವು ಅವಳ ಹೃದಯದಲ್ಲಿ ಸಾಕ್ಷಾತ್ಕಾರದ ಸಾಧ್ಯತೆ ಮತ್ತು ಭರವಸೆಯನ್ನು ಅಳಿಸಲಾಗದಂತೆ ಮೂಡಿಸಿದವು ಎಂದು ತನ್ನ ಅಂತರಂಗದ ಭಾವನೆಗಳನ್ನು ನಿವೇದಿತಾ ಇಲ್ಲಿ ದಾಖಲಿಸಿದ್ದಾಳೆ. ಕಾವ್ಯಮಯವಾದ ಭಾಷೆಯಲ್ಲಿ ವೇದಿಕೆಯ ಮೇಲೆ



ನಿಂತು ಧಾರ್ಮಿಕ ವಿಚಾರಗಳನ್ನು ಶ್ರೀಮಂತವರ್ಗದವರಿಗೆ ಹೇಳುತ್ತಾ ರಂಜಿಸುವ ಧರ್ಮಪ್ರಚಾರಕರ ಗುಂಪಿಗೆ ಸೇರಿದವರಲ್ಲ ಸ್ವಾಮಿ ವಿವೇಕಾನಂದರು ಎಂಬುದನ್ನು ಅವಳು ಸ್ಪಷ್ಟವಾಗಿ ಕಂಡುಕೊಂಡೆ ಎಂದು ಬರೆದಿದ್ದಾಳೆ. ಸ್ವಲ್ಪ ಸಾವಧಾನ ಚಿತ್ತದಿಂದ ನಾವು ತನ್ನ ಗುರುದೇವನ ಬಗ್ಗೆ ಆಕೆ ಬರೆದಿರುವುದನ್ನು ಓದುತ್ತಾ ಹೋದರೆ ಆಕೆಯ ಆತ್ಮಕ್ಕೆ ಆಪ್ತರಾಗಿಬಿಡುವುದರಲ್ಲಿ ಸಂದೇಹವೇ ಇಲ್ಲ. ಅಷ್ಟು ಸ್ಪಷ್ಟತೆ, ಪ್ರಾಮಾಣಿಕತೆ ಮತ್ತು ಸತ್ಯತೆಗಳಿಂದ ಆಕೆಯ ಬರಹವು ಕೂಡಿದೆ ಎಂಬುದು ಮನದಟ್ಟಾಗುತ್ತದೆ. ಆಳವಾದ ಅನುಭವಕ್ಕೆ ಸಿಲುಕಿರುವ ಸತ್ಯದರ್ಶನವನ್ನು ಅನ್ಯಭಾಷೆಯಾದ ಆಂಗ್ಲ ಭಾಷೆ ವಿದೇಶಿ ಪರಿಸರದಲ್ಲಿ ಅಭಿವ್ಯಕ್ತಿಸುವಾಗ ಎದುರಾಗುವ ಸವಾಲುಗಳನ್ನು ಕುರಿತು ನಿವೇದಿತಾ ವಿಶ್ಲೇಷಿಸಿದ್ದಾಳೆ. ಸ್ವಾಮೀಜಿಯವರು ಮಾಯೆಯ ಸ್ವರೂಪವನ್ನು ಕುರಿತಂತೆ ಇಂಗ್ಲೀಷಿನಲ್ಲಿ ವಿಶ್ಲೇಷಣೆ ಮಾಡಿದಾಗ ಅರ್ಥಛಾಯೆಯು ಹೇಗೆ ಬದಲಾಗಿಬಿಡುತ್ತದೆ ಎಂದು ಸ್ವಾಮೀಜಿಯವರೇ ಹೇಳಿರುವ ಸಂಗತಿಗಳು ಆಕೆಗೆ ನಿಜವೆನಿಸಿದೆ. ಹೀಗೆ ಆಕರ್ಷಣೀಯವೂ ಅರ್ಧಸತ್ಯವೂ ಅರ್ಧ ಅಸತ್ಯವೂ ಆಗಿ ತೋರಿ ಬರುವ ಇಂದ್ರಿಯ ಜ್ಞಾನ ಮತ್ತು ಆ ಇಂದ್ರಿಯಾನುಭವವನ್ನೇ ಅವಲಂಬಿಸಿರುವ ಮನಸ್ಸಿನ ಸೀಮಿತ ತಿಳುವಳಿಕೆಯು ಮಾಯಾಕ್ಷೇತ್ರದ ವ್ಯಾಪ್ತಿಯೊಳಗೆ ಬರುತ್ತವೆ ಎಂದು ಆಕೆ ಸ್ವಾಮೀಜಿಯವರ ವ್ಯಾಖ್ಯಾನದಿಂದ ಗ್ರಹಿಸಿದಳು. ಮತ್ತು ''ಯಾವುದರಿಂದ ಇದೆಲ್ಲವೂ ವ್ಯಾಪಿಸಲ್ಪಟ್ಟಿರುವುದೋ ಅದನ್ನು ಸ್ವಯಂ ಈಶ್ವರನೆಂದೇ ತಿಳಿ'' ಎಂಬ ಮಾತು ಆಕೆಗೆ ಆಪ್ತವಾಗಿಬಿಟ್ಟಿತು. ಹಿಂದೂಧರ್ಮದ ಈ ಎರಡು ಪರಿಕಲ್ಪನೆಗಳ ಪ್ರಸ್ತಾಪದಲ್ಲಿ ಸ್ವಾಮೀಜಿಯವರ ಸಮಗ್ರ ಸಂದೇಶವು ಅಡಕವಾಗುತ್ತದೆ ಎನ್ನುತ್ತಾಳೆ ನಿವೇದಿತಾ. ಭಾರತದ ಚಿರಂತನ ಸಂದೇಶವೆಂದರೆ ''ಪ್ರಕೃತಿಗಾಗಿ ಪುರುಷನಲ್ಲ; ಪುರುಷನಿಗಾಗಿ ಪ್ರಕೃತಿ'' ಎಂದು ಸ್ವಾಮೀಜಿ ಒತ್ತಿ ಹೇಳಿದರು. ಈ ಎಲ್ಲ ಮಾತುಗಳು ನಿಃಸ್ವಾರ್ಥವಾಗಿ ಮನುಕುಲದ ಸೇವೆಯನ್ನು ಕೈಗೆತ್ತಿಕೊಳ್ಳುವ ಕಾರ್ಯಕ್ಕೆ ನಿವೇದಿತಾಳನ್ನು ಪ್ರೋತ್ಸಾಹಿಸಿದವು ಎಂದು ನಮಗೆ ಆಕೆಯ ಚಿಂತನೆಗಳನ್ನು ಓದಿದಾಗ ಮನವರಿಕೆಯಾಗುತ್ತದೆ.

ಸ್ವಾಮಿ ವಿವೇಕಾನಂದರ ಭೂಮ ವ್ಯಕ್ತಿತ್ವವನ್ನು ಸಾಧಕಿಯೂ, ಶಿಷ್ಯಳೂ ಆದ ನಿವೇದಿತಾ ಸಾಕಷ್ಟು ವಿವರಗಳೊಂದಿಗೆ ಕಟ್ಟಿಕೊಟ್ಟಿದ್ದಾಳೆ. ಆಧ್ಯಾತ್ಮಿಕ ಸಾಧನೆ, ಭಾರತೀಯ ಸಮಸ್ಯೆಗಳು, ಸಂನ್ಯಾಸ, ಗೃಹಸ್ಥಾಶ್ರಮ, ಆಧ್ಯಾತ್ಮಿಕ ಅನುಭವಗಳು, ಸಮಕಾಲೀನ ಸಾಮಾಜಿಕ ಸಂದರ್ಭ ಮುಂತಾದ ಅನೇಕ ವಿಷಯಗಳನ್ನು ಕುರಿತಂತೆ ಹಲವಾರು ಸಂದರ್ಭಗಳಲ್ಲಿ ಸ್ವಾಮಿ ವಿವೇಕಾನಂದರು ವ್ಯಕ್ತಪಡಿಸಿರುವ ಚಿಂತನೆಗಳು ಮತ್ತು ಅಭಿಪ್ರಾಯಗಳು ನಿವೇದಿತಾಳ '**ನಾ ಕಂಡಂತೆ ನನ್ನ ಗುರುದೇವ**' ಎಂಬ ಭಾಗದಲ್ಲಿ ಸಂಗ್ರಹಗೊಂಡಿವೆ. ಸಾಧಕರಿಗೆ ಈ ಗ್ರಂಥವು ಅತ್ಯಂತ ಉಪಯುಕ್ತವೂ, ಅಮೂಲ್ಯವೂ ಆಗಿದೆ. ತನ್ನ ಗುರುದೇವನೊಡನೆ ತಾನು ಭೇಟಿಕೊಟ್ಟ ಸ್ಥಳಗಳ ಬಗ್ಗೆ ಟಿಪ್ಪಣಿಗಳನ್ನು ಮಾಡಿರುವ ಅಧ್ಯಾಯವೂ ಮೊದಲ ಸಂಪುಟದಲ್ಲಿದೆ. ನೈನಿತಾಲ್, ಆಲ್ಮೋರಾ, ಬಾರಾಮುಲ್ಲಾ, ಶ್ರೀನಗರ, ಅಮರನಾಥ, ಕಾಶ್ಮೀರ ಮುಂತಾದ ಸ್ಥಳಗಳಿಗೆ ಆಕೆಯ ಹೃದಯವು ಸ್ಪಂದಿಸಿದ ರೀತಿ, ಈ ಸ್ಥಳಗಳ ವಿಶೇಷತೆಯೆಲ್ಲವನ್ನೂ ತನ್ನ ಅನುಭವದ ವಿವರಗಳೊಂದಿಗೆ ನಿವೇದಿತಾ ಟಿಪ್ಪಣಿಸಿದ್ದಾಳೆ.

ಸ್ವಾಮಿ ವಿವೇಕಾನಂದರ ರಾಷ್ಟ್ರೀಯ ಪ್ರಾಮುಖ್ಯತೆ, ಅವರ ಜೀವನ ಮತ್ತು ಸಾಧನೆ, ದೇಶಭಕ್ತನಾಗಿ ಸ್ವಾಮಿ ವಿವೇಕಾನಂದರು, ಪಾಶ್ಚಿಮಾತ್ಯ ರಾಷ್ಟ್ರಗಳಿಗಾಗಿ ಸ್ವಾಮೀಜಿಯವರ ಕಾರ್ಯಪ್ರಣಾಳಿಗಳನ್ನು ಕುರಿತಂತೆ ಆಕೆ ಬರೆದಿರುವ ಲೇಖನಗಳು ಮತ್ತು ನೀಡಿರುವ ಉಪನ್ಯಾಸಗಳು ಒಂದು ಪ್ರತ್ಯೇಕ ಅಧ್ಯಾಯವನ್ನೇ ನಿರ್ಮಿಸಿದೆ. ಸ್ವಾಮೀಜಿಯವರ ವಿರಾಟ್‌ವ್ಯಕ್ತಿತ್ವವನ್ನು ಶಬ್ದಗಳಲ್ಲಿ ಸೆರೆ ಹಿಡಿಯುವುದು ಅಸಂಭವ ಎಂದು ಅವಳು ಒಪ್ಪಿ, ಕೇವಲ ತನ್ನ ದೃಷ್ಟಿ ಮತ್ತು ತಿಳುವಳಿಕೆಯನ್ನು ದಾಖಲಿಸಿರುವುದರಲ್ಲಿ ತೃಪ್ತಿಪಟ್ಟುಕೊಳ್ಳುತ್ತೇನೆ ಎಂದು ನಮ್ರತೆಯಿಂದ ತನ್ನ ಅಸಹಾಯಕತೆಯನ್ನು ಸ್ವಾಮಿ ಬ್ರಹ್ಮಾನಂದರೊಡನೆ ಹಂಚಿಕೊಂಡಿದ್ದಾಳೆ.

ಸ್ವಾಮೀಜಿಯವರು ನೀಡಿರುವ ಸ್ಫೂರ್ತಿಯಿಂದ ''Kali the Mother'' ಎಂಬ ಪುಟ್ಟ ಪುಸ್ತಕವನ್ನು ಬರೆದಿದ್ದಳು. ಇದು ಕೊನೆಯ ಅಧ್ಯಾಯವಾಗಿ ಮೊದಲ ಸಂಪುಟದಲ್ಲಿ ಸೇರಿಕೊಂಡಿದೆ. ಕಾಳಿಮಾತೆಯನ್ನು ಕುರಿತು ಆಕೆ ನೀಡಿರುವ ವ್ಯಾಖ್ಯಾನ ಮತ್ತು ಒಳನೋಟಗಳು ಹಿಂದೂಗಳ ತಾತ್ತ್ವಿಕ ಮತ್ತು ಧಾರ್ಮಿಕ ಚಿಂತನೆಗೆ ನಿವೇದಿತಾ ಕೊಟ್ಟಿರುವ ಕೊಡುಗೆಯಾಗಿದೆ ಎಂದರೆ ಉತ್ಪ್ರೇಕ್ಷೆಯಲ್ಲ.

ಸೋದರಿ ನಿವೇದಿತಾಳ ಅಧ್ಯಯನಶೀಲತೆ, ಅಸಾಧಾರಣ ಮೇಧಾಶಕ್ತಿ, ಓಜಸ್ವಿಯಾದ ಅಂತರಂಗದ ತಪಸ್ಸು, ಆಲೋಚನೆಗಳು ತೀಕ್ಷ್ಣವಾದ ಅಭಿವ್ಯಕ್ತಿ, ಅಂತರಂಗದ ಭಾವಗಳಿಗೆ, ಅನುಭವಗಳಿಗೆ ಸ್ಪಷ್ಟರೂಪು ಕೊಡುವ ಅಭಿವ್ಯಕ್ತಿ ಸಾಮರ್ಥ್ಯಗಳು ಆಕೆಯ ಕೃತಿಶ್ರೇಣಿಯನ್ನು ಓದುತ್ತಾ ನಡೆದಂತೆ ನಮ್ಮನ್ನು ಮೂಕವಾಗಿಸಿಬಿಡುತ್ತವೆ.

ಎರಡನೆಯ ಸಂಪುಟದ ಮೊದಲ ಅಧ್ಯಾಯವೇ The Web of Indian Life ಎಂದು. ಪೌರಾತ್ಯ ರಾಷ್ಟ್ರಗಳಲ್ಲಿ ತಾಯಿ, ಪತ್ನಿಯಾಗಿ ಹಿಂದೂ ಮಹಿಳೆ, ಮರಣದಂತೆ ಶಕ್ತಿಶಾಲಿಯಾದ ಪ್ರೇಮ, ರಾಷ್ಟ್ರೀಯ ಜೀವನವಾಹಿನಿಯಲ್ಲಿ ಸ್ತ್ರೀಯ ಸ್ಥಾನ, ಪಾಶ್ಚಾತ್ಯ ಮಹಿಳೆಯರ ಸಮಕಾಲೀನ ಸಮಸ್ಯೆಗಳು, ಭಾರತೀಯ ಜಾತಿಗಳ ಸ್ವರೂಪದ ಅಧ್ಯಯನ, ಭಾರತೀಯ ಚಿಂತನೆಯ ಸಮನ್ವಯ, ಜನ್ಮ ಮತ್ತು ಮರಣ ಚಕ್ರ, ಶಿವಮಹಾದೇವನೆಂಬ ಮಹಾ ದೇವತೆಯ ಕಥೆ, ಭಾರತದಲ್ಲಿ ಇಸ್ಲಾಂ, ಭಾರತೀಯ ತೀರ್ಥಯಾತ್ರೆ ಎಂಬ ವಿಷಯಗಳ ವಿಹಂಗಮ ನೋಟವೇ ನಮಗೆ ದೊರಕುತ್ತದೆ. ವಿದೇಶೀ ಧರ್ಮಪ್ರಚಾರಕರು ಭಾರತೀಯ ಸಂಸ್ಕೃತಿಯನ್ನು ಋಣಾತ್ಮಕವಾಗಿ ಅಪಪ್ರಚಾರ ಮಾಡುತ್ತಿದ್ದ ಸಂದರ್ಭದಲ್ಲಿ ಭಾರತೀಯ ಜೀವನ ಪದ್ಧತಿ ಮತ್ತು ಚಿಂತನೆಯನ್ನು ವಸ್ತುನಿಷ್ಠವಾದ ತಲಸ್ಪರ್ಶೀ ಅಧ್ಯಯನದ ಮೂಲಕ ಜಗತ್ತಿಗೆ ನಿವೇದಿತಾ ಪರಿಚಯಿಸಿದ್ದಾಳೆ. ೧೮೯೮ರಿಂದಲೇ ಇಂತಹ ವಿಷಯಗಳನ್ನು ಪ್ರತಿಪಾದಿಸುತ್ತಾ ಬಂದ ನಿವೇದಿತಾಳ ಧ್ವನಿಯಲ್ಲಿ, ಅಭಿವ್ಯಕ್ತಿಯಲ್ಲಿ ಒಂದು ನಿಷ್ಕೃಷ್ಟತೆಯಿದೆ, ಅಧಿಕೃತತೆಯಿದೆ. ನಮ್ಮ ಹಬ್ಬಗಳು, ಕೌಟುಂಬಿಕ ಜೀವನ ವಿಧಾನ, ನಮ್ಮ ಸಂಸ್ಕೃತಿಯನ್ನು ಕಲ್ಕತ್ತಾದಲ್ಲಿ

ಒಬ್ಬ ದೊಡ್ಡ ಸಾಹಿತಿಗಿಂತ ಹೆಚ್ಚು ಆಧ್ಯಾತ್ಮಿಕ ಜೀವಿಯಾಗಿರುತ್ತಾನೆ. ಇದೇ ಹಿಂದೂ ಧರ್ಮದ ಹೆಗ್ಗಳಿಕೆ.

**ಧರ್ಮ ಮತ್ತು ರಾಷ್ಟ್ರದ ಯಶಸ್ಸು :** ನಮ್ಮ ಭೂತಕಾಲದ ಸಾಧನೆಯ ಬಗ್ಗೆ ನಮಗೆ ಹೆಮ್ಮೆ ಇರಬೇಕು. ಹಾಗಾದಾಗ ಮಾತ್ರ ಭವ್ಯ ಭವಿತವ್ಯವನ್ನು ನಾವು ನಿರ್ಮಾಣ ಮಾಡಬಲ್ಲೆವು. ನಮ್ಮ ಮುಂದೆ ಇರುವ ಗುರಿ ಸ್ಪಷ್ಟವಾಗಿರಬೇಕು. ಹಾಗೆಯೇ ನಮ್ಮ ಪುರಾತನರ ಅದ್ಭುತ ಕಾರ್ಯಗಳ ಸಮಂಜಸ ಪರಿಜ್ಞಾನ ನಮಗಿರಬೇಕು. ಆಗ ಮಾತ್ರ ನಾಡಿನ ಸರ್ವತೋಮುಖ ಅಭಿವೃದ್ಧಿ ಸಾಧ್ಯ. ನಮ್ಮ ಸಮಾಜದ ಕೆಡುಕುಗಳಿಗೆ ಧರ್ಮವನ್ನು ದೂರುವುದು ತರವಲ್ಲ. ಧರ್ಮ ಎಂದರೆ ಏನು? ಧರ್ಮ ಎಂದರೆ ಅಂಧಶ್ರದ್ಧೆಯಲ್ಲ; ಭಯವೂ ಅಲ್ಲ; ಪುರಾಣಪುಣ್ಯಕತೆಗಳಲ್ಲ; ತಪಾಚರಣೆಗಳೂ ಅಲ್ಲ. ಧರ್ಮವೆಂದರೆ ಜೀವಂತ ಚಿಂತನೆ ಮತ್ತು ನಂಬಿಕೆ, ಅದು ಚಾರಿತ್ರ್ಯದಲ್ಲಿ ಪ್ರತಿಫಲನಗೊಳ್ಳುವ ವಿಧಾನ. ಈ ದೃಷ್ಟಿಯಲ್ಲಿ ಹಿಂದೂ ಧರ್ಮವು ಬರಿಯ ವಿಗ್ರಹಾರಾಧನೆಯಲ್ಲ; ಪ್ರಾಪಂಚಿಕ ಯಶಸ್ಸಿನ ರಾಜಮಾರ್ಗವೂ ಅಲ್ಲ; ಪವಾಡ ಇಂದ್ರಜಾಲಗಳ ಕಂತೆಯೂ ಅಲ್ಲ. ಧರ್ಮವೆಂದರೆ ಚಿರಸ್ಥಾಯಿಯಾದ ನಿತ್ಯಸತ್ಯದ ದ್ಯೋತಕ; ಜೀವನದ ಹಲವಾರು ಪರಿಸ್ಥಿತಿಗಳ ಉಬ್ಬುತಗ್ಗುಗಳ ಮಧ್ಯೆ ಚಿರಂತನವಾಗಿರುವ ಮಾನವ ಚಿಂತನೆ ಮತ್ತು ಚಾರಿತ್ರ್ಯಗಳ ಒಟ್ಟು ಒಕ್ಕೂಟ. ಹಿಂದೂಧರ್ಮವು ಇಂಥ ಆದರ್ಶಗಳನ್ನು ಆಧಾರಸ್ತಂಭವಾಗಿ ಹೊಂದಿದೆ. ಒಂದು ದೇಶ ಮತ್ತು ಸಮಾಜವು ಲೌಕಿಕ ಸಿರಿಸಂಪತ್ತುಗಳ ಅಭಿವೃದ್ಧಿಯ ಮೇಲೆ ನಿಂತಿಲ್ಲ. ಅವುಗಳಿಗೆ ಪ್ರಾಮುಖ್ಯತೆ ಕೊಟ್ಟಿರುವ ನಾಗರಿಕತೆಗಳು ಈಗ ವಿನಾಶವಾಗಿವೆ. ಅಲ್ಪ ಕಾಲದ ವೈಭೋಗದ ಮಿಂಚಿನ ನೋಟವಷ್ಟೇ ಒಂದು ದೇಶದ ಅಥವಾ ನಾಗರಿಕತೆಯ ಯಶಸ್ಸಿನ ಕುರುಹಲ್ಲ. ಬಹುತೇಕ ಜನರು ಮೈಗೂಡಿಸಿಕೊಂಡಿರುವ ಚಾರಿತ್ರ್ಯ ಮತ್ತು ಪ್ರಾಮಾಣಿಕತೆಗಳಷ್ಟೇ ಒಂದು ಸಮಾಜದ ಉಳಿವಿಗೆ ಕಾರಣವಾಗಬಲ್ಲುದು. ಭಾರತದ ಸಮಾಜ ಮತ್ತು ನಾಗರಿಕತೆಗಳು ದೀರ್ಘಕಾಲದಿಂದ ಉಳಿದುಕೊಂಡಿರುವುದಕ್ಕೆ ಈ ಬಗೆಯ ಧರ್ಮವೊಂದೇ ಕಾರಣ ಎಂದು ನಿಸ್ಸಂದೇಹವಾಗಿ ಹೇಳಬಹುದು.

**ತ್ಯಾಗ ಮನೋಭಾವ :** ಜಗತ್ತಿನ ಎಲ್ಲ ಮಹಾನ್ ಕಾರ್ಯಗಳು ಸಾಧ್ಯವಾಗುವುದು ನಿಸ್ಪೃಹರಾದ ತ್ಯಾಗಿಪುರುಷರಿಂದ ಮಾತ್ರ. ಇದು ಪೂರ್ವದೇಶಗಳಿಗೆ ಮಾತ್ರವಲ್ಲ, ಪಾಶ್ಚಾತ್ಯ ದೇಶಗಳಿಗೂ ಅನ್ವಯಿಸುತ್ತದೆ. ಈ ಆದರ್ಶವನ್ನು ಸಂನ್ಯಾಸ ಧರ್ಮ ಪ್ರತಿಪಾದಿಸುತ್ತದೆ. ಭಗವಂತನಿಗಾಗಿ ಪ್ರಾಪಂಚಿಕ ಕಾಮ್ಯಕರ್ಮಗಳ ತ್ಯಾಗವನ್ನು ಮಾಡಿದವನು ಸಂನ್ಯಾಸಿ ಎನಿಸಿಕೊಂಡರೆ, ಜಗತ್ತಿನಲ್ಲಿಯೇ ಇದ್ದುಕೊಂಡು ನಿಸ್ವಾರ್ಥಭಾವದಿಂದ ಕರ್ಮಯೋಗವನ್ನು ಆಚರಿಸುವವನು ಕೂಡ ಸಂನ್ಯಾಸಿಯೇ. ಇಂಥವನ ಬದುಕಿನಲ್ಲಿ ಇಡೀ ರಾಷ್ಟ್ರಧರ್ಮವೇ ಪ್ರತಿಫಲಿಸುತ್ತದೆ. ಅತ್ಯುನ್ನತವಾದ ಸಂನ್ಯಾಸ ಭಾವನೆಯು ಒಬ್ಬ ವ್ಯಕ್ತಿಯ ಬದುಕಿನಲ್ಲಿ ಜ್ಞಾನ, ಕರ್ಮ ಮತ್ತು ಭಕ್ತಿಗಳ ರೂಪದಲ್ಲಿ ಅಭಿವ್ಯಕ್ತಿ ಹೊಂದುವುದನ್ನು ಕಾಣಬಹುದು. ಈ ದೃಷ್ಟಿಯಲ್ಲಿ ತ್ಯಾಗವೇ ರಾಷ್ಟ್ರೀಯ ಆದರ್ಶ. ಅದೇ ನಮ್ಮ ಧರ್ಮದ ತಿರುಳು.

**ಆಧ್ಯಾತ್ಮಿಕ ಮತ್ತು ಲೌಕಿಕ :** ಇಡೀ ಪ್ರಪಂಚದಲ್ಲಿ, ಲೌಕಿಕ ಮತ್ತು ಪಾರಮಾರ್ಥಿಕತೆಗಳ ನಡುವಣ ಅಡ್ಡಗೋಡೆಯನ್ನು ಒಡೆಯುವ ಧೈರ್ಯವನ್ನು ಮಾಡಿರುವುದು ಭಾರತವೊಂದೇ. ಇಲ್ಲಿನ ಮೇರು ತತ್ತ್ವವಾದ ಅದ್ವೈತವು ಈ ಬಾಳನ್ನು ಬರಿಯ ಕನಸೆಂದೂ, ಅದನ್ನು ಸಾಕ್ಷೀಭಾವದಿಂದ ನೋಡುವ ಅಭ್ಯಾಸ ಮಾಡಬೇಕೆಂದೂ ಉಪದೇಶಿಸುತ್ತದೆ. ಇದರ ಪ್ರಕಾರ ಲೌಕಿಕವೆನ್ನುವುದೇ ಇಲ್ಲ. ಎಲ್ಲವೂ ಬ್ರಹ್ಮವೇ. ಜಗತ್ತು ಎನ್ನುವುದು ಬರಿಯ ಮೂರು ದಿನಗಳ ಆಟ ಮಾತ್ರ. ಅಖಂಡ ಸಚ್ಚಿದಾನಂದವೇ ನಿಜವಾದ ಸತ್ಯ. ಇಡೀ ಜಗತ್ತನ್ನು ಆವರಿಸಿರುವುದು ಚೈತನ್ಯ ಮಾತ್ರ. ಈ ದೃಷ್ಟಿಯನ್ನು ಬೆಳೆಸಿಕೊಂಡರೆ, ಇಡೀ ಜಗತ್ತೇ ಪೂಜಾಮಂದಿರವಾಗುತ್ತದೆ. ನಾವು ಮಾಡುವ ಕೆಲಸಕಾರ್ಯಗಳೆಲ್ಲವೂ ಜಗದ್ರೂಪ ಪರಮಾತ್ಮನ ಆರಾಧನೆಯಾಗುತ್ತದೆ. ಆಗ ಆಧ್ಯಾತ್ಮಿಕ ಮತ್ತು ಲೌಕಿಕಗಳ ಅಡ್ಡಗೋಡೆಗಳು ಸಂಪೂರ್ಣ ನಿವಾರಣೆಯಾಗುತ್ತವೆ.

**ಶಿಕ್ಷಣದ ಮಹತ್ವ :** ನಾವು ಈಗ ಏನಾಗಿದ್ದೇವೆಯೋ, ಅದು ನಾವು ಮಾಡಿದ ಚಿಂತನೆಗಳ ಫಲ. ನಮ್ಮ ವ್ಯಕ್ತಿತ್ವ ನಮ್ಮ ಆಲೋಚನೆಗಳ ಮೇಲೆಯೇ ಆಧಾರಿತವಾಗಿದೆ. ಅದು ನಮ್ಮ ಚಿಂತನೆಗಳಿಂದಲೇ ನಿರ್ಮಾಣವಾಗಿದೆ ಎಂದು ಬುದ್ಧ ಹೇಳುತ್ತಾನೆ. ಹೀಗಾಗಿ ಬೌದ್ಧಿಕ ವ್ಯಕ್ತಿತ್ವವನ್ನು ನಿರ್ಮಾಣ ಮಾಡುವ ಶಿಕ್ಷಣ ಮನುಷ್ಯನೊಬ್ಬನ ಜೀವನದಲ್ಲಿ ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಶಿಕ್ಷಣವು ವ್ಯಕ್ತಿತ್ವಕ್ಕೆ ಬಲವನ್ನು ತಂದುಕೊಡುತ್ತದೆ. ಭಾರತ ಅಂಥ ಅದ್ಭುತ ಬೌದ್ಧಿಕ ಶಕ್ತಿಯನ್ನು ಮೊದಲಿನಿಂದಲೂ ಹೊಂದಿತ್ತು. ಈಗಲೂ ಅದನ್ನು ಉಳಿಸಿ ಬೆಳೆಸಿಕೊಳ್ಳುವುದಕ್ಕೆ ಭಾರತ ಪರಿಶ್ರಮಿಸಬೇಕು. ಶಿಕ್ಷಣದಿಂದ ಸ್ವನಿಯಂತ್ರಣ ಮತ್ತು ಸ್ವಮಾರ್ಗದರ್ಶನ ಶಕ್ತಿಗಳು ಸಾಧ್ಯ. ಇವುಗಳನ್ನು ಬೆಳೆಸಿಕೊಳ್ಳಲು ನಾವೆಲ್ಲ ಯತ್ನಿಸಬೇಕು.

**ಸದ್ಗುಣ ಸಂಪನ್ನತೆ :** ಶಿಕ್ಷಣವು ಒಬ್ಬ ವ್ಯಕ್ತಿಯನ್ನು ಸದ್ಗುಣ ಸಂಪನ್ನನನ್ನಾಗಿ ಮಾಡಬೇಕು. ಅಂಥ ಗುಣಗಳಲ್ಲಿ ಪ್ರಧಾನವಾದುದು ಪ್ರಾಮಾಣಿಕತೆ. ಸಹನೆ, ದೃಢತೆ, ಪ್ರಾಮಾಣಿಕತೆ – ಇದೇ ಧರ್ಮವೆನಿಸಿಕೊಳ್ಳುತ್ತದೆ. ಎಲ್ಲ ಬಗೆಯ ದರ್ಶನ, ಸಿದ್ಧಿಗಳಿಗೆ ಮೂಲ ಅಡಿಪಾಯ ಪ್ರಾಮಾಣಿಕತೆ. ಪ್ರಾಮಾಣಿಕತೆ ಮತ್ತು ಧ್ಯೇಯ ನಿಷ್ಠೆ – ಇವೇ ಜೀವನದ ಯಶಸ್ಸಿನ ಮಾನದಂಡಗಳು. ಸತ್ಯನಿಷ್ಠೆ, ಪವಿತ್ರತೆ ಮತ್ತು ಧೈರ್ಯ – ಈ ಮೇರು ಗುಣಗಳು ಪ್ರಾಮಾಣಿಕ ವ್ಯಕ್ತಿಯಲ್ಲಿ ಮಾತ್ರ ಇರಬಲ್ಲವು.

**ಮೃತ್ಯುವಿಗೆ ಆಹ್ವಾನ :** ಹಿಂದೂ ಧರ್ಮದಲ್ಲಿನ ಒಂದು ವೈಶಿಷ್ಟ್ಯವೆಂದರೆ ಶಕ್ತಿ ಉಪಾಸನೆ – ದೇವರನ್ನು ತಾಯಿಯೆಂದು ಪೂಜಿಸುವುದು. ಇಲ್ಲಿ ಮೃತ್ಯುವನ್ನೇ ಅಪ್ಪಿಕೊಳ್ಳುವ ಎದೆಗಾರಿಕೆಯನ್ನು ಕಾಣುತ್ತೇವೆ; ಕೇವಲ ಒಳಿತನ್ನು ಮಾತ್ರವಲ್ಲ, ಕೆಡುಕನ್ನೂ ಆರಾಧಿಸುವ ನಿರ್ಭೀತಿಯನ್ನು ನೋಡುತ್ತೇವೆ. ಎಲ್ಲ ಪರಿಸ್ಥಿತಿಯಲ್ಲಿಯೂ, ಎಲ್ಲದರಲ್ಲೂ ಭಗವಚ್ಛಕ್ತಿಯ ಲೀಲೆಯನ್ನು ಸಾಧಕ ಅನುಭವಿಸುತ್ತಾನೆ. ಆಗ ಎಲ್ಲವನ್ನೂ ಸಮಾನವಾಗಿ ಸ್ವೀಕರಿಸುತ್ತಾನೆ. ಮೃತ್ಯುವಿಗೂ ಸವಾಲು ಹಾಕುತ್ತಾನೆ.

**ಭೋಗಲಾಲಸೆ ಮತ್ತು ಮನುಷ್ಯತ್ವ:** ಶಿಕ್ಷಣದ ಪ್ರಯೋಜನವಾದರೂ ಏನು? ನಮ್ಮ ವಿಶ್ರಾಮ ಕಾಲ ಮತ್ತು ಸಂಪನ್ಮೂಲಗಳನ್ನು ಸದುಪಯೋಗಿಸಿಕೊಳ್ಳುವ ವಿಧಾನವನ್ನು ಕಲಿಸಿಕೊಡುವುದು. ಶಿಕ್ಷಣವು ಇಂಥ ವಿಷಯಗಳಲ್ಲಿ ವಿವೇಕವನ್ನು ನಮಗೆ ತಂದುಕೊಡಬೇಕು. ಇಲ್ಲದಿದ್ದರೆ ನಮ್ಮ ಬಾಳಿಗೂ, ಪ್ರಾಣಿಗಳ ಜೀವನಕ್ಕೂ ಯಾವ ವ್ಯತ್ಯಾಸವೂ ಇಲ್ಲದೆ ಹೋಗುವುದು. ಹೀಗಾಗಿ ಪ್ರಾಪಂಚಿಕ ಜೀವನದಲ್ಲಿಯೂ ಸ್ವನಿಯಂತ್ರಣ ಅತ್ಯಗತ್ಯವಾಗುತ್ತದೆ. ಇದನ್ನೇ ಭಾರತೀಯ ನೀತಿಶಾಸ್ತ್ರವು ಬೋಧಿಸುತ್ತದೆ.

**ಶಕ್ತಿತತ್ತ್ವ :** ಶ್ರೀರಾಮಕೃಷ್ಣರ ಒಂದು ಕಥೆಯ ಬೋಧನೆ ಹೀಗಿದೆ: ಒಬ್ಬ ಗುರುವು ತನ್ನ ಶಿಷ್ಯನಾದ ಒಂದು ಹಾವಿಗೆ ಹೀಗೆ ಉಪದೇಶಿಸುತ್ತಾನೆ, ಹೆಡೆಯನ್ನು ತೋರಿಸಿ ಹೆದರಿಸು, ಆದರೆ ಕಚ್ಚಬೇಡ ಎಂದು. ಈ ನಿಯಮವನ್ನೇ ನಾವು ನಮ್ಮ ಜೀವನದಲ್ಲಿ ಪಾಲಿಸಬೇಕು. ಶಕ್ತಿವಂತನಾದವನು ಇತರರನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಮಾತ್ರವೇ ಆ ಶಕ್ತಿಯ ಬೆದರಿಕೆಯನ್ನು ಉಪಯೋಗಿಸಿಕೊಳ್ಳಬೇಕೇ ಹೊರತು, ಬೇರೆಯವರನ್ನು ಹಿಂಸಿಸುವುದಕ್ಕಿಲ್ಲ. ಹಿಂಸೆಯು ಎಂದೂ ಶಕ್ತಿಯ ಸೂಕ್ತ ಪ್ರದರ್ಶನವಾಗದು. ಏಕೆಂದರೆ, ಅಹಿಂಸೆಯೇ ಪರಮ ಧರ್ಮ.

**ನೈಜ ಮಹತ್ವಾಕಾಂಕ್ಷೆ :** ಬ್ರಹ್ಮಜ್ಞಾನಿಯಾದವನು ಮಾತ್ರವೇ ನಿಜವಾದ ಬ್ರಾಹ್ಮಣ ಎನ್ನುತ್ತವೆ ನಮ್ಮ ಶಾಸ್ತ್ರಗಳು. ಇಂಥ ಬ್ರಾಹ್ಮಣತ್ವವನ್ನು ಪಡೆದುಕೊಳ್ಳುವುದು ಜೀವನದ ಮಹತ್ವಾಕಾಂಕ್ಷೆಯಾಗಬೇಕು. ನಾವು ಬಾಹ್ಯ ಜಗತ್ತಿನಲ್ಲಿ ಪಡೆದುಕೊಳ್ಳುವ ಯಶಸ್ಸೆಲ್ಲ ಪೊಳ್ಳು. ಭಾರತೀಯರಿಗೆ ಆಂತರಿಕ ಜಗತ್ತಿನ ಅನ್ವೇಷಣೆಯೇ ಪ್ರಧಾನವಾಗಿತ್ತು. ಅದರಲ್ಲಿ ಯಶಸ್ಸನ್ನು ಪಡೆಯುವುದೇ ಅವರ ನಿಜವಾದ ಮಹತ್ವಾಕಾಂಕ್ಷೆಯಾಗಿತ್ತು. ಯಾವುದೇ ಕ್ಷೇತ್ರದಲ್ಲಿ ಯಶಸ್ಸನ್ನು ಪಡೆಯಲು ಸ್ಪಷ್ಟವಾದ ಚಿಂತನೆ ಮತ್ತು ಸೂಕ್ತವಾದ ವ್ಯಕ್ತಿ ಅಥವಾ ಸಂಗತಿಯಲ್ಲಿ ಇರಿಸಿದ ಪ್ರೀತಿ – ಇವೆರಡೂ ಅವಶ್ಯಕ. ದಿವ್ಯ ಚೈತನ್ಯದ ಪ್ರವಾಹವು ಸೀಮಾತೀತವಾದುದು. ಇಂಥ ದಿವ್ಯಶಕ್ತಿಯ ಧಾರಕರಾದ ಮಹಾಪುರುಷರು ಹುಟ್ಟಿದ ದೇಶವೇ ನಿಜವಾಗಲೂ ಮಹಾನ್ ದೇಶ ಎನಿಸಿಕೊಳ್ಳುತ್ತದೆ. ಭಾರತ ಅಂಥ ಪವಿತ್ರ ದೇಶ.

**ಚಾರಿತ್ರ್ಯ :** ನಮ್ಮ ಸುಪ್ತ ಸಂಸ್ಕಾರಗಳ ಒಟ್ಟು ಮೊತ್ತವೇ ಚಾರಿತ್ರ್ಯವಾಗಿ ರೂಪುಗೊಳ್ಳುತ್ತದೆ. ಭವಿಷ್ಯವು ಭೂತಕಾಲಕ್ಕಿಂತ ಭಿನ್ನವಾಗಿರದು. ನಾವು ಈಗ ಏನಾಗಿದ್ದೇವೆಯೋ, ಅದು ನಾವು ಹಿಂದೆ ಮಾಡಿದ ಆಲೋಚನೆಗಳ ಒಟ್ಟು ಮೊತ್ತವಲ್ಲದೆ ಬೇರೆಯಲ್ಲ ಎನ್ನುವುದನ್ನು ನಾವು ನೆನಪಿನಲ್ಲಿಡಬೇಕು. ಮಾನವತೆಯು ಅದೆಂಥ ಅದ್ಭುತ ವ್ಯಕ್ತಿತ್ವಗಳನ್ನು ಹುಟ್ಟುಹಾಕಿದೆ! ಪ್ರತಿಯೊಬ್ಬ ಮಾನವನೂ ಅನಂತ ಸಾಧ್ಯತೆಗಳನ್ನು ಅಡಗಿಸಿಕೊಂಡಿರುತ್ತಾನೆ ಎಂದು ಹಿಂದೂ ಧರ್ಮ ಪ್ರತಿಪಾದಿಸುತ್ತದೆ. ಆತ್ಯಂತಿಕ ಸತ್ಯವು ಇದೇ : ಮಾನವನೇ ಈ ಜಗತ್ತು, ಅವನ ಶಕ್ತಿಯಲ್ಲ. ಅಂಥ ಮಾನವನೇ ನಿಜವಾಗಲೂ ದೇವರು. ಇದೇ ಚಾರಿತ್ರ್ಯದ ತಿರುಳು.

**ವಿವೇಕ:** ನಮ್ಮನ್ನು ನಿಜವಾಗಿ ಮನುಷ್ಯರನ್ನಾಗಿ ಮಾಡುವುದು ಯಾವುದು? ಮನಸ್ಸು ಮತ್ತು ದೇಹಗಳ ನಡುವಿನ ವಿವೇಕ ಬುದ್ಧಿ; ಮಾನಸಿಕ ಚಿಂತನೆ ಮತ್ತು ಇಂದ್ರಿಯಗಳ ನಡುವಣ ವಿವೇಕ ಬುದ್ಧಿ. ಒಬ್ಬ ವ್ಯಕ್ತಿಯ ಆಧ್ಯಾತ್ಮಿಕ ಬಲದ ಪ್ರಭೆ ವಿವೇಕಬುದ್ಧಿಯ ಮೂಲಕ ಮೂಡುತ್ತದೆ. ಧರ್ಮವು ಸಾಧನೆಗಳಿಗೆ ಮಾತ್ರ ಸೀಮಿತವಾಗಿಲ್ಲ; ತಪಸ್ಯೆಯೆಂಬುದು ಪೂಜಾಮಂದಿರಕ್ಕೆ ಮಾತ್ರ ಸೀಮಿತವಾಗಿಲ್ಲ. ಪ್ರತಿಯೊಂದು ಉನ್ನತ ಆಧ್ಯಾತ್ಮಿಕ ಭಾವನೆ ಲೌಕಿಕ ಆಯಾಮದಲ್ಲಿ ಕೂಡ ಪ್ರತಿಫಲನಗೊಳ್ಳಬೇಕು. ಆಧ್ಯಾತ್ಮಿಕತೆಯೆಂಬುದು ಹಠಾತ್ತನೆ ಉಂಟಾಗುವುದಲ್ಲ. ವರ್ಷಗಟ್ಟಲೆ ಕಾಲ ನಿಧಾನವಾಗಿ, ಒಂದೊಂದಾಗಿ ಇಟ್ಟಿಗೆಗಳನ್ನು ಪೇರಿಸಿ ಕಟ್ಟಿದ ದೇಗುಲದಂತೆ ಅದು. ನಮ್ಮ ಪ್ರತಿಯೊಂದು ಕೆಲಸ, ಪ್ರತಿಯೊಂದು ಚಿಂತನೆ ನಾವು ಕಟ್ಟಹೊರಟಿರುವ ಆಧ್ಯಾತ್ಮಿಕ ಸೌಧದ ಇಟ್ಟಿಗೆಗಳು. ಈ ಸೌಧದಲ್ಲಿ ವಿಶ್ವರೂಪಿ ಹಾಗೂ ಸನಾತನ ಸತ್ಯವು ಪೂಜಿಸಲ್ಪಡಬೇಕು. ನಮ್ಮ ಜೀವನದ ಪ್ರತಿಯೊಂದು ಕ್ರಿಯೆ ಮತ್ತು ಚಿಂತನೆಯಲ್ಲಿ ನಾವು ಪಾಲಿಸುವ ವಿವೇಕಬುದ್ಧಿಯು ಕಟ್ಟಕಡೆಯಲ್ಲಿ ಚಿರಂತನ ಆನಂದವೆಂಬ ಆತ್ಯಂತಿಕ ವಿವೇಕಬುದ್ಧಿಯಲ್ಲಿ ಪರಿಪೂರ್ಣತೆಯನ್ನು ಪಡೆದುಕೊಳ್ಳುತ್ತದೆ. ಇದೇ ನಮ್ಮ ಬಾಳಿನ ಧ್ಯೇಯ.

**ಉಪಸಂಹಾರ :** 'ರಿಲಿಜನ್ ಮತ್ತು ಧರ್ಮ' – ಈ ಪುಟ್ಟ ಗ್ರಂಥವು ಹಲವಾರು ವಿಷಯಗಳ ಬಗ್ಗೆ ಇರುವ ಸಣ್ಣ ಸಣ್ಣ ಪ್ರಬಂಧಗಳ ಸಂಗ್ರಹ. ಒಟ್ಟಾರೆ ಹಿಂದೂ ಧರ್ಮ, ಭಾರತೀಯ ನಾಗರಿಕತೆ ಮತ್ತು ಸಭ್ಯತೆಗಳ ಅಧಿಕೃತ ಪರಿಚಯವನ್ನು ಮಾಡಿಕೊಡುವ ಪುಸ್ತಕ ಇದು. ಮುಖ್ಯವಾಗಿ ಪಾಶ್ಚಾತ್ಯ ಓದುಗರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಪುಸ್ತಕವಾದರೂ, ಆಧುನಿಕತೆಯ ಭ್ರಮಾಪ್ರಪಂಚದಲ್ಲಿ ತೊಳಲಾಡುತ್ತಿರುವ ನಮ್ಮ ನಾಡವರೂ ಅವಶ್ಯಕವಾಗಿ ಅಧ್ಯಯನ ಮಾಡಬೇಕಾದ ವೈಚಾರಿಕ ಹೊತ್ತಗೆ ಇದು. ಈ ಪುಸ್ತಕದಲ್ಲಿ ಅಡಗಿರುವ ಹಲವಾರು ಚಿಂತನಾರತ್ನಗಳಲ್ಲಿ ಕೆಲವೊಂದನ್ನು ಪರಿಚಯ ಮಾಡಿಕೊಡುವುದೇ ಈ ಬರಹದ ಉದ್ದೇಶ. ❖

## ನಿವೇದಿತಾ ಮತ್ತು ಶ್ರೀಮಾತೆ

ಒಮ್ಮೆ ನಿವೇದಿತಾ ತಾನೇ ಅಡುಗೆ ಮಾಡಿ ಶ್ರೀರಾಮಕೃಷ್ಣರಿಗೆ ನಿವೇದಿಸಿ ಪ್ರಸಾದವನ್ನು ಶ್ರೀಮಾತೆಯವರಿಗೆ ಕೊಟ್ಟಳು. ಶ್ರೀಮಾತೆಯವರು ಅತ್ಯಾನಂದದಿಂದ ಸ್ವೀಕರಿಸಿದರು. ಇದನ್ನು ನೋಡಿ ಮಡಿವಂತ ಮಹಿಳೆಯರಿಗೆ ಕಸಿವಿಸಿಯಾಯಿತು. ಅವರು ಶ್ರೀಮಾತೆಯವರ ಕೃತ್ಯವನ್ನು ಟೀಕಿಸಿದರು. ಶ್ರೀಮಾತೆಯವರು ಬೇಸರದಿಂದ ನುಡಿದರು, ''ನಿವೇದಿತಾ ನನ್ನವಳು. ಅಡುಗೆ ಮಾಡಿ ಶ್ರೀರಾಮಕೃಷ್ಣರಿಗೆ ಅನ್ನ ನೈವೇದ್ಯ ಮಾಡುವ ಅಧಿಕಾರ ಅವಳಿಗಿದೆ. ಅವಳು ನೀಡಿದ ಪ್ರಸಾದವನ್ನು ಪರಮಾನಂದದಿಂದ ಯಾವ ಅಳುಕೂ ಇಲ್ಲದೆ ನಾನು ಸ್ವೀಕರಿಸುತ್ತೇನೆ. ಈ ವಿಷಯದಲ್ಲಿ ಯಾರಿಗಾದರೂ ವಿರೋಧ ವಿದ್ದರೆ ಅವರು ತಮ್ಮ ಪಾಡಿಗೆ ತಾವಿರಬಹುದು.''

*('ಸೋದರಿ ನಿವೇದಿತಾ' ಗ್ರಂಥದಿಂದ, ಪು.೨೫೫)*

# ಶಿವ ಮತ್ತು ಬುದ್ಧ: ನಿವೇದಿತೆಯ ಕಥನಕೌಶಲ

ಡಾ. ಹೆಚ್.ಎನ್. ಮುರಳೀಧರ

**ನಿವೇದಿತಾ ಬರೆದ ಒಂದು ಸಣ್ಣ ಗ್ರಂಥ, 'Siva and Buddha'. ಇದರಲ್ಲಿ ನಿವೇದಿತಾಳ ಕಥನಶೈಲಿಯ ಸೊಬಗನ್ನು ನೋಡಬಹುದು. ಈ ವಿಷಯವನ್ನು ಕುರಿತು ವಿಮರ್ಶಾತ್ಮಕವಾಗಿ ಬರೆದಿರುವ ಲೇಖಕರು ನಿವೃತ್ತ ಕನ್ನಡ ಪ್ರಾಧ್ಯಪಕರು. ಉತ್ತಮ ವಾಗ್ಮಿಗಳು ಹಾಗೂ ಲೇಖಕರಾಗಿರುವ ಅವರು ಅನೇಕ ಕನ್ನಡ ಕೃತಿಗಳನ್ನು ರಚಿಸಿದ್ದಾರೆ. ಅವರು ಬೆಂಗಳೂರು ರಾಮಕೃಷ್ಣ ಮಠದ ಭಕ್ತರು.**

ಗುರು ಸ್ವಾಮಿ ವಿವೇಕಾನಂದರ ಹಾಗೆಯೇ ಶಿಷ್ಯೆ ಸೋದರಿ ನಿವೇದಿತಾ ಪ್ರತಿಭೆಯ ಮುಖಗಳೂ ಆಯಾಮಗಳೂ ಹಲವಾರು. ಅವರ ಬದುಕು ಹಾಗೂ ಬರವಣಿಗೆಗಳ ಅಧ್ಯಯನ ನಮ್ಮ ಪಾಲಿಗೆ ಹಲವಾರು ಕುತೂಹಲದ ಪುಟಗಳನ್ನು ತೆರೆಯುತ್ತವೆ. ಒಂದು ನಿರ್ದಿಷ್ಟ ಭೌಗೋಳಿಕ ಹಾಗೂ ಸಾಂಸ್ಕೃತಿಕ ಪರಿಸರಗಳ ಮೂಲಕ ರೂಪುಗೊಂಡ ಪ್ರಜ್ಞೆಯೊಂದು ತನಗೆ ಅನ್ಯವಾದ ಸನ್ನಿವೇಶದ ಜೀವನವಿಧಾನ ಹಾಗೂ ಚಿಂತನಕ್ರಮಗಳನ್ನು ಹೇಗೆ ಅರಗಿಸಿಕೊಂಡು ಬೆಳೆಯಬಲ್ಲದು ಎನ್ನುವುದಕ್ಕೆ ಅವರೊಂದು ಅವಶ್ಯವಾದ ಉದಾಹರಣೆಯಾಗಿದ್ದಾರೆ. ಜಗತ್ತಿನ ವಿಭಿನ್ನ ಸಾಂಸ್ಕೃತಿಕ ಸಂದರ್ಭಗಳಲ್ಲಿ ನಿಷ್ಪನ್ನವಾದ ಕಾಣ್ಕೆಗಳನ್ನು ಪರಸ್ಪರ ತಾಕಲಾಟ-ಸಂಘರ್ಷಗಳಲ್ಲಿ ಎದುರಾಗದೆ ವಿಶ್ವಾತ್ಮಕ ಭಿತ್ತಿಯೊಂದರ ಹಿನ್ನೆಲೆಯಲ್ಲಿ ಅವೆಲ್ಲವನ್ನೂ ಸಮನ್ವಯಗೊಳಿಸಬಲ್ಲ ಒಂದು ಮಾದರಿಯಾಗಿಯೂ ಅವರು ನಮಗೆ ಎದುರಾಗುತ್ತಾರೆ. ಪೂರ್ವಪಶ್ಚಿಮಗಳ ನಡುವಿನ ಸೇತುವೆಯಾಗಿ ಅವರು ತಮ್ಮ ಗುರುದೇವನ ಧ್ಯೇಯೋದ್ದೇಶವನ್ನು ಮುಂದುವರಿಸಿದ ಬಗೆ ಇಂದು ಇತಿಹಾಸದ ಹೆಜ್ಜೆಗುರುತುಗಳಾಗಿವೆ.

ಸೋದರಿ ನಿವೇದಿತೆಯದು ಮುಖ್ಯವಾಗಿ ಒಂದು ಸಂಶ್ಲೇಷಣ ಪ್ರಜ್ಞೆ. ವಿಶ್ಲೇಷಣೆಯ ವಿಧಾನವನ್ನು ಅವರು ಧಾರಾಳವಾಗಿ ಅನುಸರಿಸಿರುವರೆಂಬುದು ನಿಜ. ಎಲ್ಲವನ್ನೂ ಬಿಂಗಡಿಸಿಕೊಳ್ಳುವ ಕ್ರಮ ಅವರಲ್ಲಿದೆ. ಆದರೆ ಹೀಗೆ ಬಿಡಿಸಿಕೊಳ್ಳುವುದು ಮಾತ್ರ ವಿಶಾಲವಾದ ಪರಿಧಿಯೊಂದರಲ್ಲಿ ಎಲ್ಲವನ್ನೂ ಮತ್ತೆ ಕೂಡಿಸುವುದಕ್ಕೆ. ಹೀಗೆ ಕೂಡಿಸಿದಾಗ ವಿವಿಧೆಡೆಗಳಿಂದ ಬಂದ ಬಗೆಬಗೆಯ ಬಣ್ಣಗಳು ಅಲ್ಲಿ ಹೊಸದೊಂದು ಚಿತ್ರವನ್ನು ರಚಿಸುತ್ತವೆ. ಎಲ್ಲಸಾದೃಶ್ಯ-ವೈದೃಶ್ಯಗಳ ನಡುವೆ ಹೊಸದೊಂದು ಪ್ರೀತಿಯ ಸಹಬಾಳ್ವೆಯೊಂದರ ಅನಾವರಣವಾಗುತ್ತದೆ. ಚಿಂತನದ ಮಂಥನ ಅಮೃತದ ಹುಟ್ಟಿಗೆ ಕಾರಣವಾಗುವ ಮಾದರಿ ಅದು.

ನಿವೇದಿತೆಯ ಬರವಣಿಗೆಯ ಹರವು ವಿಸ್ತಾರವಾದುದು. ಅಲ್ಲಿ ವಸ್ತುವೈವಿಧ್ಯವಿರುವಂತೆಯೇ ಅಭಿವ್ಯಕ್ತಿ ಕ್ರಮದ ವೈವಿಧ್ಯವೂ ಇದೆ. ತಾತ್ತ್ವಿಕತೆಯೊಂದಿಗೆ ಕಥನಾತ್ಮಕತೆಯನ್ನು ಚಿಂತನೆಯ ಗಾಂಭೀರ್ಯದೊಂದಿಗೆ ಭಾವದ ಮೃದುಲಾಸ್ಯವನ್ನು ಮೇಳೈಸಿಕೊಂಡಿರುವ ನಿರೂಪಣೆ ಇಲ್ಲಿದೆ. ಈ ಹಿನ್ನೆಲೆಯಲ್ಲಿ ಅವರ ಕಿರುಬರಹವೊಂದನ್ನು ಅವಲೋಕಿಸುವ ಕಿರುಪ್ರಯತ್ನ ಇದು.




**'ಶಿವ ಮತ್ತು ಬುದ್ಧ'** ('Siva and Buddha') ಎಂಬ ಹೆಸರಿನ ಕಿರುಪುಸ್ತಕವೊಂದು ನಿವೇದಿತೆಯ ಮರಣಾನಂತರ ೧೯೧೯ ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿದೆ. ಅವರ ಹಸ್ತಪ್ರತಿಗಳ ಕಡತದಲ್ಲಿ ದೊರೆತ ಈ ಕಥನಾತ್ಮಕ ಬರಹಗಳ ಪುಟಗಳನ್ನು ಕಲ್ಕತ್ತೆಯ ಉದ್ಬೋಧನ ಕಾರ್ಯಾಲಯ ಪ್ರಕಟಿಸಿದೆ. ಈ ಬಗೆಯ ಕಥನಗಳ ಸರಣಿಯೊಂದನ್ನು ಬರೆಯುವ ಉದ್ದೇಶ ಲೇಖಕಿಗೆ ಇದ್ದುದಾಗಿ ಕಂಡುಬರುವುದಿಲ್ಲವೆಂದೂ ಪ್ರಕಾಶಕರು ಅಭಿಪ್ರಾಯಪಡುತ್ತಾರೆ. ಹಿಂದೂ ಪೌರಾಣಿಕತೆಯ ಕಥನ ಹಾಗೂ ವ್ಯಕ್ತಿತ್ವಗಳ ಹಿಂದಿರುವ ಕೇಂದ್ರ ಆಶಯಗಳನ್ನು ಪಾಶ್ಚಾತ್ಯ ಓದುಗರಿಗೆ ಪರಿಚಯವಾಗುವುದು ಈ ಬರವಣಿಗೆಗಳ ಉದ್ದೇಶವಾಗಿದೆ. ಇಂತಹದೇ ಬರವಣಿಗೆಗಳ ಇನ್ನೊಂದು ಕೃತಿ 'Myths and Legends of the Hindus and Buddhists'. ಇದಕ್ಕಾಗಿ ಕೂಡ ನಿವೇದಿತೆ

ಕೆಲವು ಲೇಖನಗಳನ್ನು ಬರೆದಿದ್ದು ಅವರ ಕಾಲಾನಂತರ ಆನಂದ ಕೆ.ಕುಮಾರಸ್ವಾಮಿ ಅವರು ಇದಕ್ಕೆ ಇನ್ನೂ ಕೆಲವು ಕಥನಗಳನ್ನು ಬರೆದು ಸೇರಿಸಿದ ಬಳಿಕ ಪ್ರಕಟವಾಗಿದೆ.

ಶಿವನ ಪರಿಕಲ್ಪನೆಯನ್ನು ನಿವೇದಿತಾ ವ್ಯಾಖ್ಯಾನಿಸುವ ಕ್ರಮ ದಲ್ಲಿ ಒಂದು ವೈಧಾನಿಕತೆ ಇದೆ. ಪೌರಾಣಿಕತೆಯನ್ನು ನಾಡಿನ ಜನರ ಬದುಕಿನ ವಿನ್ಯಾಸ, ಭೌಗೋಳಿಕ ವಿವರಗಳು, ಲೌಕಿಕ ಹಾಗೂ ಲೋಕೋತ್ತರ ನಂಬಿಕೆಗಳ ಸ್ವರೂಪ ಇವುಗಳ ಸಮಗ್ರತೆಯ ಒಂದು ಭಾಗವಾಗಿ ಗ್ರಹಿಸುವ ಹಾಗೂ ವಿವರಿಸುವ ವೈಧಾನಿಕತೆ ಅದು. ಲೋಕದ ವಿನ್ಯಾಸದ ಮೂಲಕವೇ ಲೋಕೋತ್ತರವನ್ನು ಗ್ರಹಿಸುವ ವಿನ್ಯಾಸವೂ ಇದಾಗಿದೆ. ಹೀಗಾಗಿಯೇ ಪೌರ್ವಾತ್ಯ ತಾತ್ತ್ವಿಕತೆಗೂ ಪಾಶ್ಚಾತ್ಯ ತಾತ್ತ್ವಿಕತೆಗೂ ಇರುವ ಗುಣಾತ್ಮಕ ಅಂತರವನ್ನು ಗ್ರಹಿಸಲು ಅಗತ್ಯವಾದ ನೆಲೆಗಟ್ಟೊಂದನ್ನು ಕೂಡ ಇದು ನಿವೇದಿತೆಗೆ ಒದಗಿಸಿದೆ.

ಭಾರತೀಯ ತಾತ್ತ್ವಿಕತೆಯನ್ನು ನಿವೇದಿತಾ ಪ್ರವೇಶಿಸುವುದು 'ಕಾಡಿನ' ಮೂಲಕ. ಅರಣ್ಯ, ಯಜ್ಞ, ಮಂತ್ರಘೋಷ, ಅಗ್ನಿ ಮತ್ತು ಯಜ್ಞ-ಕುಂಡದ ಭಸ್ಮ ಕೂಡ ನಿವೇದಿತೆಯ ಪಾಲಿಗೆ ಕೇವಲ ಯಾಂತ್ರಿಕ ಆಚರಣೆಗೆ ಸಂಬಂಧಪಟ್ಟ ವಿವರಗಳಲ್ಲ. ಅವು ಮನುಷ್ಯನ ನಿಸರ್ಗದೊಂದಿಗೆ, ತನ್ಮೂಲಕ ದೈವತ್ವದೊಂದಿಗೆ ಏಕತೆಯನ್ನು ಸಾಧಿಸಲು ನೆರವಾಗುವ ಬದುಕಿನ ವಾಹಕಗಳು. ಅವರ ಪ್ರಕಾರ ತಪಸ್ವಿಯೊಬ್ಬನು ಭಸ್ಮೋದ್ಧೂಳಿತನಾಗುವುದೆಂದರೆ ಭಗವಂತನಿಂದ ತನ್ನನ್ನು ತಾನು ಆವರಿಸಿಕೊಳ್ಳುವುದು ಮತ್ತು ಜಗತ್ತಿನಿಂದ ತನ್ನನ್ನು ಬೇರ್ಪಡಿಸಿಕೊಳ್ಳುವುದು. ಆದರೆ ನಿವೇದಿತೆಯ ಗಮನಿಕೆ ಇಷ್ಟಕ್ಕೇ ನಿಲ್ಲುವುದಿಲ್ಲ. ಅವರು ತಮ್ಮ ಓದುಗರಿಗೆ – ಮುಖ್ಯವಾಗಿ ಐರೋಪ್ಯರಿಗೆ–ಕೆಲವು 'ಪ್ರಯೋಗಾತ್ಮಕ' ಸೂಚನೆಗಳನ್ನು ಕೊಡುತ್ತಾರೆ! ಮುಂದಿನ ಮಾತುಗಳನ್ನು ಗಮನಿಸಿ:

> ''ಒಂದು ಪಂಗಡದ ಸಂನ್ಯಾಸಿಗಳಿದ್ದಾರೆ; ಅವರು ಹೀಗೆ ಭಸ್ಮವನ್ನು ಬಳಿದುಕೊಂಡು ಕೇವಲ ಕೇಸರಿ ಬಣ್ಣದ ಕೌಪೀನವನ್ನೋ ಅಥವಾ ಭೂರ್ಜಪತ್ರವನ್ನೋ ತೊಗಟೆಯನ್ನೋ ಧರಿಸುತ್ತಾರೆ. ಇಂಥವರೊಬ್ಬರನ್ನು ಸ್ವಲ್ಪ ದೂರದಲ್ಲಿ ಕಂಡಾಗ ನೀವು ಮೊದಲಿಗೆ ಗಮನಿಸುವ ಅಂಶವೆಂದರೆ ಅವರ ಬಿಳುಪು. ನಿಮಗೆ ಅವಕಾಶವಾದಾಗ ಮನೆಯೊಳಗಿನ ಬೆಂಕಿಯ ಗೂಡಿನಿಂದ ಯಾವಾಗಲಾದರೂ ಸ್ವಲ್ಪ ಬೂದಿಯನ್ನು ತೆಗೆದುಕೊಳ್ಳಿ. ಅದನ್ನು ನಿಮ್ಮ ಒಂದು ಕೈಗೂ ತೋಳಿಗೂ ಬಳಿದುಕೊಳ್ಳಿ, ಆಗ ನಿಮಗೆ ಒಂದು ಸತ್ಯ ಗೊತ್ತಾಗುತ್ತದೆ. ಪ್ರಪಂಚದಲ್ಲಿ ಕರಿಯರು ಮತ್ತು ಬಿಳಿಯರು ಎಂದು ಎರಡೇ ಇರುವುದು ಸುಳ್ಳು. ಹಳದಿಯವರು, ನಸುಗೆಂಪಿ ನವರು, ಕಂದುಬಣ್ಣದವರು ಎಲ್ಲರೂ ಇದ್ದಾರೆ – ಬಣ್ಣ ಸ್ವಲ್ಪ ಹೆಚ್ಚು, ಸ್ವಲ್ಪ ಕಡಿಮೆ. ಆದರೆ ಮನುಷ್ಯ ಚರ್ಮ ಬೆಳ್ಳಗಿದ್ದರೆ ಹೇಗಿರುತ್ತದೆ ಎನ್ನುವುದಕ್ಕೆ ಈ ಬೂದಿಯನ್ನು ಬಳಿದುಕೊಂಡೇ ನೋಡಬೇಕು. ಇದರಿಂದ ಈ ಜನಗಳ ಮುಂದಿನ ಭಾವನೆ ಏನೆಂದು ನಿಮಗೆ ಅರ್ಥವಾಯಿತೆ? ಆ ಪರಿಪೂರ್ಣ ಪಾವಿತ್ರ್ಯವೂ ಈ ಬಿಳುಪೂ ಸದಾ ಒಟ್ಟೊಟ್ಟಿಗೇ ಇವೆ.''

ಇದು ನಿವೇದಿತೆಯ ಬರಹದ ಮಾದರಿ. ಶಿವನನ್ನು ಅರ್ಥ ಮಾಡಿಕೊಳ್ಳುವುದೆಂದರೆ ಕೇವಲ ಪುರಾಣದ ಕಥೆಯನ್ನು ಅರ್ಥ ಮಾಡಿಕೊಳ್ಳುವುದಲ್ಲ; ಆ ಶಿವನ ಶಿವತ್ವವು ಹೇಗೆ ಜನರ ಬದುಕಿನ ಅನುಷ್ಠಾನಗಳಲ್ಲಿ ಹಾಸುಹೊಕ್ಕಾಗಿದೆ ಎಂಬುದನ್ನು ಮನದಟ್ಟು ಮಾಡಿಕೊಳ್ಳುವುದು. ಇದನ್ನು ಕೂಡ ಕೇವಲ ಬೌದ್ಧಿಕವಾಗಿ ಗ್ರಹಿಸುವುದಲ್ಲ; ಇದನ್ನು ಇಂದು ಈಗ ನಾವಿರುವ ಸನ್ನಿವೇಶದಲ್ಲೇ ನಮ್ಮ ಅನುಭವವನ್ನಾಗಿ ಮಾರ್ಪಡಿಸಿಕೊಳ್ಳುವುದು. ಶಿವನು ಅರ್ಥವಾಗಬೇಕೆಂದರೆ ಬೂದಿ ಬಳಿದುಕೊಳ್ಳಬೇಕು!

ತಾತ್ತ್ವಿಕ ವಿಕಾಸದಲ್ಲಿ ನಿಸರ್ಗದೊಡಗಿನ ಅನುಸಂಧಾನವು ವಹಿಸಿದ ಪಾತ್ರ ನಿವೇದಿತೆಯ ಬರವಣಿಗೆಯಲ್ಲಿ ಪ್ರಮುಖವಾಗಿ ಕಾಣಿಸಿ ಕೊಳ್ಳುತ್ತದೆ. ನಿಸರ್ಗದ ವ್ಯಕ್ತೀಕರಣದ ಪ್ರಕ್ರಿಯೆಯ ಹಿಂದಿರುವ ಜೀವಂತಿಕೆಯನ್ನು ಅವರು ಪ್ರಧಾನವಾಗಿ ವಿವೇಚಿಸುತ್ತಾರೆ. ಈ ಹಿನ್ನೆಲೆಯಲ್ಲಿ ಹಿಮಾಲಯದ ಸನ್ನಿವೇಶಕ್ಕೂ ಶಿವಕಲ್ಪನೆಗೂ ಇರುವ ಸಂಬಂಧವನ್ನು ಅವರು ವಿವರಿಸಿರುವ ರೀತಿ ಮನೋಜ್ಞವೂ ಕಾವ್ಯಾತ್ಮಕವೂ ಆಗಿದೆ:

> ಆ ಹಿಮಾಚ್ಛಾದಿತ ಶಿಖರಗಳು ಅವರ (ಭಾರತೀಯರ) ಒಲುಮೆಯ ಪ್ರಧಾನ ಕೇಂದ್ರಗಳಾದವು. ನೋಡಿ ಅವುಗಳನ್ನು! ಲೋಕೋತ್ತರವಾಗಿ ಮೌನದಲ್ಲಿ ತಲೆಯೆತ್ತಿ ನಿಂತಿರುವ, ಶೈತ್ಯದಲ್ಲಿಯೂ ಔನ್ನತ್ಯದಲ್ಲಿಯೂ ಅತ್ಯುನ್ನತವಾಗಿದ್ದರೂ ಮಾತಿಗೆ ಮೀರಿದ ಸೌಂದರ್ಯವನ್ನು ಹೊರಸೂಸುತ್ತಿರುವ ಅವುಗಳನ್ನು ಯಾವುದಕ್ಕೆ ಹೋಲಿಸಬಹುದು? ಅವು ಓರ್ವ ಮಹಾಮುನಿಯಂತೆ, ಭಸ್ಮದಿಂದ ಆಚ್ಛಾದಿತವಾಗಿವೆ; ಧ್ಯಾನದಾಳದಲ್ಲಿ ಮುಳುಗಿವೆ; ಶಾಂತ ಮತ್ತು ಏಕಾಂತ! ಅವು, ಅವು ಹೇಗಿವೆಯೆಂದರೆ ಸ್ವಯಂ ಮಹಾದೇವನ ಹಾಗೆ! ಶಿವ, ಮಹಾದೇವ!
>
> ಈ ಭಾವನೆ ಬಂದ ಬಳಿಕ ಹಿಂದೂ ಪ್ರಜ್ಞೆ ಶಿವನಿಗಾಗಿ ಎಲ್ಲ ಬಗೆಯ ಪರಿಕರಗಳನ್ನೂ ಸಂಕೇತಗಳನ್ನೂ ಸೃಜಿಸತೊಡಗಿತು– ಕೆಲವೊಮ್ಮೆ ಉರಿಯ ನಾಲಿಗೆ, ಕೆಲವೊಮ್ಮೆ ಪರ್ವತ, ಕೆಲವೊಮ್ಮೆ ಪ್ರಧಾನವಾಗಿ ಕುಟಿಯ ತಾಪಸಿ – ಇವೆಲ್ಲವೂ ಸೇರಿ ಶಿವನ ಚಿತ್ರವನ್ನು ಪೂರ್ಣಗೊಳಿಸಿದವು – ಮಹಾ ದೇವ!
>
> ಯಜ್ಞಕ್ಕೆ ಮರದ ತುಂಡುಗಳನ್ನು ತರುವುದು ಎತ್ತಿನ ಮೇಲೆ; ಶಿವನು ಏರಿ ಬರುವುದೂ ಎತ್ತನ್ನು.
>
> ಪರ್ವತ ಶಿಖರಗಳ ಮೇಲೆ ಚಂದ್ರನು ಬೆಳಗುತ್ತಾನೆ, ಶಿವನ ನೆತ್ತಿಯ ಮೇಲೆ ಚಂದ್ರನಿರುವನು.
>
> ಬಾಗಿಲಿನಿಂದ ಬಾಗಿಲಿಗೆ ಭಿಕ್ಷೆ ಬೇಡುವ ನಿಜತಾಪಸಿಯಂತೆ ಶಿವನೂ ಸಣ್ಣ ಕೊಡುಗೆಗಳಿಂದಲೇ ತೃಪ್ತನಾಗುವನು.

ನಿವೇದಿತೆಯ ನಿರೂಪಣೆಯಲ್ಲಿ ತಾತ್ತ್ವಿಕತೆಯೂ ಕಾವ್ಯಾತ್ಮಕತೆಯೂ ಸಮರಸಗೊಳ್ಳುವುದನ್ನು ಕಾಣುತ್ತೇವೆ ಇಷ್ಟಾದರೂ ಅವು ಕೇವಲ ಲಹರಿಯ ಬರವಣಿಗೆಯಲ್ಲ. ಅಧ್ಯಯನದ ಒಳನೋಟಗಳನ್ನು ಅವುಗಳಲ್ಲಿ ಸದಾ ಕಾಣಲು ಸಾಧ್ಯವಿದೆ. ನಿವೇದಿತೆ ಪ್ರಾಥಮಿಕವಾಗಿ ಅತ್ಯುತ್ತಮ ಕಥೆಗಾರ್ತಿ. ಅವರು ಏನನ್ನೇ ಹೇಳಲಿ ಅದು ಕಥೆಯಾಗುತ್ತದೆ. ಇಷ್ಟಲ್ಲದೆ ಅದು ನಿರ್ಲಿಪ್ತ ರೀತಿಯ ಕಥಾನಕದ ಮಾದರಿಯಲ್ಲಿ, ಓದುಗನನ್ನು ಸಂಬೋಧಿಸಿಕೊಂಡೇ ಮುಂದುವರಿಯುವ ರೀತಿ ಅವರದು. ಅವರು ನಿರೂಪಿಸುವ ಕಥೆಗಳು ಕೆಲವೊಮ್ಮೆ ಜನಪದ ಮೂಲದಿಂದ ಬಂದಿದ್ದರೆ ಇನ್ನು ಕೆಲವೊಮ್ಮೆ ಪುರಾಣಗಳಿಂದಲೂ ಕಾವ್ಯಗಳಿಂದಲೂ ಆಯ್ದಿರುವಂಥವು.



ಒಬ್ಬ ಬಡ ಬೇಟೆಗಾರನ ಕಥೆಯನ್ನು ನಿವೇದಿತಾ ಹೇಳುತ್ತಾರೆ. ಕಾಡಿನಲ್ಲಿ ದಿನವೆಲ್ಲ ಅಲೆದರೂ ಬೇಟೆ ಸಿಕ್ಕದ ಆತ ರಾತ್ರಿ ಕಾಡಿನಲ್ಲೆ ಉಳಿದು ಆಶ್ರಯಕ್ಕಾಗಿ ಮರವೊಂದನ್ನು ಹತ್ತಿ ಕೂಡುತ್ತಾನೆ. ಅದು ಬಿಲ್ವದ ಮರವಾಗಿರುತ್ತದೆ. ಆ ಮರದ ಕಣ್ಣಿಗೆ ಒಂದು ಶಿವಲಿಂಗ ವಿರುತ್ತದೆ. ಬೇಟೆಗಾರ ಮರದ ಎಲೆಗಳನ್ನು ಕಿತ್ತು ಕಿತ್ತು ಕೆಳಗೆ ಹಾಕಿದಾಗ ಅವು ಆ ಲಿಂಗದ ಮೇಲೆ ಬೀಳುತ್ತವೆ. ತನ್ನ ಹೆಂಡತಿ-ಮಕ್ಕಳು ಹಸಿವಿನಿಂದ ಸಂಕಟಪಡುತ್ತಿರುವುದನ್ನು ನೆನೆದು ದುಃಖಿಸಿದಾಗ ಅವನ ಕಣ್ಣೀರ ಹನಿಗಳು ಲಿಂಗದ ಮೇಲೆ ಉದುರುತ್ತವೆ. ಬಿಲ್ವ ಮರದ ಕೊಂಬೆ ಅವನ ಭಾರಕ್ಕೆ ಕುಸಿದಾಗ ಅವನೂ ನೆಲದ ಮೇಲೆ ಬೀಳುತ್ತಾನೆ. ಅದೇ ರಾತ್ರಿ, ಒಂದು ಕಾಳಸರ್ಪ ಕಡಿದು ಮಡಿಯುತ್ತಾನೆ. ದೇವದೂತರು ಅವನನ್ನು ಶಿವಲೋಕಕ್ಕೆ ಒಯ್ಯುತ್ತಾರೆ. ಅಲ್ಲಿ ಕೆಲವರು ಇದನ್ನು ಆಕ್ಷೇಪಿಸಿದಾಗ ಶಿವ ನುಡಿಯುತ್ತಾನೆ: ''ಯಾಕೆ? ಅವನು ಬಿಲ್ವದಳಗಳಿಂದಲೂ ತನ್ನ ಕಂಬನಿಯಿಂದಲೂ ನನ್ನನ್ನು ಪೂಜಿಸಿಲ್ಲವೆ?''

ಹೀಗೆಯೇ ಅಮೃತಮಥನದ ಸಂದರ್ಭದಲ್ಲಿ ಶಿವನು ಕಾಳಕೂಟವನ್ನು ಕುಡಿದ ಕಥೆಯಿದೆ. ಅನಂತರ ಕಿರಾತ ವೇಷದ ಶಿವನೊಂದಿಗೆ ಹೋರಾಡಿದ ಅರ್ಜುನನ ಕಥೆಯಿದೆ.

ಕಡೆಯಲ್ಲಿ ನಿವೇದಿತಾ ಕಂಡರಿಸುವ ಶಿವನ ಚಿತ್ರ ಹೃದಯಸ್ಪರ್ಶಿಯಾಗಿದೆ. ಶಿವನ ನಿವಾಸವೇನೋ ಶಾಂತವೂ ನೀರವವೂ ಆದ ಮಾನಸ ಸರೋವರದ ಬಳಿಯ ಕೈಲಾಸದಲ್ಲಿ. ಆದರೆ ಜಗತ್ತಿನ ಅದೃಷ್ಟಶಾಲಿಗಳ ನಡುವೆ ಆಶ್ರಯವನ್ನು ಪಡೆಯಲಾಗದ ಚಿತ್ರವಿಚಿತ್ರವಾದದ್ದೆಲ್ಲವೂ ಅವನ ಬಳಿ ನೆರೆದವು! ಸರ್ಪವನ್ನಾತ ಕೊರಳಲ್ಲಿ ಧರಿಸಿದ. ಆಶ್ರಯಕ್ಕಾಗಿ ಧಾವಿಸಿದ ಮುದಿ ಬಸವನನ್ನು ಏರಿ ಕುಳಿತ. ಜಗತ್ತಿಗೆ ಸದಾ ತೊಂದರೆಯನ್ನುಂಟುಮಾಡುವ ಉನ್ಮತ್ತ ಭೂತ-ಪಿಶಾಚಿಗಳ ಗಣವನ್ನು ತನ್ನ ಸಂಗಡಿಗರನ್ನಾಗಿ ಇರಿಸಿಕೊಂಡ. ಹೀಗೆ ಸಕಲ ತ್ಯಾಜ್ಯವೂ ಸ್ವೀಕಾರಾರ್ಹವಾಗಿ ಆತ ದಯೆಯ ಮೂರುತಿಯಾದ.

ಹೀಗೆ ನಿವೇದಿತೆಯ ಕಥಾಪ್ರವಾಹದಲ್ಲಿ ಮೇಲಿನ ಸ್ತರದಲ್ಲಿ ಘಟನಾವಳಿಗಳು ಪ್ರವಹಿಸುತ್ತಿದ್ದರೂ ಅದರ ಅಂತರಾಳದಲ್ಲಿ ಆಧ್ಯಾತ್ಮಿಕ ತಾತ್ತ್ವಿಕತೆಯೊಂದು ಸದಾ ಗುಪ್ತಗಾಮಿನಿಯಾಗಿರುತ್ತದೆ.

ಈ ಕಿರುಹೊತ್ತಿಗೆಯ ಎರಡನೆಯ ಭಾಗದ ಕಥಾನಕದ ಶೀರ್ಷಿಕೆ 'ಬುದ್ಧ ಮತ್ತು ಯಶೋಧರಾ'. ಈ ಕಥಾವಸ್ತು ಮಾತ್ರ ಪರಿಚಿತವಾದುದೇ. ಆದರೆ ಇಲ್ಲಿ ಮುಖ್ಯವಾಗಿ ಗಮನ ಸೆಳೆಯುವುದು ನಿವೇದಿತೆಯ ನಿರೂಪಣಾ ವಿಧಾನ. ಬಹಳಷ್ಟು ಸಲ ನಾವು ನಿರ್ಲಕ್ಷಿಸಬಹುದಾದ ಸಣ್ಣ ವಿವರಗಳನ್ನು ಕೂಡ ವಿಶೇಷಾರ್ಥದ ಕಡೆಗೆ ಕೊಂಡೊಯ್ಯುವಂತೆ ಬಣ್ಣಿಸುವ ರೀತಿ ಮನಸೆಳೆಯುತ್ತದೆ. ಕಥಾಭಿತ್ತಿಯ ನಿರೂಪಣೆ ಕಿರಿದಾಗಿದ್ದರೂ ಕೂಡ ಪಾತ್ರಗಳ ಅಂತರಂಗಪ್ರವೇಶ ಸಾಧ್ಯವಾಗಿರುವುದು ಇಲ್ಲಿನ ಹೆಚ್ಚುಗಾರಿಕೆ, ಇಷ್ಟರ ಜೊತೆಗೆ ಇಲ್ಲಿ ಬುದ್ಧನೊಂದಿಗೆ ಯಶೋಧರೆಯೂ ವಿಶೇಷವಾದ ಪ್ರಾಧಾನ್ಯವನ್ನು ಪಡೆದಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಇದು ಕಥಾನಕದ ಶೀರ್ಷಿಕೆಯಲ್ಲೂ ಧ್ವನಿತವಾಗಿದೆ. ಹೀಗಾಗಿ ಇಲ್ಲಿರುವ ಅತ್ಯಂತ ಕಡಮೆಯಾದ ಅವಕಾಶದಲ್ಲೂ ಯಶೋಧರೆಯ ವ್ಯಕ್ತಿತ್ವಕ್ಕೆ ದೊರೆತಿರುವ ಈ ವಿಶೇಷವಾದ ಆಯಾಮದ ಹಿನ್ನೆಲೆಯಲ್ಲಿ ನಿವೇದಿತೆಯ ವೈಯಕ್ತಿಕ ಮನೋಧರ್ಮವೂ ಕೆಲಸ ಮಾಡಿರುವಂತೆ ತೋರುತ್ತದೆ.

'ಶಿವ ಮತ್ತು ಬುದ್ಧ' ಕಿರುಹೊತ್ತಿಗೆ ಗಾತ್ರದಲ್ಲಿ ಚಿಕ್ಕದಾದರೂ ಅದರೊಳಗೆ ಪ್ರತಿಫಲಿತವಾಗಿರುವ ನಿವೇದಿತೆಯ ಪ್ರಾತಿನಿಧಿಕ ವ್ಯಕ್ತಿತ್ವದಿಂದಾಗಿ ಮೌಲಿಕವಾದುದಾಗಿದೆ. ಅಲ್ಲದೆ ಅದರ ಮೂಲಕ ಹೊರಪಡುವ ನಿವೇದಿತೆಯ ಸಾಹಿತ್ಯಾಭಿವ್ಯಕ್ತಿಯ ಕೌಶಲ ಕೂಡ ಆ ವ್ಯಕ್ತಿತ್ವದ ವಿಶೇಷ ಆಯಾಮವೊಂದನ್ನು ಪ್ರಕಟಪಡಿಸುವಲ್ಲಿ ಯಶಸ್ವಿಯಾಗಿದೆ. ಈ ಕುರಿತಾಗಿ ಆನಂದ ಕುಮಾರಸ್ವಾಮಿಯವರ ಮಾತುಗಳು ಗಮನೀಯವಾಗಿವೆ: ''ಸೋದರಿ ನಿವೇದಿತಾ ಭಾರತೀಯ ಜೀವನ ಹಾಗೂ ಸಾಹಿತ್ಯಗಳ ಅಧ್ಯಯನದಲ್ಲಿ ಪಾಶ್ಚಾತ್ಯ ಶಿಕ್ಷಣ ಹಾಗೂ ಸಮಾಜದ ವಿಜ್ಞಾನಗಳ ಅಧಿಕೃತ ಜ್ಞಾನವನ್ನು ಬಳಕೆಗೆ ತಂದರು. ತಾವು ಸಮರ್ಪಿಸಿಕೊಂಡ ದೇಶದ ಜನತೆ ಹಾಗೂ ಆದರ್ಶಗಳ ಬಗೆಗೆ ಅವರ ಅತ್ಯುತ್ಸಾಹವೂ ಅನನ್ಯವಾದುದು... ತಮ್ಮ ಕೃತಿಗಳ ಮೂಲಕ ನಿವೇದಿತಾ ಯೂರೋಪಿಗೆ ಭಾರತದ ವ್ಯಾಖ್ಯಾನಕಾರರು ಮಾತ್ರವೇ ಆಗಿದ್ದಲ್ಲ. ಅದಕ್ಕಿಂತ ಹೆಚ್ಚಾಗಿ ಅವರು ನವಜನಾಂಗದ ಭಾರತೀಯ ವಿದ್ಯಾರ್ಥಿಗಳಿಗೆ ಸ್ಫೂರ್ತಿಯ ಸೆಲೆಯಾಗಿ ಅವರು ಆಂಗ್ಲೀಕರಣಕ್ಕೆ ಹಾತೊರೆವ ಅಗತ್ಯವಿಲ್ಲವೆಂಬುದನ್ನೂ, ಎಲ್ಲಾ ನಿಜವಾದ ಪ್ರಗತಿ ರಾಜಕೀಯ ವಾದವಿವಾದಗಳಿಂದ ಭಿನ್ನವಾಗಿಯೇ ನಿಲ್ಲುವಂಥದಾಗಿದ್ದು, ಅದು ರಾಷ್ಟ್ರೀಯ ಆದರ್ಶಗಳ ಮೇಲೆ, ಅದಾಗಲೇ ಸ್ಪಷ್ಟವಾಗಿ ಧರ್ಮ ಹಾಗೂ ಕಲೆಗಳಲ್ಲಿ ವ್ಯಕ್ತವಾದ ಆಶಯಗಳ ಮೇಲೆ ಅವಲಂಬಿತವಾದುದಾಗಿರಬೇಕು ಎಂಬುದನ್ನೂ ಮನಗಾಣಿಸಿದರು.'' 

# ನಿವೇದಿತಾ ಕೃತಿ : Footfalls of Indian History

ಸ್ವಾಮಿ ರಾಘವೇಶಾನಂದ

ಚಾರಿತ್ರಿಕ ಪ್ರಜ್ಞೆ ಹಾಗೂ ಸರಿಯಾದ ಇತಿಹಾಸದ ವಿಶ್ಲೇಷಣೆ ನವಭಾರತ ನಿರ್ಮಾಣಕ್ಕೆ ಅತ್ಯಗತ್ಯವೆಂದು ಅರಿತಿದ್ದ ನಿವೇದಿತಾ, ಶಿಕ್ಷಣದಲ್ಲೂ ಚರಿತ್ರೆಯ ಪ್ರಾಮುಖ್ಯತೆಯನ್ನು ಕುರಿತು ಪ್ರತಿಪಾದಿಸುತ್ತಾಳೆ. ಅವಳ 'Footfalls of Indian History' ಕೃತಿಯ ಸಂಕ್ಷಿಪ್ತ ಪರಿಚಯ ಮಾಡಿ ಕೊಟ್ಟಿರುವ ಪೂಜ್ಯ ಸ್ವಾಮೀಜಿಯವರು ಉದಕಮಂಡಲ ರಾಮಕೃಷ್ಣ ಮಠದ ಮುಖ್ಯಸ್ಥರು. ಉತ್ತಮ ವಾಗ್ಮಿಗಳು ಮತ್ತು ಸಂಘಟಕ ರಾಗಿರುವ ಸ್ವಾಮೀಜಿಯವರು ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ.

ನಿವೇದಿತೆಯ ೧೫೦ನೆ ಯ ಜನ್ಮಶತಮಾನೋತ್ಸವ ದೇಶದ ಎಲ್ಲೆಡೆ ವಿವಿಧ ರೀತಿಯಲ್ಲಿ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದೆ. ಭಾರತಕ್ಕೆ ಅವಳ ಕೊಡುಗೆ ಎಷ್ಟು ಅಪಾರವಾದುದ್ದೆಂದರೆ ಅವಳಿಗೆ ಎಷ್ಟು ಕೃತಜ್ಞತೆ ಸಲ್ಲಿಸಿದರೂ ಸಾಲದು. ಅವಳದು ದೊಡ್ಡ ಜೀವನ. ಅವಳ ಕೃತಿಗಳಂತೂ ಎಲ್ಲ ದೇಶಭಕ್ತರನ್ನೂ ನಾಚಿಸುವಂಥದ್ದು. ಅವಳು ಭಾರತದ ವಿವಿಧ ಮುಖಗಳನ್ನು ಎಷ್ಟು ಆಳವಾಗಿ ಅಧ್ಯಯನ ಮಾಡಿದ್ದಳು, ಅದನ್ನು ಎಷ್ಟು ಮನಮೋಹಕವಾಗಿ ಪಾಶ್ಚಾತ್ಯರಿಗೆ ಪರಿಚಯ ಮಾಡಿಕೊಟ್ಟಿದ್ದಾಳೆ ಎನ್ನುವುದಕ್ಕೆ ಅವರ ಈ ಕೃತಿಯೂ ಒಂದು ಉದಾಹರಣೆ.

೧೯೧೧ರ ಅಕ್ಟೋಬರ್ ತಿಂಗಳ ೧೩ನೇ ತಾರೀಖು ಡಾರ್ಜಿಲಿಂಗ್‌ನಲ್ಲಿ ನಿವೇದಿತಾ ದೇಹತ್ಯಾಗ ಮಾಡಿದಳು. ಆಗ ಅವಳಿಗೆ ಕೇವಲ ೪೪ ವರ್ಷಗಳು. ಆಕೆ ಭಾರತಕ್ಕೆ ಬಂದುದು ೧೮೯೮ರಲ್ಲಿ, ಅಂದರೆ, ಕೇವಲ ೧೩ ವರ್ಷಗಳಲ್ಲಿ ಎಂತಹ ಅಗಾಧ ಸಾಧನೆಯನ್ನು ಮಾಡಿ, ಭಾರತವನ್ನು ಆಮೂಲಾಗ್ರವಾಗಿ ಅರಿತುಕೊಂಡು, ಅದ್ಭುತ ತ್ಯಾಗಮಯ ಜೀವನ ನಡೆಸಿ, ತನ್ನ ಕಾರ್ಯದ ಮೂಲಕ, ಕೃತಿಗಳ ಮೂಲಕ ಭಾರತದ ಹಿರಿಮೆಯನ್ನು ಪ್ರಪಂಚಕ್ಕೆ ಎತ್ತಿ ಹಿಡಿದಳು.

ಸ್ವಾಮಿ ವಿವೇಕಾನಂದರಿಗೆ ಅವಳ ಮೇಲೆ ಅಪಾರ ವಿಶ್ವಾಸವಿತ್ತು. ೧೮೯೭ರಲ್ಲಿ ಅವಳು ಬರುವುದಕ್ಕೆ ಅಪ್ಪಣೆಯಿತ್ತು ಹೀಗೆ ಒಂದು ಪತ್ರ ಬರೆದರು: ''ಭಾರತದಲ್ಲಿ ನೀನು ಮುಂದೆ ದೊಡ್ಡ ಕೆಲಸ ಮಾಡಬೇಕಾಗಿದೆಯೆಂದು ಈಗ ನನಗೆ ಮನದಟ್ಟಾಗಿದೆ. ಈ ಕೆಲಸಕ್ಕೆ ಬೇಕಾಗಿರುವುದು ಗಂಡಸಲ್ಲ, ಹೆಂಗಸು; ಅದರಲ್ಲೂ ಮಹಿಳೆಯರಿಗಾಗಿ ಕೆಲಸ ಮಾಡಲು ನಿಜವಾದ ಸಿಂಹಿಣಿಯೇ ಬೇಕು... ನಿನ್ನ ವಿದ್ಯಾಭ್ಯಾಸ, ಪ್ರಾಮಾಣಿಕತೆ, ಚಿತ್ತಶುದ್ಧಿ, ಅಪಾರ ಪ್ರೇಮ, ದೃಢ ನಿಶ್ಚಯ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ನಿನ್ನ ಧಮನಿಗಳಲ್ಲಿ ಹರಿಯುತ್ತಿರುವ ಕೆಲ್ಟಿಕ್ ರಕ್ತ – ಇದೆಲ್ಲದರಿಂದ ನೀನು ಈ ಕೆಲಸಕ್ಕೆ ಹೇಳಿ ಮಾಡಿಸಿದಂತಿರುವ ಮಹಿಳೆಯಾಗಿದ್ದೀಯೆ.''

ಅವಳ ವ್ಯಕ್ತಿತ್ವ ಅವಳ ಸಮಕಾಲೀನರ ಮೇಲೆ ಎಂತಹ ಪ್ರಭಾವವನ್ನು ಬೀರಿತ್ತೆಂದರೆ, ಕವಿ ರವೀಂದ್ರನಾಥ ಠಾಕೂರರು ಅವಳ ನಿಧನದ ಒಂದು ತಿಂಗಳ ನಂತರ 'ಪ್ರಭಾಸಿ' ಎಂಬ ಬಂಗಾಳಿ




ಪತ್ರಿಕೆಯಲ್ಲಿ ಒಂದು ಲೇಖನ ಬರೆದರು. ಅದರಲ್ಲಿ ಅವರು ಹೀಗೆ ಬರೆಯುತ್ತಾರೆ: ''ನಿವೇದಿತಾ ಆಳವಾದ ಚಿಂತನಶೀಲರಾಗಿದ್ದರು. ಅಂತೆಯೇ ಪ್ರಚಂಡ ಕ್ರಿಯಾಶಕ್ತಿ ಸಂಪನ್ನರೂ ಆಗಿದ್ದರು. ಯಾರಿಗೇ ಆಗಲಿ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ನಿಲ್ಲುವುದು ಆಕೆಯ ಜೀವನದ ಈ ವಿಶೇಷ ... . ಸೋದರಿ ನಿವೇದಿತಾ ಭಾರತವನ್ನು ಪ್ರೀತಿಸುತ್ತಿದ್ದರು. ತಮ್ಮದಾಗಿ ಏನನ್ನೂ ಉಳಿಸಿಕೊಳ್ಳದೆ ತೆರೆದ ಮನಸ್ಸಿನಿಂದ ತಮ್ಮನ್ನು ತಾವೇ ಈ ನಾಡಿನ ಸೇವೆಗೆ ಅರ್ಪಿಸಿಕೊಂಡವರು.''

ಅವಳ ಹೃದಯಕ್ಕೆ ಪ್ರೀತಿಯಾಗಿದ್ದುದು ಸಾಹಿತ್ಯರಚನೆ. ಐರಿಷ್ ಸ್ತ್ರೀಯಾಗಿದ್ದುದರಿಂದ ಆಂಗ್ಲಭಾಷೆಯಲ್ಲಿ ಒಳ್ಳೆಯ ಹಿಡಿತವಿದ್ದಿತು. ಏನನ್ನೇ ಬರೆದರೂ ಅದು ಒಂದು ಉತ್ತಮ ಸಾಹಿತ್ಯವಾಗುತ್ತಿತ್ತು. ಅವಳ ಎಲ್ಲ ಲೇಖನಗಳು, ಪ್ರವಚನಗಳು ಶಾರದಾ ಮಠದವರು ಹೊರತಂದಿರುವ ಐದು ಸಂಪುಟಗಳ 'Complete works of Sister Nivedita'ದಲ್ಲಿ ಪ್ರಕಟವಾಗಿವೆ.

'Footfalls of Indian History' ಅವಳ ಸಮಗ್ರ ಕೃತಿ ಸಂಪುಟದ ನಾಲ್ಕನೆಯ ಸಂಪುಟದಲ್ಲಿ ಅಡಕವಾಗಿದೆ. ಅವಳ ಯಾವುದೇ ಲೇಖನವಾಗಲಿ, ಅದರಲ್ಲಿ ಎದ್ದು ಕಾಣುವುದು ಅವಳಿಗೆ ಭಾರತದ ಬಗೆಗಿದ್ದ ಪ್ರೀತಿ, ಆದರ. ಭಾರತದ ಚಿಕ್ಕ ವಿಷಯದಲ್ಲೂ ಅತಿ ಮಹತ್ವವನ್ನು ಕಂಡು ಬಣ್ಣಿಸುತ್ತಿದ್ದಳು. ಭಾರತವನ್ನು ಹೀಯಾಳಿಸುವ ಬುದ್ಧಿಜೀವಿಗಳೆಂದು ಅಹಂಕಾರಪಡುವ ಕೆಲವಷ್ಟು ಲೇಖಕರು ಈ 'Foot falls of Indian History'ಯನ್ನು ಓದಿ ಪಾಠ ಕಲಿತರೆ ಅವರಿಗೂ ಒಳ್ಳೆಯದಾಗುವುದು, ದೇಶಕ್ಕೂ ಒಳ್ಳೆಯದಾಗುವುದು.

'Footfalls of Indian History' ನಿವೇದಿತಾಳ ೧೬ ಲೇಖನಗಳ ಸಂಗ್ರಹ. ೧೯೧೫ರಲ್ಲಿ, ಅಂದರೆ ಅವಳ ನಿಧನದ ನಂತರ ಈ ಲೇಖನಗಳ ಸಂಗ್ರಹ, Messers Langmans Green & Co., London ಇವರಿಂದ ಪ್ರಕಟವಾಯಿತು. ಅದರಲ್ಲಿ ೬ ವರ್ಣಚಿತ್ರಗಳಿದ್ದವು. ಅವುಗಳನ್ನು ಪ್ರಖ್ಯಾತ ಕಲಾಕಾರರಾದ ಅಬನೀಂದ್ರನಾಥ ಟಾಗೋರ್, ಗಗನೇಂದ್ರನಾಥ ಠಾಕೂರ್ ಹಾಗೂ ನಂದಲಾಲ್ ಬೋಸ್ ಚಿತ್ರಿಸಿದ್ದರು. ಅವರೆಲ್ಲರೂ ನಿವೇದಿತೆಯ ಸ್ನೇಹಿತರಾಗಿದ್ದರು. ಅದಲ್ಲದೆ ಈ ಲೇಖನಗಳಿಗೆ ಸಂಬಂಧಪಟ್ಟಂತೆ ಇನ್ನೂ ೨೨ ಚಿತ್ರಗಳಿದ್ದವು. ಈ ಪುಸ್ತಕದ ಮರುಮುದ್ರಣ ೧೯೫೬ರಲ್ಲಿ ರಾಮಕೃಷ್ಣ ಸಂಘದ ಅದ್ವೈತ ಆಶ್ರಮದಿಂದ ಹೊರಬಂತು. ಈಗ ಅದು ಒಟ್ಟು ಏಳು ಮುದ್ರಣವನ್ನು ಕಂಡಿದೆ.

ಈ ಪುಸ್ತಕದಲ್ಲಿ ಒಟ್ಟು ೧೬ ಲೇಖನಗಳಿವೆ. ಅವುಗಳ ಶೀರ್ಷಿಕೆಗಳು ಹೀಗಿವೆ. 1) The History of Man as Determined by Place. 2) The History of India and its Study. 3) The Cities of Buddism. 4) Rajgir: An ancient Babylon . 5) Bihar. 6) The Ancient Abbey of Ajanta. 7) The Chinese Pilgrim. 8) The Relation between Buddism and Hinduism. 9) Elephanta – The Synthesis of Hinduism. 10) Some problems of Indian Research 11) The final Recensiation of the Mahabharata. 12) The Rise of Vaishnavism Under the Guptas 13) The Historical Significance of the Northern Pilgrimage. 14) The Old Brahminical Learning. 15) The City of Classical Europe: A Visit to Pompii. 16) A Study of Banaras.

ಹಲವಾರು ಲೇಖನಗಳಲ್ಲಿ ಭಾರತವನ್ನು ವಿವಿಧ ರೀತಿಯಲ್ಲಿ ಅಧ್ಯಯನ ಮಾಡಿ ಅವುಗಳ ವಿಶೇಷತೆಯನ್ನು ಹೊರತಂದಿದ್ದಾಳೆ. ಕೆಲವು ಮೇಲ್ನೋಟಕ್ಕೆ ಬರಿಯ ಚರಿತ್ರೆಯಂತೆ ಕಂಡರೂ ಅವುಗಳಲ್ಲಿ ಅಂತರ್ಗತವಾಗಿರುವ ಅರ್ಥವನ್ನು ನಿವೇದಿತಾ ಹೊರತರುತ್ತಾಳೆ. ಅವಳ ದೃಷ್ಟಿಯಲ್ಲಿ ಚರಿತ್ರೆ ಎಂದರೆ ಬರಿಯ ಅಂಕಿ ಅಂಶಗಳಲ್ಲ, ಅಥವಾ ಆದೇಶ ಅನುಕ್ರಮವಾಗಿ ಬೆಳೆದು ಬಂದ ರೀತಿಯಲ್ಲ.

'The Ancient Abbey of Ajanta' ಎನ್ನುವ ಲೇಖನದಲ್ಲಿ ಅತ್ಯಂತ ವಿವರವಾದ, ನಿಖರವಾದ, ಕಲೆಯ ಹಾಗೂ ಗುಹೆಗಳ ಅಧ್ಯಯನದ ವಿವರಗಳಿವೆ. ಅದು ಕಲಾಕಾರನ ಬರಿಯ ಕಲ್ಪನೆಗಳಲ್ಲ, ಆದರೆ ಭಾರತ ಬೆಳೆದು ಬಂದ ರೀತಿಯನ್ನು ಸೂಚಿಸುವ ಗುಹೆಗಳು. ಆ ಗುಹೆಗಳು ಯಾಕೆ ಅಷ್ಟು ವಿಶಾಲವಾಗಿದ್ದವು ಎನ್ನುವುದನ್ನು ಬುದ್ಧ ವಿಹಾರಗಳನ್ನು ಆಧಾರವಾಗಿಟ್ಟುಕೊಂಡು ವಿವರಿಸುತ್ತಾಳೆ. ಹಾಗೆ ಮಾಡುವಾಗ ಬೌದ್ಧ ಮತದ ಹೀನಯಾನ ಮತ್ತು ಮಹಾಯಾನ ತತ್ತ್ವಗಳನ್ನು ವಿವರಿಸಿ, ಈ ವಿಶಾಲಗುಹೆಗಳಿಗೆ ಸಂಬಂಧ ಕಲ್ಪಿಸುತ್ತಾಳೆ. ಇಲ್ಲಿ ಅವಳ ಆ ಬೌದ್ಧಮತದ ಆಳವಾದ ಅಧ್ಯಯನ ಬೆಳಕಿಗೆ ಬರುತ್ತದೆ.

ಇದಲ್ಲದೆ ಹಲವೆಡೆಗಳಲ್ಲಿ ಭಾರತದ ಕಲೆಯ ಮೇಲೆ ಗ್ರೀಕರ ಕಲೆಯ ಪ್ರಭಾವ ಎಷ್ಟು ಆಳವಾಗಿತ್ತೆಂಬುದನ್ನು ಆಧಾರಪೂರ್ವಕ ವಿಮರ್ಶಿಸುತ್ತಾಳೆ.

'Problems of Indian Research' ಎನ್ನುವ ಲೇಖನ ಇಂದಿಗೂ ಆಧುನಿಕ ಸಂಶೋಧಕರಿಗೆ ಚಿಂತಿಸಲು, ವಿಮರ್ಶಿಸಲು ಬಹಳಷ್ಟು ಮಾರ್ಗದರ್ಶನ ಮಾಡುತ್ತದೆ. ಈ ಲೇಖನದ ಮೊದಲನೆಯ ಪಂಕ್ತಿಯೇ ನಮ್ಮ ಮುಂದಿರುವ ಕಾರ್ಯವನ್ನು ತಿಳಿಸುತ್ತದೆ. ಈ ಲೇಖನವನ್ನು ಅವಳು ಹೀಗೆ ಶುರುಮಾಡುತ್ತಾಳೆ: ''ಭಾರತೀಯರ ಮುಂದಿರುವ ಪ್ರಥಮ ಕಾರ್ಯವೆಂದರೆ ತಮ್ಮ ದೇಶದ ಚರಿತ್ರೆಯನ್ನು ಮತ್ತೆ ಹೊಸದಾಗಿ ಬರೆಯಬೇಕು ... ಇದು ಒಬ್ಬ ವ್ಯಕ್ತಿಯ ಕೆಲಸವಲ್ಲ, ಇದನ್ನು ಭಾರತೀಯ ವಿದ್ವಾಂಸರ ತಂಡ ಮಾಡಬೇಕು.''

ಇವಳ ಎಲ್ಲ ಲೇಖನಗಳೂ ಬರಿಯ ಭಾರತೀಯರಿಗೆ ಮಾತ್ರವಲ್ಲ, ಪಾಶ್ಚಾತ್ಯ ವಿದ್ವಾಂಸರಿಗೂ ಭಾರತದ ಆಂತರ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು, ಅದರ ಕಲೆ, ಸಂಸ್ಕೃತಿ ಹಾಗೂ ಅಧ್ಯಾತ್ಮದ ಹಿನ್ನೆಲೆಯಲ್ಲಿ ಭಾರತವನ್ನು ಅಧ್ಯಯನ ಮಾಡಲು ಕರೆ ಕೊಡುತ್ತವೆ.

ಭಾರತದ ಅಧ್ಯಯನಕ್ಕೆ ನಿಜವಾದ ಮಾಹಿತಿ ಎಂದರೆ ಅವಳ ಭಾಷೆಯಲ್ಲಿ ''The Country is her own record. She is the history that we must learn to read.'' ('ದೇಶವೇ ನಿಜವಾಗಿ ಅವಳ ಚಾರಿತ್ರಿಕ ದಾಖಲೆಯಾಗಿದೆ. ಅವಳೇ ಒಂದು ಚರಿತ್ರೆ , ಅದನ್ನು ಅಧ್ಯಯನ ಮಾಡಲು ನಾವು ಕಲಿಯಬೇಕಾಗಿದೆ.') ಅವಳ ಕೃತಿಯನ್ನು ಆಳವಾಗಿ ಓದಿ ನಾವೆಲ್ಲರೂ ಧನ್ಯರಾಗೋಣ! ❖

# ಧೀರೋದಾತ್ತ ಹಿಂದೂಧರ್ಮ

ಸ್ವಾಮಿ ಶಾಂತಿವ್ರತಾನಂದ

ಭಾರತೀಯ ದರ್ಶನ, ತತ್ತ್ವ, ಅಧ್ಯಾತ್ಮವನ್ನು ಜಗತ್ತಿನೆಲ್ಲೆಡೆ ಪ್ರಸಾರ ಮಾಡಬೇಕೆನ್ನುವ ಸ್ವಾಮೀಜಿಯವರ ಧ್ಯೇಯಕ್ಕನುಗುಣವಾಗಿ, ಅದನ್ನು ಬಿತ್ತರಿಸುವಲ್ಲಿ ರಜೋಗುಣವಿಜೃಂಭಿತವಾದ ಧೀರೋದಾತ್ತತೆ ಅತ್ಯಾವಶ್ಯಕವೆಂದು ಪ್ರತಿಪಾದಿಸುತ್ತಾಳೆ ಸೋದರಿ ನಿವೇದಿತಾ. ಈ ಆಶಯವನ್ನು ವಿವರಿಸುವ ಪುಟ್ಟ ಕೃತಿಯೇ ' Aggressive Hinduism'. ಈ ಕೃತಿಯ ಪರಿಚಯ ಮಾಡಿಕೊಟ್ಟಿರುವ ಲೇಖಕರು ಮೈಸೂರು ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

'ಧೀರೋದಾತ್ತ ಹಿಂದೂವಾದ'?– ಅಂದರೆ ನಮ್ಮ ವೈಭವವನ್ನು ಅರಿತು, ನ್ಯೂನತೆಯನ್ನು ತಿದ್ದಿಕೊಂಡು ನಮ್ಮ ದೇಶ, ಧರ್ಮ ಮತ್ತು ಸಂಸ್ಕೃತಿಯನ್ನು ಮುಂದೆ ಸಾಗಿಸಿಕೊಂಡು ಹೋಗುವ ಮನಸ್ಸು, ಅದಕ್ಕೆ ಬೇಕಾಗುವಂತೆ ಶ್ರದ್ಧೆ, ವಿಶ್ವಾಸಗಳನ್ನು ಹೊಂದಿ ನಿಜವಾದ ಅರ್ಥದಲ್ಲಿ ಭಾರತೀಯರಾಗುವುದು. ಭಾರತೀಯ ಸಂಸ್ಕೃತಿಯ ಅನುಕರಣೆ ಮತ್ತು ರಕ್ಷಿಸುವುದರ ಮೂಲಕ ಅದರ ದಾಯಭಾಗಿಗಳಾಗೋಣ ಎನ್ನುವ ವಿಚಾರಗಳನ್ನು 'Aggressive Hinduism' ಎಂಬ ಈ ಗ್ರಂಥದಲ್ಲಿ ಚರ್ಚಿಸಲಾಗಿದೆ. ಸ್ವಾಮಿ ವಿವೇಕಾನಂದರ ಉಪದೇಶಗಳನ್ನು ಜಗತ್ತಿಗೆ ನೀಡಬೇಕೆಂಬ ಹಂಬಲ ಅವರ ಶಿಷ್ಯೆಯಾದ ಸೋದರಿ ನಿವೇದಿತಾರವರ ಹೃದಯ ದಲ್ಲಿ ಮೂಡಿತು. ಅದರ ಫಲವಾಗಿ 'ಅಗ್ರೆಸಿವ್ ಹಿಂದೂಯಿಸಮ್' ಎಂಬ ಈ ಮಹಾನ್ ಕೃತಿಯನ್ನು ಅವರು ರಚಿಸಿದರು. ಈ ಪದ ವನ್ನು ಸ್ವಾಮಿ ವಿವೇಕಾನಂದರು ತಮ್ಮ ಉಪನ್ಯಾಸಗಳಲ್ಲಿ ಬಳಸಿ ದ್ದಾರೆ. ಆದ್ದರಿಂದ ಅವರೂ ಸಹ ಅದೇ ಪದವನ್ನು ಉಪಯೋಗಿಸಿ ಕೃತಿಯನ್ನು ರಚಿಸಿದ್ದಾರೆ. ಪ್ರತಿಯೊಬ್ಬ ಭಾರತೀಯನೂ ಓದಲೇ ಬೇಕಾದ ಕೃತಿ ಇದು ಎಂದರೆ ಅತಿಶಯೋಕ್ತಿಯಾಗಲಾರದು.

ಇಂದಿನ ನಮ್ಮ ಜಗತ್ತು ಚಂಚಲತೆಯಿಂದ ಕೂಡಿದ್ದು, ಭೌತಿಕ ಜಗತ್ತಿನ ರಹಸ್ಯಗಳ ಅನ್ವೇಷಣೆಯತ್ತ ಸಾಗುತ್ತಿದೆ. ಜೊತೆ ಜೊತೆಗೆ ಭೌತಿಕ, ಇಂದ್ರಿಯ ಸುಖಲೋಲುಪತೆಗಳಿಗೆ ಹಾತೊರೆಯುತ್ತಿದೆ. ಚಲನೆಯೇ ಬೆಳವಣಿಗೆ, ಉತ್ಪಾದನೆಯೇ ಸಂತೋಷ, ಹಾಗೂ ನೆಲದ ವಿಸ್ತರಣೆಯೇ ನಮ್ಮ ಗುರಿ ಎಂಬ ಭ್ರಮಾಲೋಕದಲ್ಲಿ ಮುಳುಗಿದೆ. ಆದರೆ ಭೌತಿಕ ಸುಖ ಸಂಪತ್ತನ್ನು ಅನುಭವಿಸಿ, ಜಗತ್ತಿನ ಮಾಯಾಜಾಲದ ಶುಷ್ಕತೆಯನ್ನು ಅರಿತ ಕೆಲವೇ ಕೆಲವು ಮಾನವರು ಮಾತ್ರ ಅಂತರ್ಮುಖಿಯಾಗುತ್ತಾ, ತಮ್ಮನ್ನು ತಾವು ಅರಿಯಲು ಪ್ರಾರಂಭಿಸುತ್ತಾರೆ. ಅಂತಹವರು ಧರ್ಮಮಾರ್ಗಕ್ಕೆ ತೆರಳಿ ಅದರ ಸಂಪೂರ್ಣ ಪ್ರಯೋಜನವನ್ನು ಪಡೆಯುತ್ತಾರೆ. ಇಂತಹ ಪ್ರಾಮಾಣಿಕ ಆಧ್ಯಾತ್ಮಿಕ ಸಾಧಕನಿಗೆ ಸನಾತನ, ಪ್ರಾಯೋ ಗಿಕ ಸ್ತರಗಳಲ್ಲಿ ತತ್ತ್ವದ ನಿರೂಪಣೆ, ವಿಶ್ವಭ್ರಾತೃತ್ವ, ಧರ್ಮ ಸಮ ನ್ವಯ, ಮುಂತಾದ ವಿಶಿಷ್ಟ ಗುಣಗಳಿಂದ ಕೂಡಿದ ಹಿಂದೂ ಧರ್ಮವು ನೆರವಿಗೆ ಬರುತ್ತದೆ. ಪ್ರಪಂಚದಲ್ಲೇ ಇದು ಅತ್ಯಂತ ಶ್ರೇಷ್ಠ, ಉದಾತ್ತ ಧರ್ಮ ಎಂದರೆ ಅತಿಶಯೋಕ್ತಿಯಾಗಲಾರದು.

ಸತತ ಪರಕೀಯರ ಆಕ್ರಮಣದಿಂದ, ಸ್ವಜನರ ಮತ್ತು ಪರ ಕೀಯರ ತಪ್ಪು ಕಲ್ಪನೆಗಳಿಂದ ನಿಂದೆಯನ್ನು ಅನುಭವಿಸಿದ, ಅನೇಕ




ಎಡರು–ತೊಡರುಗಳನ್ನು ಅನುಭವಿಸಿದ ಹಿಂದೂಧರ್ಮವು ನಶಿ ಸದೆ, ಶಕ್ತಿಯುತವಾಗಿ ಬೆಳದು ಹೆಮ್ಮರವಾಗಿ ನಿಂತಿದೆ. ಅನೇಕ ನೋವು, ನಿಂದನೆ, ಆಘಾತಗಳಿಂದ ಜರ್ಜರಿತವಾಗಿ, ಮತ್ತೆ ಚಿಗು ರೊಡೆದು ನವ ಶಕ್ತಿ–ಉಲ್ಲಾಸಗಳಿಂದ ಬೆಳೆದು ನಿಂತಿದೆ. ಇಂದಿನ ತಾಂತ್ರಿಕ ಯುಗದಲ್ಲಿ ನಮ್ಮವರೇ ನಮ್ಮ ಧರ್ಮ–ಸಂಸ್ಕೃತಿಗಳ ಅಂತಸ್ಸತ್ವ ಮತ್ತು ವೈಭವವನ್ನು ಮರೆತು, ಅನ್ಯ ಧರ್ಮ–ಸಂಸ್ಕೃತಿಗಳ ಅಂಧಾನುಕರಣೆಯನ್ನು ಮಾಡುತ್ತಿದ್ದಾರೆ, ನಮ್ಮ ಧರ್ಮವನ್ನು ಹೀಯಾಳಿಸುವುದರಲ್ಲಿ ಆನಂದವನ್ನು ಕಾಣುತ್ತಿದ್ದಾರೆ. ನಮ್ಮ ಧರ್ಮ ಅಥವಾ ಅನ್ಯಧರ್ಮವನ್ನು ಆಳವಾಗಿ ಅಧ್ಯಯನ ಮಾಡಿ ನಿಂದೆ ಅಥವಾ ಸ್ತುತಿಗಳನ್ನು ಮಾಡಿದರೆ ಸರಿ; ಆದರೆ ಯಾವುದೋ ಸ್ವಾರ್ಥಲಾಭಕ್ಕಾಗಿ ಅಥವಾ ಪೂರ್ವಗ್ರಹಪೀಡಿತರಾಗಿ ಮಾಡುವ ಸ್ತುತಿ–ನಿಂದನೆಗಳು ಎಷ್ಟು ಸಮಂಜಸ ಎಂದು ಅವರೇ ಆಲೋಚಿಸ ಬೇಕಾಗಿದೆ. ಯಾವುದೇ ಸಮಾಜ, ನಾಗರಿಕತೆ, ಸಂಸ್ಕೃತಿಯಲ್ಲಿ ಅದರದೇ ಆದ ವೈಶಿಷ್ಟ್ಯ ಮತ್ತು ನ್ಯೂನತೆಗಳು ಸಾಧಾರಣವಾಗಿ ಇರುತ್ತವೆ. ನ್ಯೂನತೆಗಳನ್ನು ಸರಿಪಡಿಸಿ ಅದರ ವಿಶಿಷ್ಟತೆಗೆ ಇನ್ನೂ

ಹೆಚ್ಚಿನ ಮೆರುಗನ್ನು ನೀಡುವುದರ ಬದಲು, ನಮ್ಮ ಬುದ್ಧಿವಂತ ಜನರು ಹಾಗೂ 'ವೈಚಾರಿಕತೆಯನ್ನು ಹೊಂದಿರುವ ಜನರು ನಾವು' ಎಂದು ಹೇಳಿಕೊಳ್ಳುವ ಜನರು ತಮ್ಮ ಧರ್ಮವನ್ನು ಹೀನಾಯ ವಾಗಿ ಪ್ರತಿಬಿಂಬಿಸುವುದರಲ್ಲಿ ಆನಂದವನ್ನು, ಸಾರ್ಥಕತೆಯನ್ನು ಅನುಭವಿಸುತ್ತಿದ್ದಾರೆ. ಇದು ಹೇಗೆಂದರೆ, ತಮ್ಮ ಮನೆಯ ಅಥವಾ ಸಂಸಾರದಲ್ಲಿ ನ್ಯೂನತೆ, ಭಿನ್ನಾಭಿಪ್ರಾಯವಿರುವ ಕಾರಣ ತಮ್ಮ ಅಥವಾ ತಮ್ಮ ಮನೆಯ ಮರ್ಯಾದೆಯನ್ನು ತಾವೇ ಹರಾಜಿಗೆ ಹಾಕಿದರೆ ಹೇಗೋ ಹಾಗೆ. ಇದಕ್ಕೆ ರಾಜಕೀಯ ಅಥವಾ ಸಾಮಾಜಿಕ ಕಾರಣಗಳಿರಬಹುದು. ಜೊತೆಗೆ ನಮ್ಮ ಕೌಟುಂಬಿಕ ಮತ್ತು ಶಿಕ್ಷಣದ ವ್ಯವಸ್ಥೆಯಲ್ಲಿ ನಮ್ಮ ಧರ್ಮ ಮತ್ತು ಸಂಸ್ಕೃತಿಯನ್ನು ಸರಿಯಾಗಿ ತಿಳಿಸದೆ ಇರುವುದೇ ಕಾರಣ. ವಿಶ್ವದಲ್ಲೇ ಅತ್ಯಂತ ಪುರಾತನವಾದ ಆರ್ಯ ಸಂಸ್ಕೃತಿ ಮತ್ತು ಸನಾತನ ಧರ್ಮವು ಮತ್ತೊಮ್ಮೆ ತನ್ನ ಅಂತಃಶಕ್ತಿಯನ್ನು ಪ್ರದರ್ಶಿಸಬೇಕಾಗಿದೆ. ಹಾವು ಪೊರೆಯನ್ನು ಬಿಟ್ಟು ಹೊಸ ಚೈತನ್ಯವನ್ನು ಪಡೆಯುವಂತೆ, ಹಿಂದೂಧರ್ಮವು ತನ್ನ ಕೆಲವು ನ್ಯೂನತೆಗಳನ್ನು ಸರಿಪಡಿಸಿಕೊಂಡು, ಚಿಗುರೊಡೆದು, ಮತ್ತೊಮ್ಮೆ ನೂತನ ವಧುವಿನಂತೆ ಅಲಂಕೃತವಾಗಬೇಕಾಗಿದೆ. ಇಂದು ನಮ್ಮ ದೇಶ, ಸಂಸ್ಕೃತಿ ಮತ್ತು ಧರ್ಮಗಳ ಮೇಲೆ ಹಿಂದಿನಂತೆ ಹೊರಗಿನ ಜನರ ಆಕ್ರಮಣದ ಭಯವಿಲ್ಲ; ಬದಲಾಗಿ ಸ್ವಜನರ ಆಕ್ರಮಣ ಹೆಚ್ಚಾಗಿದ್ದು ನಮ್ಮ ಸನಾತನ ಆರ್ಯ ಸಂಸ್ಕೃತಿ, ಧರ್ಮ ಇದನ್ನು ದಿಟ್ಟವಾಗಿ ಎದುರಿಸಿ ಮುಂದೆ ಸಾಗಬೇಕಾಗಿದೆ. ಅದು ನೆರವೇರಬೇಕಾದರೆ ನಾವೆಲ್ಲಾ ಸೊಂಟ ಕಟ್ಟಿ ಅದರ ರಕ್ಷಣೆ ಮತ್ತು ಪೋಷಣೆಗೆ ಅಹರ್ನಿಶಿ ಶ್ರಮಿಸಬೇಕಾಗಿದೆ. ಆದ್ದರಿಂದ ಇಂದು ನಮಗೆ ಧೀರೋದಾತ್ತ ಹಿಂದೂ ಮನೋಭಾವ ಬೇಕಾಗಿದೆ.

ಭಾರತ ದೇಶದಲ್ಲಿ ನೂರಾರು ಸಾಧು-ಸಂತರು ಬಂದು ಕಾಲ ಕಾಲಕ್ಕೆ ಹಿಂದೂಧರ್ಮವನ್ನು ಪರಿಷ್ಕರಿಸಿ ಅದರ ಅಂತಃಸತ್ವವನ್ನು ಬೆಳಗಿಸಿದ್ದಾರೆ. ಈ ನವಯುಗದಲ್ಲಿ ಯುಗಾವತಾರ ಶ್ರೀರಾಮಕೃಷ್ಣ ಪರಮಹಂಸರು, ಮಹಾಮಾತೆ ಶ್ರೀಶಾರದಾದೇವಿಯವರು, ಸ್ವಾಮಿ ವಿವೇಕಾನಂದರು ಹಾಗೂ ಅನೇಕ ಸತ್ಪುರುಷರು ಜನ್ಮವೆತ್ತಿ ಹಿಂದೂಧರ್ಮವನ್ನು ರಕ್ಷಿಸಿ, ಪೋಷಿಸಿದ್ದಾರೆ. ಅವರುಗಳಿಂದ ಪ್ರಭಾವಿತರಾದ ಶಿಷ್ಯ ಪರಂಪರೆ ಅವರು ಹಾಕಿಕೊಟ್ಟ ಮಾರ್ಗದಲ್ಲಿ ಮುಂದೆ ಸಾಗಿ ಧರ್ಮದ ರಕ್ಷಣೆಯ ಸೇವಾಕಾರ್ಯವನ್ನು ಮಾಡುತ್ತಿದ್ದಾರೆ. ಇವರ ಸಾಲಿನಲ್ಲಿ, ಪಾಶ್ಚಾತ್ಯ ದೇಶದಲ್ಲಿ ಹುಟ್ಟಿ, ಗುರುವಿನ ಆಣತಿಯಂತೆ ಭಾರತ ದೇಶಕ್ಕೆ ಬಂದು, ಈ ದೇಶದ ಸಂಸ್ಕೃತಿಯನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಸ್ಫೂರ್ತಿಯನ್ನು ಪಡೆದು, ಭಾರತದ ಉನ್ನತಿಗಾಗಿ ಅಹರ್ನಿಶಿ ಶ್ರಮಿಸಿದ ಮಹಾನ್ ಸ್ತ್ರೀ, ಸ್ವಾಮಿ ವಿವೇಕಾನಂದರ ಅಗ್ರಶಿಷ್ಯೆಯಾದ ಸೋದರಿ ನಿವೇದಿತಾ. ಅವರು ಭಾರತದ ಸೇವೆಗೆ ಅವರನ್ನು ಅರ್ಪಿಸಿಕೊಂಡರು. ಸ್ವಾಮಿ ವಿವೇಕಾನಂದರು ಹೇಳಿದಂತೆ ಸ್ತ್ರೀ ಪುನರುತ್ಥಾನವಾಗುವವರೆಗೂ ದೇಶದ ಪುನರುತ್ಥಾನವಾಗುವುದಿಲ್ಲ ಎಂದು ಅರಿತ ನಿವೇದಿತಾ ಭಾರತದ ಹೆಣ್ಣು ಮಕ್ಕಳಿಗೆ ಶಾಲೆಗಳನ್ನು ಆರಂಭಿಸಿದರು. ವಿಧವೆಯರಿಗೆ ವೃತ್ತಿಪರ ಶಿಕ್ಷಣವನ್ನು ನೀಡುವುದರ ಮೂಲಕ ಸ್ವಾವಲಂಬೀ ಜೀವನವನ್ನು ನಡೆಸಲು ನೆರವಾದರು. ಕಲ್ಕತ್ತೆಯಲ್ಲಿ ಪ್ಲೇಗ್ ಮಹಾಮಾರಿ ಬಂದಾಗ ಭಾರತೀಯರು ತಮ್ಮವರ ಸೇವೆಯನ್ನೂ ಮಾಡುತ್ತಿರಲಿಲ್ಲ. ಆದರೆ ಈ ಮಹಿಳೆ ಹಗಲು-ರಾತ್ರಿಯೆನ್ನದೆ, ತಮ್ಮ ಆರೋಗ್ಯ ವಿಶ್ರಾಂತಿಗಳನ್ನು ಲೆಕ್ಕಿಸದೆ, ಭಾರತ ಜನರ ಸೇವೆಯನ್ನು ಮಾಡಿದರು. ಭಾರತೀಯರು ತಮ್ಮ ಅಂತಃಸತ್ವವನ್ನು ಮರೆತು ಭೌತಿಕ ಗುಲಾಮಗಿರಿಯ ಜೊತೆಗೆ ಮಾನಸಿಕ ಗುಲಾಮಗಿರಿಯನ್ನು ಅನುಭವಿಸುತ್ತಿದ್ದಾರೆ ಎಂದು ತಿಳಿದ ನಿವೇದಿತಾ, ಅವರ ವಿದ್ವತ್ ಪೂರ್ಣ ಉಪನ್ಯಾಸ ಮತ್ತು ಬರಹಗಳಿಂದ ಜನರನ್ನು ಎಚ್ಚರಿಸಿದರು. ಭಾರತೀಯರಿಗೆ ತಮ್ಮ ಸ್ವಂತಿಕೆಯನ್ನು ತಿಳಿಯಲು ನೆರವಾದರು. ಭಾರತೀಯರ ಸ್ವಾಭಿಮಾನದ ಕೊರತೆ, ನಕಾರಾತ್ಮಕ ಭಾವನೆ, ಆತ್ಮವಿಶ್ವಾಸ ಇಲ್ಲದಿರುವಿಕೆ, ಶ್ರದ್ಧಾಹೀನತೆಯನ್ನು ಕಂಡು ಮರುಗಿದರು. ಮೃತ್ಯುವಿಗೆ ಮುಂಚೆ ಒಮ್ಮೆ ತಮ್ಮ ಗುರುಗಳಾದ ಸ್ವಾಮಿ ವಿವೇಕಾನಂದರ ಉಪದೇಶಗಳ ಸಾರವನ್ನು ಜನರಿಗೆ ತಿಳಿಸಬೇಕು ಎಂದು ಇಚ್ಛಿಸಿದರು. ಅದರಂತೆ ಅವರೇ ಹೇಳುವಂತೆ, ಮೂರೇ ದಿವಸಗಳಲ್ಲಿ 'ಧೀರೋದಾತ್ತ ಹಿಂದೂಧರ್ಮ'(Aggressive Hinduism) ಎಂಬ ಕಿರುಹೊತ್ತಿಗೆಯನ್ನು ರಚಿಸಿದರು. ಇದು ಕಿರುಹೊತ್ತಿಗೆಯಾದರೂ ಇದನ್ನು ಅರ್ಥ ಮಾಡಿಕೊಳ್ಳಲು ಬಹಳ ಕಠಿಣ ಎಂದು ಅವರು ನುಡಿಯುತ್ತಾರೆ. ಭಾರತದ ಸಮಸ್ಯೆಗಳಿಗೆ ರಾಮಬಾಣದಂತಿರುವ ಸ್ವಾಮಿ ವಿವೇಕಾನಂದರ ಉಪದೇಶಗಳನ್ನು ಜನರಿಗೆ ನೀಡಬೇಕು ಎಂಬ ಆಲೋಚನೆಯ ಪರಿಣಾಮವಾಗಿ ಈ ಕಿರುಹೊತ್ತಿಗೆಯನ್ನು ಬರೆದರು.

ಈ ಕಿರುಹೊತ್ತಿಗೆಯನ್ನು ಮೊದಲ ಬಾರಿಗೆ ಚೆನ್ನೈ ನಗರದ ನಟೇಶನ್ ಸಂಸ್ಥೆಯು ೧೯೦೫ರಲ್ಲಿ ಮುದ್ರಿಸಿತು. ರಾಮಕೃಷ್ಣ ಮಹಾಸಂಘದ ಬಂಗಾಳಿ ಪ್ರಕಾಶನ ವಿಭಾಗವಾದ **ಉದ್ಬೋಧನ ಕಾರ್ಯಾಲಯ**ದಿಂದ ೧೯೨೭ರಲ್ಲಿ ಇದರ ದ್ವಿತೀಯ ಸಂಸ್ಕರಣ ಹೊರಬಂದಿತು. ೧೯೫೦ರಲ್ಲಿ ತೃತೀಯ ಹಾಗೂ ೧೯೬೭ರಲ್ಲಿ ಚತುರ್ಥ ಸಂಸ್ಕರಣಗಳು ಪ್ರಕಟವಾದವು. ಈಗ ಏಳು ಸಂಸ್ಕರಣಗಳನ್ನು ಹಾಗೂ ಹಲವಾರು ಪುನರ್ಮುದ್ರಣಗಳನ್ನು ಕಂಡಿರುವ ಪುಸ್ತಕ ಅಸಂಖ್ಯ ಜನರಿಗೆ ಸ್ಫೂರ್ತಿ ನೀಡಿದೆ. ಸ್ವಾಮಿ ವಿವೇಕಾನಂದರ ಇನ್ನೊಬ್ಬ ಶಿಷ್ಯೆಯಾದ ಜೋಸೆಫಿನ್ ಮ್ಯಾಕ್ಲಿಯಾಡ್ ಕೂಡ ಈ ಪುಸ್ತಕವನ್ನು ಓದಿ ಅವರ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಇದು ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದೆ.

೧. ಆಧಾರ
೨. ನಮ್ಮ ಮುಂದಿರುವ ಕಾರ್ಯ
೩. ನಮ್ಮ ಆದರ್ಶ
೪. ನಮ್ಮ ಆದರ್ಶಕ್ಕೆ ಮಾರ್ಗ

**ಆಧಾರ**

ಪ್ರತಿಯೊಬ್ಬ ವ್ಯಕ್ತಿಯು ತನ್ನ ಬೆಳವಣಿಗೆಯ ಹಾದಿಯಲ್ಲಿ ತನ್ನ ಜನಾಂಗವನ್ನು ಅನುಸರಿಸುತ್ತಾನೆ. ಪ್ರತಿಯೊಬ್ಬ ನಾಗರಿಕನಿಗೆ ಸರಿಯಾದ ಶಿಕ್ಷಣವನ್ನು ನೀಡಿದರೆ ತನ್ನ ಜನಾಂಗದ, ದೇಶದ ಅಥವಾ ಮನುಕುಲದ ಚೂಡಾಮಣಿಯಾಗುತ್ತಾನೆ ಎಂದು ನಿವೇದಿತಾ

ರವರು ಅಭಿಪ್ರಾಯಪಡುತ್ತಾರೆ. ಇದಕ್ಕೆ ಜಾನ್ ಹೆನ್‌ರಿಚ್ ಪೆಸ್ಟೊಲಜಿ (John Heinrich Pestalozzi) ಶಿಕ್ಷಣ ತತ್ತ್ವದ ಉದಾಹರಣೆಯನ್ನು ಕೊಡುತ್ತಾರೆ. ಇವನ ಪ್ರಕಾರ ಶಿಕ್ಷಣವು ಮಾನವನ ಭೌತಿಕ, ನೈತಿಕ, ಸಾಮಾಜಿಕ ಮೌಲ್ಯಗಳನ್ನು ಅಳವಡಿಸುವಂತೆ ಮಾಡಬೇಕು. ಅಲ್ಲದೆ ಮಾನವನ ಹೃದಯ, ಕೈ ಮತ್ತು ತಲೆಯ (Head, heart and hand) ಸಮನ್ವಯವಾಗಬೇಕು ಎಂದು. ಸ್ವಾಮಿ ವಿವೇಕಾನಂದರ ಅಭಿಪ್ರಾಯವನ್ನು ಇವನು ಪುನರುಚ್ಚರಿಸುತ್ತಾನೆ. ನಿವೇದಿತಾರವರು ಭಾರತೀಯರ ಪಾಶ್ಚಾತ್ಯರ ಅಂಧಾನುಕರಣೆಯನ್ನು ಅಲ್ಲಗಳೆಯುತ್ತಾರೆ. ಅವರೇ ಹೇಳುವಂತೆ, ಯಾವ ಭೂಮಿಯು ಮಾವು, ಅಡಿಕೆ ಮರಗಳನ್ನು ಬೆಳದಿದೆಯೋ ಅದೇ ಭೂಮಿಯು ಬರೀ ಕುಂಬಳಕಾಯಿ, ಸೋರೆಕಾಯಿ ಬೆಳೆಯುವುದರಲ್ಲಿ ನಿಲ್ಲಬಾರದು. ಯಾವ ಪುಣ್ಯ ಭೂಮಿಯು ವೇದ ಮತ್ತು ಜ್ಞಾನಯೋಗವನ್ನು ನೀಡಿದೆಯೋ, ಆ ಭೂಮಿಯು ಬರೀ ಪಾಶ್ಚಾತ್ಯ ಅನುಕರಣೆ ಮತ್ತು ತನ್ನ ದೇಶದ ಟೀಕಾಕಾರನಾಗಿ ಉಳಿಯಬಾರದು, ಎಂದು ಹೇಳುತ್ತಾರೆ.

ಸ್ವಜನರ ಟೀಕೆ ಮತ್ತು ಪರಕೀಯರ ಪ್ರಶಂಸೆ ಇಂದಿನ ಸ್ಥಿತಿಯಾಗಿಬಿಟ್ಟಿದೆ. ನಮ್ಮ ದೇಶದ ಗತವೈಭವದ ಚರಿತ್ರೆಯನ್ನು ನೆನೆದು, ಶ್ರದ್ಧೆ ತಾಳಿ ನವ ಸಮಾಜದ ಸ್ಥಾಪನೆಗೆ ನಾಂದಿ ಹಾಡಬೇಕು. ಧರ್ಮ ಮತ್ತು ಸಾಮಾಜಿಕ ಜೀವನವನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ನಮ್ಮ ಸಾಮಾಜಿಕ ಪಿಡುಗುಗಳನ್ನು ಧರ್ಮಕ್ಕೆ ಅಂಟಿಸಿ ಧರ್ಮನಿಂದನೆಯನ್ನು ಮಾಡುತ್ತಿರುವ ಭಾರತೀಯರ ಅಜ್ಞಾನವನ್ನು ಕಂಡು ಎಚ್ಚರಿಕೆಯ ಮಾತನ್ನು ಹೇಳುತ್ತಾರೆ. ಹಳೆಯ ಮೌಢ್ಯತೆಯನ್ನು ಕಳಚಿ ನಿತ್ಯ ವಿನೂತನವಾದ, ಜಡತ್ವವನ್ನು ಕಳಚಿ ಕಾರ್ಯಕ್ಷಮತೆಯನ್ನು, ಶಕ್ತಿಹೀನತೆಯಿಂದ ಸಶಕ್ತರಾಗಿ, ಶ್ರದ್ಧಾಶೂನ್ಯತೆಯಿಂದ ಶ್ರದ್ಧಾಭರಿತರಾಗುವುದೇ ಧೀರೋದಾತ್ತತೆ. ಈ ಸ್ವಭಾವವನ್ನು ಹಿಂದೂಧರ್ಮವು ಹೊಂದಿದರೆ ಅದನ್ನು 'ಧೀರೋದಾತ್ತ ಹಿಂದೂಧರ್ಮ' ಎಂದು ನಿವೇದಿತಾರವರು ಕರೆಯುತ್ತಾರೆ.

ಅವರ ಪ್ರಕಾರ ಶಿಕ್ಷಣದ ಮೂಲ ಚಾರಿತ್ರ್ಯ ನಿರ್ಮಾಣ. ಅದೇ ಅಧ್ಯಾತ್ಮದ, ಧರ್ಮದ ಮುಖ್ಯಗುರಿಯೂ ಹೌದು. ಆದ್ದರಿಂದಲೇ ಭಾರತದಲ್ಲಿ ಮಾತ್ರ ಭಿಕ್ಷುಕ ಸಂನ್ಯಾಸಿಯು ರಾಜನಿಗಿಂತ ಹೆಚ್ಚು ಗೌರವವನ್ನು ಅನುಭವಿಸುತ್ತಾರೆ.

ನಾವು ನಿತ್ಯ ಧಾರ್ಮಿಕ ಆಚರಣೆಗಳಲ್ಲಿ ನಮ್ಮನ್ನು ಮರೆಸಿಕೊಂಡಿದ್ದೇವೆ. ಧರ್ಮದ ಮುಖ್ಯತಿರುಳನ್ನು ಬಿಟ್ಟು, ಅದರ ಹೊರಗಿನ ಚಿಪ್ಪಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುತ್ತಿದ್ದೇವೆ. ಅಂದರೆ ಯಾವ ಕೈಯಲ್ಲಿ ನೀರನ್ನು ಕುಡಿಯಬೇಕು, ಸ್ನಾನ ಹೇಗೆ ಮಾಡಬೇಕು, ಬೆಳಿಗ್ಗೆ ಯಾರನ್ನು ನೋಡಬಹುದು ಅಥವಾ ನೋಡಬಾರದು ಇತ್ಯಾದಿ ಗೌಣ ವಿಷಯದಲ್ಲಿ ನಮ್ಮ ಎಲ್ಲಾ ಶಕ್ತಿ ಮತ್ತು ಗಮನವನ್ನು ನೀಡುತ್ತಿದ್ದೇವೆ. ಅವೆಲ್ಲವೂ ಆಚಾರವಷ್ಟೇ, ಧರ್ಮದ ಒಂದು ಭಾಗ ಅಥವಾ ಮುಖ. ಅದಕ್ಕೆ ಅತಿಯಾಗಿ ಪ್ರಾಶಸ್ತ್ಯವನ್ನು ನೀಡಿ ಧರ್ಮವನ್ನು ಕ್ಷೀಣಗೊಳಿಸಿದ್ದೇವೆ ಎಂದು ನಿವೇದಿತಾರವರು ಅಭಿಪ್ರಾಯಪಡುತ್ತಾರೆ.

ಉದಾತ್ತ ತತ್ತ್ವವನ್ನು ನೀಡಿರುವ ಹಿಂದೂಧರ್ಮ ಎಡವಿದ್ದಾದರೂ ಎಲ್ಲಿ? ಚಾರಿತ್ರ್ಯ ನಿರ್ಮಾಣದಲ್ಲಿ ಎಂದು ನಿವೇದಿತಾ ತಿಳಿಸುತ್ತಾರೆ. ಚಾರಿತ್ರ್ಯ ನಿರ್ಮಾಣವು ಅಧ್ಯಾತ್ಮವಾದಾಗ ಸೋಮಾರಿತನ ಮತ್ತು ಸೋಲನ್ನು ಸುಮ್ಮನೆ ಅನುಭವಿಸು ವುದು ಧರ್ಮವಲ್ಲ, ತ್ಯಾಗವಲ್ಲ ಎಂದು ತಿಳಿಯಲಾಗುತ್ತದೆ. ತನ್ನ ಮತ್ತು ಪರರ ಸಂರಕ್ಷಣೆಯೇ ಮುಕ್ತಿಗಿಂತ ಹೆಚ್ಚಿನದ್ದು, ಕೆಳ ಮಟ್ಟದ ಸ್ವಭಾವವನ್ನು ನಿಯಂತ್ರಿಸಿ ಉತ್ತಮ ರೀತಿಯಲ್ಲಿ ಜೀವನವನ್ನು ನಡೆಸುವ ಅಂತಹ ಧೀರ ವ್ಯಕ್ತಿತ್ವವನ್ನು ಹೊಂದುವುದೇ ಧೀರೋದಾತ್ತತೆ, ಧೀರೋದಾತ್ತ ಹಿಂದೂಧರ್ಮ ಎಂದರು.

### ನಮ್ಮ ಮುಂದಿರುವ ಕಾರ್ಯ

ಭಾರತವು ಒಂದು ಉಪಖಂಡ. ಇದು ವೈವಿಧ್ಯತೆಯಿಂದ ಕೂಡಿದೆ. ಆದರೂ ಸಮಯಕ್ಕೆ ತಕ್ಕಂತೆ ತನ್ನನ್ನು ತಾನು ಮಾರ್ಪಾಡು ಮಾಡಿಕೊಂಡು ಬರುತ್ತಿರುವುದರಿಂದಲೇ ಸನಾತನ ಧರ್ಮವು ಸಹಸ್ರ ವರ್ಷಗಳಿಂದ ಜೀವಂತವಾಗಿ ಉಳಿದಿದೆ. ಇಂತಹ ಒಂದು ದೊಡ್ಡ ದೇಶವು ಹೊಸ ಭಾಷೆ, ಸಂಸ್ಕೃತಿಯನ್ನು ಕಲಿಯುವುದೆಂದರೆ ಸಾಮಾನ್ಯ ವಿಷಯವಲ್ಲ. ಕೆಲವು ಕಾರಣಗಳಿಂದ ಭಾರತವು ಅನೇಕ ವರ್ಷಗಳಿಂದ ಜಡತ್ವದ ಸ್ಥಿತಿಗೆ ತಲುಪಿದ್ದು, ಮತ್ತೆ ಇಂದು ಜಾಗೃತವಾಗಿ ಯಶಸ್ಸಿನ ಹಾದಿಯಲ್ಲಿ ಮುಂದೆ ಸಾಗುತ್ತಿದೆ.

೧೮೫೮ರಿಂದ ಭಾರತಕ್ಕೆ ನೂತನ ಪ್ರಜ್ಞೆಯನ್ನು ಅಳವಡಿಸಿಕೊಳ್ಳವುದೇ ಏಕೈಕ ಗುರಿಯಾಗಿದೆ. ಪೃಥ್ವೀರಾಜ್ ಚೌಹಾಣ್, ಅಶೋಕ, ಅಕ್ಬರ್ ಚಕ್ರವರ್ತಿಗಳು ಕಣ್ಮರೆಯಾಗಿದ್ದು, ಮಧ್ಯಯುಗವು ತನ್ನ ಅಂತ್ಯವನ್ನು ಕಾಣುತ್ತಿದೆ. ಹೊಸಜಗತ್ತಿಗೆ ಎದುರು ನಿಲ್ಲುವ ಅಥವಾ ಪತನಗೊಳ್ಳುವ ಹೊಸ ಕಾರ್ಯವೊಂದು ಭಾರತೀಯರಿಗೆ ಒದಗಿ ಬಂದಿದೆ. ಸೋಲರಿಯದ, ಅಜೇಯವಾಗಿರುವ ಭಾರತವನ್ನು ನಾವು ಕಟ್ಟಬೇಕಾಗಿದೆ. ಇಂದಿನವರೆಗೆ ಬದಲಾವಣೆಗೆ ತೆರೆದುಕೊಳ್ಳದ ದೇಶವು ತನ್ನ ಸಮಸ್ಯೆಯನ್ನು ತಿಳಿಯಲು ಸಾಧ್ಯವಾಗಿರಲಿಲ್ಲ. ಆದರೆ ಈಗ ಕಾಲ ಬದಲಾಗಿದೆ. ಭಾರತೀಯನ ಮನಸ್ಸು ಅಂಧಕಾರದಿಂದ ಹೊರಬಂದಿದೆ. ಹಿಂದಿನ ಗತ ವೈಭವವನ್ನು ಮತ್ತು ಇಂದಿನ ಸ್ಥಿತಿಯನ್ನು ಅರಿತು ಮುಂದಿನ ಭವಿಷ್ಯವನ್ನು ರೂಪಿಸುವುದನ್ನು ಆಲೋಚಿಸುತ್ತಿದ್ದಾನೆ. ಈ ಅಂಶವನ್ನು ನಾವೆಲ್ಲರೂ ಸ್ಪಷ್ಟವಾಗಿ ತಿಳಿದು ಮುಂದೆ ಸಾಗಬೇಕಾಗಿದೆ.

ಇಂದಿನ ಸಮಸ್ಯೆಗಳಾದರೂ ಏನು? ಹೊಸ ಹೊಸ ಆವಿಷ್ಕಾರಗಳಿಂದ ಭೌತಿಕ ವಿಜ್ಞಾನವು ಬೆಳೆದು ನಿಂತಿದೆ. ಯಾವುದೇ ರಾಷ್ಟ್ರವು ತನ್ನನ್ನು ತಾನು ಚೆನ್ನಾಗಿ ತಿಳಿಯುವುದಲ್ಲದೆ, ಬೇರೆಯವರ ಜೊತೆಗೆ ಅದರ ಸ್ಥಾನ ಮತ್ತು ಸಂಬಂಧಗಳನ್ನು ತಿಳಿಯಬೇಕಾಗಿದೆ.

ಯಾಂತ್ರಿಕ ಯುಗದಲ್ಲಿ ಮಾನವನು ಇನ್ನೊಬ್ಬ ಮಾನವನನ್ನು ಒಬ್ಬ ಯಂತ್ರದಂತೆ ನೋಡುತ್ತಿದ್ದಾನೆ. ಒಬ್ಬ ವ್ಯಾಪಾರಿ ಅವನ ಬಳಿ ಕೆಲಸ ಮಾಡುವ ಕಾರ್ಮಿಕರನ್ನು ಯಂತ್ರದಂತೆ ನೋಡುತ್ತಿದ್ದಾನೆ. ಆದರೆ ಇಂದು ಮಾನವನು ಯಾಂತ್ರಿಕ ಶಕ್ತಿ, ದಕ್ಷತೆ ಮತ್ತು ಸಾಮರ್ಥ್ಯಗಳನ್ನು ನೋಡುತ್ತಾ, ತನ್ನನ್ನು ಹಣಗಳಿಸುವ ಸಾಧನವಾಗಿ ಕಾಣುತ್ತಿದ್ದಾನೆ. ಒರಟು ಪ್ರಾಂತೀಯವಾದದಿಂದ ಕೂಡಿದ

ಹೊಸ ಜಗತ್ತು ಸಂಪದ್ಭರಿತವಾಗಿದೆ, ಆದರೆ ನೈತಿಕ ಮೌಲ್ಯಗಳನ್ನು ಕೂಪಕ್ಕೆ ತಳ್ಳಿದೆ.

ಭಾರತದಲ್ಲಿ ಎರಡು ತಲೆಮಾರುಗಳಿಂದ ಆಧುನಿಕ ಪಾಶ್ಚಾತ್ಯ ಜಗತ್ತಿನ ವಿಚಾರಗಳನ್ನು ಭಾರತವು ಆಜ್ಞಾಧಾರಕನಂತೆ ಸ್ವೀಕರಿಸಿತು. ಭಾರತ ದೇಶವು ಹೊಸ ವಿಚಾರಗಳನ್ನು ಪರೀಕ್ಷೆ ಮಾಡದೆ ಸ್ವೀಕರಿಸಿ ಎಡೆಬಿಡಂಗಿಯಾಗಿ, ಮಂಕಾಗಿ ಕುಳಿತಿದೆ. ಭಾರತೀಯರು ಶಕ್ತಿ, ಉತ್ಸಾಹ, ಚೈತನ್ಯಹೀನರಾಗಿ ಯಾಂತ್ರಿಕ ಜೀವನವನ್ನು ನಡೆಸುತ್ತಿದ್ದಾರೆ. ಕನಸಿನ ಲೋಕದಲ್ಲಿ ವಿಹರಿಸುತ್ತಾ, ಪುರುಷತ್ವ ಹೀನರಾಗಿ, ಸಾಮಾನ್ಯ ಜ್ಞಾನವಿಹೀನರಾಗಿ ಜೀವನವನ್ನು ನಡೆಸುತ್ತಿದ್ದಾರೆ ಎಂದೊಮ್ಮೆ ಅನಿಸುತ್ತದೆ.

ಧೀರೋದಾತ್ತ ಧೋರಣೆ, ಕಾರ್ಯ ನೀತಿಯನ್ನು ಅನುಸರಿಸುವುದರ ಮೂಲಕ ಜೀವನದಲ್ಲಿ ಹೋರಾಟವನ್ನು ಮೂಡಿಸಿ, ಜೀವಕಳೆಯನ್ನು ತುಂಬಬೇಕಾಗಿದೆ. ನಮ್ಮನ್ನು ಆಳುತ್ತಿರುವವರ ಎದುರು ನಿಂತು ಹೋರಾಡಬೇಕಾಗಿದೆ. ನಾವು ಕಾರ್ಯೋನ್ಮುಖರಾಗಬೇಕಾಗಿದೆ. ಭಾರತೀಯನು ನಿಜವಾದ ಅರ್ಥದಲ್ಲಿ ಭಾರತೀಯನಾಗಿ, ತನ್ನ ದೇಶದ ಮೌಲ್ಯಗಳನ್ನು ಅಳವಡಿಸಿಕೊಂಡು ಧೀರೋದಾತ್ತನಾಗಿ ಮುಂದೆ ಸಾಗಬೇಕಾಗಿದೆ. ಆದ್ದರಿಂದ ನಮಗೆ ನಾವು ಪ್ರಭುಗಳಾಗಿರಬೇಕೇ ವಿನಃ ಪರರ ಕೈಯಲ್ಲಿ ದಾಸ್ಯತ್ವವನ್ನು ಅನುಭವಿಸುವುದಲ್ಲ. ದಾಸ್ಯತ್ವ ಮತ್ತು ಗುಲಾಮಗಿರಿಯನ್ನು ಹೇಳಿಕೊಡುವ ಶಿಕ್ಷಣವನ್ನು ತೊರೆದು, ಅದಕ್ಕೆ ಅದರ ಸೂಕ್ತ ಜಾಗವನ್ನು ತೋರಿಸಬೇಕಾಗಿದೆ. ನಾವು ಬೌದ್ಧಿಕವಾಗಿ ಸ್ವತಂತ್ರರಾಗಬೇಕಾಗಿದೆ. ನಮ್ಮ ಪುರಾತನ ಜ್ಞಾನವನ್ನು ಆಧುನಿಕ ಕಾಲಕ್ಕೆ ತಕ್ಕಂತೆ ಹೊಂದಿಸಬೇಕಾಗಿದೆ. ನೂತನ ಜೀವನ ಶೈಲಿ, ಕರ್ತವ್ಯ, ಸ್ವಾತಂತ್ರ್ಯ, ಪ್ರಜ್ಞಾವಂತ ನಾಗರಿಕತೆ, ಸ್ನೇಹ ಮತ್ತು ಪ್ರೀತಿಯಿಂದ ಕೂಡಿದ ಸಂಬಂಧ, ಅಪರಿಮಿತ ಶಕ್ತಿ, ಹಾಗು ನಮ್ಮ ಸ್ವಂತಿಕೆಯಿಂದ ನಮ್ಮ ಪುನರುತ್ಥಾನವಾಗಬೇಕಾಗಿದೆ.

ನಮ್ಮ ಚರಿತ್ರೆ ನಮ್ಮ ಪೂರ್ವಜರಿಂದ ಪ್ರಾರಂಭವಾಗಬೇಕು, ಅಯೋಧ್ಯೆ, ಹಸ್ತಿನಾಪುರ, ಕಾಂಚೀಪುರಂ, ಅಮರಾವತಿ ನಗರಗಳ ಗತವೈಭವವನ್ನು ನೆನೆದು ನವಜನಾಂಗದ ಮುಂದೆ ಚಿತ್ರಿಸಬೇಕಾಗಿದೆ. ನಾವು ಭಾರತಮಾತೆಯ ವೀರಪುತ್ರರಾಗಬೇಕಾಗಿದೆ!

ರಾಷ್ಟ್ರೀಯ ಮತ್ತು ಪ್ರಾಂತೀಯ ಭಾಷೆಗಳಲ್ಲಿ ನಮ್ಮ ಸಂಸ್ಕೃತಿ ಮತ್ತು ಚರಿತ್ರೆಗಳನ್ನು ಸಮರ್ಪಕವಾಗಿ ಬಿಂಬಿಸುವ ಶಕ್ತಿಯುತ ಭಾಷೆಯಲ್ಲಿ ರಚಿಸಬೇಕು. ಇವು ಭೂತಕಾಲದ ಧ್ವನಿಯನ್ನು, ಪ್ರಸ್ತುತ ಸ್ಥಿತಿಯನ್ನು ಒಳಗೊಂಡು ಮುಂದಿನ ಸವಾಲುಗಳನ್ನು ಎದುರಿಸುವಲ್ಲಿ, ಯಶಸ್ಸು ಪಡೆಯುವಲ್ಲಿ ಸಹಕಾರಿಯಾಗುವಂತೆ ಮಾಡಬೇಕು. ಪಾಶ್ಚಾತ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗು ಪ್ರಾಚ್ಯ ಸನಾತನ ಮೌಲ್ಯಗಳ ಸಮಾಗಮವಾಗಬೇಕಾಗಿದೆ. ಜೊತೆ ಜೊತೆಗೆ ಸ್ತ್ರೀಯರ ಶಿಕ್ಷಣ ಮತ್ತು ಸಬಲೀಕರಣ ಉಂಟಾಗಬೇಕು. ನಾವು ನಮ್ಮ ಅಂತಃಸತ್ವವನ್ನು ಅರಿತು, ಪಾಶ್ಚಾತ್ಯ ದೇಶಗಳಲ್ಲಿ ಇರುವ ಒಳ್ಳೆಯ ಅಂಶಗಳನ್ನು ಸೂಕ್ತವಾಗಿ ಜಾಗರೂಕತೆಯಿಂದ ಮೈಗೂಡಿಸಿಕೊಂಡು, ನಮ್ಮ ನ್ಯೂನತೆಗಳನ್ನು ಜೊತೆ ಜೊತೆಗೆ ಸರಿ ಪಡಿಸಿಕೊಳ್ಳಬೇಕು. ಭೀಷ್ಮ, ಯುಧಿಷ್ಠಿರ, ಮಹಾರಾಣಾ ಪ್ರತಾಪಸಿಂಹ ಮುಂತಾದ ಮಹಾನ್ ವ್ಯಕ್ತಿಗಳನ್ನು ನೆನೆದು ಅವರಿಗೆ ತಾಯಿನಾಡಿನ ಮೇಲಿದ್ದ ಪ್ರೇಮ, ವಿಶ್ವಾಸ, ಅಭಿಮಾನಗಳನ್ನು ಮೈಗೂಡಿಸಿಕೊಂಡು ಸ್ವಾಭಿಮಾನದ ಸಾರ್ಥಕತೆಯ ಜೀವನವನ್ನು ನಡೆಸಬೇಕಾಗಿದೆ.

### ನಮ್ಮ ಆದರ್ಶ ಮತ್ತು ಅದಕ್ಕೆ ಮಾರ್ಗ

ನಮ್ಮ ಗುರಿಯು ಮಹಾಭಾರತ, 'ಪರಾಕ್ರಮಿ ಭಾರತ'ದ ನಿರ್ಮಾಣ. ಆದರ್ಶ ಗೃಹಸ್ಥ ಜೀವನ ಮತ್ತು ತಪಸ್ಸು, ಶ್ರದ್ಧೆಯಿಂದ ಕೂಡಿದ ಬ್ರಹ್ಮಚಾರಿ (ವಿದ್ಯಾರ್ಥಿ) ಜೀವನ ನಮ್ಮ ಸಮಾಜಕ್ಕೆ ಬೇಕಾಗಿದೆ. ವೈದಿಕ ಸಾಮರಸ್ಯ ಜೀವನವನ್ನು ಮತ್ತೊಮ್ಮೆ ನಾವು ತರಬೇಕಾಗಿದೆ. ಬರೀ ಕಾಷಾಯ ವಸ್ತ್ರಧಾರಿಗಳಾಗದೆ ವಿಜ್ಞಾನ, ತಂತ್ರಜ್ಞಾನ, ಕಲೆ, ಸಾಹಿತ್ಯ, ಅಧ್ಯಾತ್ಮ, ಧರ್ಮಗಳಲ್ಲಿ ಆಳವಾದ ಪಾಂಡಿತ್ಯವನ್ನು ಹೊಂದಿದ್ದು, ನಿಸ್ವಾರ್ಥ ಜೀವನದಿಂದ ಕೂಡಿರುವ ಸಂನ್ಯಾಸಿಗಳು ಶ್ರೇಯಸ್ಕರ. ಗುರುಕುಲದ ಶಿಕ್ಷಣ ಪದ್ಧತಿ, ಗುರು – ಶಿಷ್ಯ ಸಂಬಂಧವು ಅತ್ಯಂತ ಪವಿತ್ರ, ಆದರ್ಶ ಮತ್ತು ಪ್ರಯೋಜನಕಾರಿಯೂ ಹೌದು.

ಬರೀ ನಮ್ಮ ಪೂರ್ವಜರ ಮಹಿಮೆಯನ್ನು ನೆನೆಯುತ್ತಾ, ಕಾಲ ಕಳೆಯುವುದು ಸರಿಯಲ್ಲ. ಅವರನ್ನು ನೆನೆಯುತ್ತಾ ಅವರು ನಡೆದು ಬಂದ ಪಥದಲ್ಲಿ ನಾವು ಮುಂದುವರೆದು ಶ್ರೇಯಸ್ಸನ್ನು ಸಾಧಿಸಬೇಕಾಗಿದೆ. ಇಲ್ಲದಿದ್ದರೆ ನಾವು ಸೋಮಾರಿಗಳಾಗಿ, ಅಜ್ಞಾನಿಗಳಾಗಿಯೇ ಉಳಿಯುತ್ತೇವೆ. ಶ್ರಮದಿಂದ ಕೂಡಿದ ಸರಿಯಾದ ಕೆಲಸ ಮತ್ತು ಕರ್ತವ್ಯನಿಷ್ಠೆಯಿಂದ ಮಾತ್ರ ಶ್ರೇಯಸ್ಸನ್ನು ಸಾಧಿಸಲು ಸಾಧ್ಯ. **ತ್ಯಾಗ ಮತ್ತು ಸೇವೆ** ಎಂಬ ಈ ಆದರ್ಶದಿಂದ ಸುಭದ್ರವಾದ, ಮುಂದುವರೆದ ರಾಷ್ಟ್ರವನ್ನು ಕಟ್ಟಲು ಸಾಧ್ಯ. ಈ ಪ್ರಪಂಚ ಅಥವಾ ಸಮಾಜವು ಒಂದು ಗರಡಿ ಮನೆಯಂತೆ. ಇದನ್ನು ಸರಿ ಮಾಡುತ್ತಾ ನಾವು ಸರಿಯಾಗುತ್ತೇವೆ, ಉತ್ತಮರಾಗುತ್ತೇವೆ. **'ಬಹುಜನ ಹಿತಾಯ, ಬಹುಜನ ಸುಖಾಯ'** ನಮ್ಮ ಧ್ಯೇಯವಾಗಿರಬೇಕು. ಭಾರತದ ಕೇಂದ್ರಬಿಂದುವಾದ ಅಧ್ಯಾತ್ಮದ ಹಾದಿಯನ್ನು ಹಿಡಿದು ಅದರ ಆಶ್ರಯದಲ್ಲಿ ಸುಭದ್ರವಾದ ನೂತನ ಸಮಾಜಕ್ಕೆ ಅಡಿಪಾಯವೊಂದನ್ನು ಹಾಕಬೇಕು. ಆಗ ಮಾತ್ರ ವಿಶ್ವಗುರು ಭಾರತವನ್ನು ನಿರ್ಮಾಣ ಮಾಡಲು ಸಾಧ್ಯ.

ಸ್ವಾಮಿ ವಿವೇಕಾನಂದರ ವಿಚಾರಧಾರೆಗಳನ್ನು ಅರ್ಥಪೂರ್ಣವಾಗಿ, ಸಂಕ್ಷಿಪ್ತವಾಗಿ ಸೋದರಿ ನಿವೇದಿತಾರವರು ತಮ್ಮದೇ ಆದ ಶಕ್ತಿಯುತ ಭಾಷೆಯಲ್ಲಿ ಹೀಗೆ ತಿಳಿಸಿದ್ದಾರೆ. ಈ ಅದ್ಭುತ ವಿಚಾರಗಳನ್ನು ಭಾರತೀಯರು ಸರಿಯಾಗಿ ಅರ್ಥಮಾಡಿಕೊಂಡು ಜಾಗೃತರಾದರೆ, ಭಾರತ ದೇಶವು ಮುಂದುವರೆಯುತ್ತಿರುವ ರಾಷ್ಟ್ರದಿಂದ ಮುಂದುವರೆದ ರಾಷ್ಟ್ರವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಅದಕ್ಕೆ ಇಂದಿನ ಯುವಕರು ನಮ್ಮ ಮತ್ತು ನಮ್ಮ ಸಂಸ್ಕೃತಿಯ ಜ್ಞಾನವನ್ನು ಸರಿಯಾಗಿ ತಿಳಿದುಕೊಂಡು, ಅದರ ಮಹತ್ವವನ್ನು ಅರ್ಥಮಾಡಿಕೊಂಡು, ಸ್ವಾಭಿಮಾನದ ಜವಾಬ್ದಾರಿಯುತ ಜೀವನವನ್ನು ನಡೆಸಬೇಕಾಗಿದೆ. ಆಗ ಮಾತ್ರ ನಾವು ಸುಭದ್ರವಾದ ಭಾರತ ದೇಶವನ್ನು ಮತ್ತೊಮ್ಮೆ ಕಟ್ಟಲು ಸಾಧ್ಯ. ಬನ್ನಿ ಎಚ್ಚರಗೊಳ್ಳೋಣ! ಕಾರ್ಯೋನ್ಮುಖರಾಗೋಣ!





# ಸ್ವಾಮೀಜಿ ಪತ್ರಗಳಲ್ಲಿ ನಿವೇದಿತಾ

ಡಾ. ಸಿ.ಪಿ.ಕೃಷ್ಣಕುಮಾರ್

ಸ್ವಾಮಿ ವಿವೇಕಾನಂದರು ಪತ್ರಗಳ ಮೂಲಕ ತಮ್ಮ ಅಸಂಖ್ಯಾತ ಶಿಷ್ಯಂದಿರಿಗೆ ಮಾರ್ಗದರ್ಶನ, ಸ್ಫೂರ್ತಿ ಹಾಗೂ ಉನ್ನತ ಬದುಕಿನ ಸಂದೇಶ ಗಳನ್ನು ನೀಡುತ್ತಿದ್ದರು. ಅವರು ನಿವೇದಿತಾಗೆ ಬರೆದ ಪತ್ರಗಳಲ್ಲಿ ವ್ಯಕ್ತವಾಗಿರುವ ವಿಶಿಷ್ಟ ಅಂಶಗಳನ್ನು ಕುರಿತು ವಿವರಿಸಿರುವ ಲೇಖಕರು ಕನ್ನಡದ ಸುಪ್ರಸಿದ್ಧ ಬರಹಗಾರರು. ಅನೇಕ ಗ್ರಂಥಗಳನ್ನು ರಚಿಸಿ ಪ್ರಕಟಿಸಿರುವ ಅವರು ಮೈಸೂರು ಆಶ್ರಮದ ಭಕ್ತರೂ ಆಗಿದ್ದಾರೆ.

ಭರತಖಂಡ ಪ್ರಪ್ರಾಚೀನ ಕಾಲದಿಂದಲೂ ತೆರೆತೆರೆಯಾಗಿ ಬಂದ ವಿದೇಶೀಯರನ್ನು ಸ್ವಾಗತಿಸಿ, ಉದಾರಾಶ್ರಯ ನೀಡಿ, ಲಾಭನಷ್ಟ ಗಳೆರಡಕ್ಕೂ ಗುರಿಯಾಗಿರುವುದು ಇತಿಹಾಸ ಪ್ರಸಿದ್ಧವಾದ ವಿಷಯ. ವಿದೇಶೀಯರನ್ನು ಸ್ಫುಟವಾಗಿ ಎರಡು ವರ್ಗ ಮಾಡಬಹುದು: ಭಾರತದ ವಿಪುಲೈಶ್ವರ್ಯದಿಂದ ಆಕರ್ಷಿತರಾಗಿ ಅದನ್ನು ಕೊಳ್ಳೆ ಹೊಡೆಯುವ ದುರಭಿಸಂಧಿಯಿಂದ ಮೇಲಿಂದ ಮೇಲೆ ಎರಗಿ ಬಂದ ಆಕ್ರಮಣಕಾರರು ಒಂದು ವರ್ಗ. ಇವರ ಅವ್ಯಾಹತವಾದ ಲೂಟಿ, ದರೋಡೆಗಳ ಕಥೆಯಿಂದಲೇ ಭಾರತದ ರಾಜಕೀಯ ಚರಿತ್ರೆಯೆಲ್ಲ ತುಂಬಿಹೋಗಿದೆ. ಆದರೆ ಇಷ್ಟು ಬಹುಸಂಖ್ಯಾತವಲ್ಲ ದಿದ್ದರೂ ತಾನು ಮಾಡಿದ ಮಹೋಪಕಾರಗಳಿಂದ ಸಂಪೂಜ್ಯವಾಗಿ ನಿತ್ಯಸ್ಮರಣೀಯವಾಗಿರುವ ಮತ್ತೊಂದು ವರ್ಗವಿದೆ. ಭರತ ಖಂಡದ ಆಧ್ಯಾತ್ಮಿಕ ವೈಭವದಿಂದ, ಉತ್ತುಂಗ ಧಾರ್ಮಿಕ ಪರಂಪರೆ ಯಿಂದ, ಸಮುಜ್ವಲ ಸಂಸ್ಕೃತಿಯಿಂದ ಸೆಳೆತಗೊಂಡು ಇಲ್ಲಿಗೆ ಬಂದು ಈ ನಾಡನ್ನೇ ತಮ್ಮ ಕರ್ಮಭೂಮಿಯನ್ನಾಗಿ ಮಾಡಿ ಕೊಂಡು, ಅದಕ್ಕೆ ಅಮೋಘವಾದ ಸೇವೆ ಸಲ್ಲಿಸಿ, ತಮ್ಮ ಬದುಕನ್ನು ಸಾರ್ಥಕಗೊಳಿಸಿಕೊಂಡ ಅನೇಕ ಮಹಾನುಭಾವರು ಈ ಪಂಕ್ತಿ ಯಲ್ಲಿ ಬರುತ್ತಾರೆ.

ಯಾತ್ರಿಕರಿಂದ ಮತ್ತು ಪ್ರವಾಸಿಗಳಿಂದ ಹಿಡಿದು, ಭಾರತವನ್ನೇ ತಮ್ಮ 'ಮಾತೃಭೂಮಿ'ಯನ್ನಾಗಿ ಸ್ವೀಕರಿಸಿದ ಪರಮಪಾವನೆ

BLESSINGS TO NIVEDITA.

The mother's heart, the hero's will
The sweetness of the southern breeze,
The sacred charm and strength that dwell
On Aryan altars, flaming, free;
All these be yours, and many more
No ancient soul could dream before—
Be thou to India's future son
The mistress, servant, friend in one.

With the blessings of
Vivekananda

ಸೋದರಿ ನಿವೇದಿತಾ ತನಕ ಎಷ್ಟೋ ಮಂದಿ ವಿದೇಶೀಯರು ಭಾರತಕ್ಕೆ ಸಲ್ಲಿಸಿರುವ ಸೇವೆಯನ್ನು ದೇಶೀಯರೂ ಸಲ್ಲಿಸಿಲ್ಲವೆಂದರೆ ಉತ್ಪ್ರೇಕ್ಷೆಯಾಗದು. ಭಾರತದ, ಸನಾತನ ಸಂಸ್ಕೃತಿ, ಕಲೆಗಳ ಬಗೆಗೆ ಅಪೂರ್ವ ಶ್ರದ್ಧೆ ನಿಷ್ಠೆಗಳಿಂದ ದುಡಿದು, ಸಂಶೋಧಿಸಿ, ಅವುಗಳನ್ನೆಲ್ಲ ಬೆಳಕಿಗೆ ತಂದು, ಭಾರತೀಯರಿಗೆ ಸ್ವ ಸ್ವರೂಪದರ್ಶನ ಮಾಡಿಸಿದ

ಶ್ರೇಯಸ್ಸು ಈ ವಿದೇಶೀಯ ಮಹಾವ್ಯಕ್ತಿಗಳದು. ಭಾರತೀಯರನ್ನು ಆತ್ಮವಿಸ್ಮೃತಿಯಿಂದ ಬಡಿದೆಬ್ಬಿಸಿದವರು ಇವರೇ ಎಂದರೆ ತಪ್ಪಲ್ಲ. ಇವರನ್ನು ವಿದೇಶೀಯರೆಂದು ಕರೆಯುವುದು ಅನುಚಿತವಾಗುತ್ತದೆ. ಇವರು ಭಾರತದಲ್ಲಿ ಹುಟ್ಟಿದವರಲ್ಲದಿದ್ದರೂ ಭಾರತದ ಆತ್ಮಜರೇ, ಮಾನಸಪುತ್ರರೇ, ಸಂಶಯವಿಲ್ಲ! ಭಾರತೀಯರಾಗಿ ಜನಿಸಿಯೂ 'ಪರದೇಶಿ'ಗಳಾದ ಜನ ನಮ್ಮಲ್ಲಿ ಬಹಳ ಮಂದಿ ಇರುವಾಗ, ವಿದೇಶಗಳಲ್ಲಿ ಹುಟ್ಟಿ, ಭಾರತಕ್ಕೆ ತಮ್ಮ ತನು ಮನ ಧನಾದಿ ಸರ್ವಸ್ವವನ್ನೂ ಸಮರ್ಪಿಸಿದ ಪುಣ್ಯಾತ್ಮರು ಇಲ್ಲಿ ಅಪಾರ ವಿಸ್ಮಯ ಗೌರವಗಳನ್ನು ಚೋದಿಸುತ್ತಾರೆ.

ಹೀಗೆ ಭರತಭೂಮಿಯ ದೇಹಜರಲ್ಲದಿದ್ದರೂ ಆತ್ಮಜರಾದ ಮಹಿಮಾನ್ವಿತ ಚೇತನಗಳಲ್ಲಿ ಸೋದರಿ ನಿವೇದಿತಾ ಅಗ್ರಸ್ಥಾನಕ್ಕೆ ಅರ್ಹಳಾಗುತ್ತಾಳೆ. ಈ ಐರಿಷ್ ಮಹಿಳೆ ತನ್ನ ವ್ಯಕ್ತಿತ್ವ ಸಮಸ್ತವನ್ನೂ ಭರತಖಂಡದಲ್ಲಿ ವಿಲೀನಗೊಳಿಸಿ, ಇಲ್ಲಿಯೇ ಬೇರೂರಿ, ಅಚ್ಚ ಭಾರತೀಯ ಮಹಿಳೆಯಾಗಿ ಪರಿವರ್ತನವಾದುದೊಂದು ದೊಡ್ಡ ಸೋಜಿಗ. ಆಕೆಯ ಗುರುವರ್ಯ ಸ್ವಾಮಿ ವಿವೇಕಾನಂದರು ಅನುಗ್ರಹಿಸಿದ '**ನಿವೇದಿತಾ**' ಎಂಬ ಅಭಿಧಾನವೆ ಈ ಪರಿವರ್ತನೆಗೆ ಭಾರತೀಯತ್ವ ಪ್ರತಿಷ್ಠಾಪನೆಗೆ ದ್ಯೋತಕವಾಗಿದೆ. 'ನಿವೇದಿತಾ' – ಎಂಥ ಅರ್ಥಪೂರ್ಣವಾದ ಹೆಸರು! ಭರತಖಂಡಕ್ಕೆ ಭಾರತೀಯ ಧರ್ಮ ಸಂಸ್ಕೃತಿಗಳಿಗೆ ಆಕೆ ತನ್ನನ್ನು ಸಂಪೂರ್ಣವಾಗಿ ತೆತ್ತುಕೊಂಡಳು; ಭಾರತೀಯ ಸಾಮಾಜಿಕ ಆಚಾರ ವಿಚಾರಗಳಲ್ಲಿ ಪೂರ್ತಿಯಾಗಿ ಬೆರೆತು ಹೋದಳು; ''ಇದು ನನ್ನ ತಾಯ್ನಾಡು'' ಎಂಬ ಅವಿನಾಭಾವದಿಂದ ಕೆಲಸ ಮಾಡಿ, ಭಾರತೀಯ ಸಮಾಜಕ್ಕೆ ಅನನ್ಯವಾದ ಕೈಂಕರ್ಯವನ್ನೆಸಗಿದಳು. ಯಾವ ಭಾರತೀಯ ಸಂಜಾತರಿಗಿಂತಲೂ ಕಡಿಮೆಯಿಲ್ಲದಂತೆ ಲೌಕಿಕಾಲೌಕಿಕ ಕ್ಷೇತ್ರಗಳಲ್ಲಿ ಕೆಲಸಮಾಡಿ, ವಿವೇಕಾನಂದರ ತುಂಬು ಮೆಚ್ಚುಗೆಗೆ ಪಾತ್ರಳಾದಳು. ಆ ಮಹಾತಾಯಿಯ ಬದುಕೊಂದು ಸ್ಫೂರ್ತಿದಾಯಕ ಗಾಥೆ; ನಾಡಿಗಾಗಿ ಏನು ಮಾಡಬಹುದು ಎಂಬುದರ ಕಲ್ಪನೆಯಿಲ್ಲದೆ ತೊಳಲುವವರಿಗಾಗಿ ಆಕೆಯ ನಡೆನುಡಿಗಳು ಜ್ಞಾನಾಂಜನ ಶಲಾಕೆಯಾಗಬಲ್ಲವು! ಭಾರತೀಯರು ರಾಷ್ಟ್ರಪ್ರೇಮವನ್ನು, ರಾಷ್ಟ್ರೀಯ ಮನೋಧರ್ಮವನ್ನು ಈಕೆಯಿಂದ ಕಲಿಯಬೇಕು.

೨

ಸ್ವಾಮಿ ವಿವೇಕಾನಂದರು ಮತ್ತು ಸೋದರಿ ನಿವೇದಿತಾ ಅಪ್ರತಿಮ ಗುರು–ಶಿಷ್ಯೆಯರು; ಅವರ ಸಂಬಂಧ ಅನನ್ಯವಾದುದು.

''ನಿನ್ನ ಏಳಿಗೆಗೆ ನೀನೇ ಶಿಲ್ಪಿ'' ಎಂಬುದು ಸ್ವಾಮೀಜಿಯ ಪ್ರಸಿದ್ಧ ಸೂಕ್ತಿ. ಅದು ಸತ್ಯವಾದರೂ ಪೂರ್ಣ ಸತ್ಯವಲ್ಲ. ಒಂದು ಶಿಲೆ ಶಿಲ್ಪವಾಗಲು ಅನ್ಯಶಕ್ತಿಗಳೂ ಕಾರಣವಾಗಬಹುದು. ಶ್ರೀರಾಮಕೃಷ್ಣರು ತಮ್ಮನ್ನು ಕಂಡರಿಸಿದಂತೆ, ವಿವೇಕಾನಂದರು ನಿವೇದಿತಾಳನ್ನು ಕಂಡರಿಸಿದರು ಎಂದರೆ ತಪ್ಪಲ್ಲ. ಆ ಅಮೃತ ಶಿಲೆಯನ್ನು ಅವರು ದಿವ್ಯಮೂರ್ತಿಯನ್ನಾಗಿ ಕೆತ್ತಿ, 'ಮಹಾಶ್ವೇತೆ'ಯನ್ನಾಗಿಸಿದರು.

ನಿವೇದಿತಾ ಮೂಲತಃ ಹಾಲ್ಗಲ್ಲು, ವಜ್ರ ಎಂಬುದನ್ನು ಮರೆಯಬಾರದು. ಒರಟಾಗಿದ್ದ ಗಣಿಯ ವಜ್ರಕ್ಕೆ ಸ್ವಾಮೀಜಿ ಸಾಣೆ ಹಿಡಿದು, ಪರಿಷ್ಕರಿಸಿ, ಪ್ರೋಜ್ವಲಗೊಳಿಸಿದರು; ಅದರ ಪ್ರಕಾಶ ಎಲ್ಲೆಡೆ ಪ್ರಸರಿಸುವಂತೆ ಮಾಡಿದರು. ಅವರು ಹೇಳುತ್ತಾರೆ: ''ನಾನು ಇಂಗ್ಲೆಂಡಿನಲ್ಲಿ ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ದೊರೆತ ಶ್ರೇಷ್ಠತಮ ಪುಷ್ಪ ನಿವೇದಿತಾ.'' ಅದು ಸಹಸ್ರದಲ ಸೌಗಂಧಿಕ!

ಸ್ವಾಮೀಜಿ ಯುಗನಾಯಕ, ನಿವೇದಿತಾ 'ಸಿಂಹಿಣಿ'. ನವಭಾರತ ನಿರ್ಮಾಣಕ್ಕೆ ಇಬ್ಬರ ಕೊಡುಗೆಯೂ ಅಸಾಧಾರಣವಾದುದು. ಸ್ವಾಮಿ ಹರ್ಷಾನಂದರು ಒಂದೆಡೆ ಹೇಳುತ್ತಾರೆ: ''ಇಂದು ಭಾರತ ಸ್ವತಂತ್ರವಾಗಿದ್ದರೆ, ಸ್ವಾತಂತ್ರ್ಯ ಚಳುವಳಿಗೆ ರಾಷ್ಟ್ರನಾಯಕನ್ನು ಸ್ಫೂರ್ತಿಸಿದ ಕೀರ್ತಿ ಸ್ವಾಮಿ ವಿವೇಕಾನಂದರಿಗೆ ಸಲ್ಲುವಷ್ಟೇ ನಿವೇದಿತಾಳಿಗೂ ಸಲ್ಲುತ್ತದೆ.'' ಇಬ್ಬರ ಆದರ್ಶ, ಧ್ಯೇಯೋದ್ದೇಶ, ಸಂಕಲ್ಪಗಳು ಸಮಾನವಾದ್ದು, ಅವರನ್ನೊಂದು ಲೋಕೋತ್ತರ ಬಂಧದಲ್ಲಿ ಒಂದುಗೂಡಿಸಿದ್ದವು.

ಪ್ರಕೃತ ಸ್ವಾಮೀಜಿ ನಿವೇದಿತಾಳಿಗೆ ಬರೆದ ಪತ್ರಗಳನ್ನು ಪರಿಗಣಿಸಬೇಕಾಗಿದೆ. ನಿವೇದಿತಾಳ '**ನಾ ಕಂಡಂತೆ ನನ್ನ ಗುರುದೇವ**' (My Master as I saw Him) ಎಂಬ ಪುಸ್ತಕಕ್ಕೆ ಈ ಪತ್ರಾವಳಿ ಪೂರಕವಾಗುತ್ತದೆ. ನಿವೇದಿತಾ ಕೃತಿ ವಿವೇಕಾನಂದ ಪ್ರಪಂಚ ದರ್ಶನಕ್ಕೊಂದು ಬೃಹತ್ ಗವಾಕ್ಷವಾಗಿದ್ದರೆ, ಸ್ವಾಮೀಜಿಯ ಪತ್ರಗಳು ನಿವೇದಿತಾ ನೋಟಕ್ಕೊಂದು ಕಿರುಕಿಂಡಿ ಎನ್ನಬಹುದು.

ಆ ಸುಮಾರು ಐವತ್ತು ಪತ್ರಗಳಲ್ಲಿ ಕೆಲವು ಅಷ್ಟೇನೂ ಗಮನಾರ್ಹವಾಗಿಲ್ಲ (ಅವು ಹ್ರಸ್ವ ಕೂಡ). ಎಲ್ಲೋ ಕೆಲವು ಮಾತ್ರ ನಿವೇದಿತಾ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುತ್ತವೆ; ಅದು ಒಮ್ಮೊಮ್ಮೆ ಬೆರಗುಗೊಳಿಸುವ ಬೆಳಕು! ಅನೇಕ ಪತ್ರಗಳಲ್ಲಿ ಸ್ವಾಮೀಜಿ ಸ್ವವಿಚಾರಗಳನ್ನೇ ಹೇಳಿಕೊಂಡಿದ್ದಾರೆ. ಮತ್ತೆ ಕೆಲವು ಪತ್ರಗಳು ವ್ಯಕ್ತ್ಯತೀತವಾಗಿದ್ದು, ವಿವೇಕಾನಂದರ 'ಜಗದ್ಧಿತ' ದೃಷ್ಟಿಯಿಂದ ಅಮೂಲ್ಯವಾಗಿದೆ. ಒಟ್ಟಿನಲ್ಲಿ ನಿವೇದಿತಾ ಚಿತ್ರ ಎದ್ದು ಕಾಣುವುದು ಕೆಲವೆಡೆ ಮಾತ್ರ; ಹಾಗೆ ಕಂಡಾಗ ಢಾಳಾಗಿಯೇ ಕಾಣುತ್ತದೆ!

ಈ ಪತ್ರಗಳಲ್ಲಿ ಮುಖ್ಯವಾಗಿ ನಮ್ಮ ಲಕ್ಷ್ಯಕ್ಕೆ ಬರುವ ವಿದ್ಯಮಾನವೆಂದರೆ, ಸ್ವಾಮೀಜಿ ನಿವೇದಿತಾಳನ್ನು ವಿವಿಧ ಪಾತ್ರಗಳಲ್ಲಿರಿಸಿ ಪರಿಭಾವಿಸಿರುವ ಅಚ್ಚರಿಯ ಪರಿ. ಸೋದರಿಯಾಗಿ ಸರಿಯೆ (ಅವರು ಎಲ್ಲರಿಗೂ ಭಗಿನಿ); ಅಷ್ಟೇ ಅಲ್ಲ, ಗೆಳತಿಯಾಗಿ, ಮಗಳಾಗಿ, ಒಂದರ್ಥದಲ್ಲಿ ತಾಯಾಗಿ ಕೂಡ ಅವಳನ್ನು ಸಂಭಾವಿಸಿದ್ದಾರೆ!

೩

ತಮ್ಮ ಪತ್ರಗಳಲ್ಲಿ ವಿವೇಕಾನಂದರು ನಿವೇದಿತಾಳಿಗೆ ದೃಢವಾದ ಭರವಸೆ, ಕೆಚ್ಚು, ನೆಚ್ಚುಗಳನ್ನು ಸದಾ ತುಂಬುತ್ತಾರೆ; ಅವರ ಸಹಾಯ, ಸಾಹಚರ್ಯ, ಬೆಂಬಲ ಅವಳ ಪಾಲಿಗೆ ನಿತ್ಯ ನಿರಂತರ ಎಂಬುದು ಅವುಗಳಲ್ಲಿ ವಿದಿತವಾಗುತ್ತದೆ: ಅವಳಲ್ಲಿ ಕಿಂಚಿತ್ ನಿರಾಸೆ ಮೊಳೆತರೂ ಸ್ವಾಮೀಜಿ ಆ ಬೂದಿಯನ್ನು ನಿತ್ಯ ಊದಿ ಹಾರಿಸಿ ಕಳೆದು, ಆಶಾಗ್ನಿಯನ್ನು ಕೆರಳಿಸುವ ಕೆಲಸ ಮಾಡುತ್ತಾರೆ.

(ಮತ್ತೊಮ್ಮೆ ಅವರೇ ನಿರಾಶೆಗೆ ಗುರಿಯಾಗುತ್ತಾರೆ; ಒಂದು ಪತ್ರದಲ್ಲಿ ಬರೆಯುತ್ತಾರೆ: ''ನನ್ನ ಸ್ವಪ್ನಗಳೆಲ್ಲ ಪುಡಿಪುಡಿಯಾಗುತ್ತಿವೆ!'' ಅದು 'ಸಂಚಾರಿ'ಯಷ್ಟೆ.)

೫.೫.೧೮೯೭ರ ಪತ್ರದಲ್ಲಿ ಸ್ವಾಮೀಜಿ ಬರೆಯುತ್ತಾರೆ: ''ಸಮಸ್ತ ಆಶೀರ್ವಾದಗಳೂ ನಿನ್ನ ಮೇಲಿರಲಿ. ನಮ್ಮ ಮಾತೃಭಾಷೆಯಲ್ಲಿ ಹೇಳುವಂತೆ ನನ್ನ ಇಡೀ ಜೀವನ ನಿನ್ನ ಸೇವೆಗೆ ಮೀಸಲಾಗಿದೆ.'' ಈ ಸಮರ್ಪಣ ಸಾಮಾನ್ಯವೆ?

೨೩.೭.೧೮೯೭ ರ ಪತ್ರದಲ್ಲಿ ಹೀಗೆ ಹೇಳಲಾಗಿದೆ: ''ಬಡ ಭಾರತೀಯರಿಗಾಗಿ ನಿನ್ನ ಮಹತ್ತರ ಸ್ವಾರ್ಥತ್ಯಾಗಕ್ಕಾಗಿ ದೇವರು ನಿನ್ನನ್ನು ಆಶೀರ್ವದಿಸಲಿ... ನೀನು ಭರತಖಂಡಕ್ಕೆ ಸಹಾಯ ಮಾಡಲಿ, ಬಿಡಲಿ, ನೀನು ವೇದಾಂತವನ್ನು ಸ್ವೀಕರಿಸಲಿ, ಬಿಡಲಿ, ಜೀವನವಿರುವವರೆಗೂ ನಿನ್ನೊಂದಿಗೆ ನಿಲ್ಲುವೆನೆಂದು ಮಾತ್ರ ನಿನಗೆ ಮಾತು ಕೊಡುತ್ತೇನೆ.'' ಈ ಪ್ರೀತಿ ಅವ್ಯಾಜ ಎನಿಸಿದರೂ ಪೂರ್ತಿ ಅಂತಲ್ಲ; ನಿವೇದಿತಾಳ ಅಸೀಮ ಭಾರತ ಸೇವೆಯಿಂದ ಪ್ರೇರಿತ.

ಅಲ್ಪದಿಂದ ಹುಟ್ಟಿ ಕಲ್ಪ ಬೆಳೆಯುತ್ತದೆ, ಬೀಜದಿಂದ ಭೂಜರಾಜಿ ಹೊಮ್ಮುತ್ತದೆ, ಒಳಿತು ಕ್ರಮೇಣ ಜಗತ್ತನ್ನು ಆವರಿಸುತ್ತದೆ ಎಂದು ಮಹತ್ವದ ಪತ್ರವೊಂದರಲ್ಲಿ (೪.೪.೧೯೦೧) ಸೂಚಿಸುತ್ತಾರೆ ಸ್ವಾಮೀಜಿ: ''ಪ್ರೀತಿಯ ಮಗು, ಒಂದು ಸಾಕು – ಪ್ರಪಂಚದಲ್ಲಿ ಒಂದು ಸಾಕು, ಕಾಡನ್ನು ಬೆಳೆಯಿಸಲು ಒಂದು ಬೀಜ ಸಾಕು – ಎಂದಿಗೂ ನಿನ್ನ ಪ್ರೀತಿಯ ತಂದೆ ವಿವೇಕಾನಂದ.'' (ಇದಕ್ಕೆ ಮುನ್ನ ಈ ಮಾತುಗಳು ಬಂದಿವೆ: ''ಓ ತಾಯಿ, ತಾಯಿ, ಎಲ್ಲ ಕೃತಜ್ಞತೆ, ಎಲ್ಲ ಪ್ರೀತಿ, ಎಲ್ಲ ಪೌರುಷ ಇನ್ನೂ ಸತ್ತಿಲ್ಲ!'')

ಪರಿಸ್ಥಿತಿ ಸದ್ಯಕ್ಕೆ ಎಷ್ಟೇ ಕೆಟ್ಟದಾಗಿರಲಂತೆ, ಮುಂದಕ್ಕೆ –ಕಡೆಗೆ – ಎಲ್ಲವೂ ಸರಿಹೋಗಿ, ದೈವೀ ವ್ಯವಸ್ಥೆ ನೆಲೆಗೊಳ್ಳುವುದು ಎಂಬುದನ್ನು ಕುರಿತ ಈ ಅದಮ್ಯ ಆಶಾವಾದವನ್ನು ಲೆಕ್ಕಿಸಬೇಕು: ''ಜಗನ್ಮಾತೆ ಮತ್ತೊಮ್ಮೆ ದಯಾಪರಳಾದಂತೆ ಕಾಣುತ್ತಿದೆ. ಚಕ್ರ ನಿಧಾನವಾಗಿ ಮೇಲಕ್ಕೆ ಬರುತ್ತಿದೆ'' (೨೦.೬.೧೯೦೦); ''ಎಲ್ಲ ಆಶಾದಾಯಕವಾಗಿ ಕಾಣುತ್ತಿದೆ. ಸಿದ್ಧಳಾಗಿರು.'' (೨೩.೧೨.೧೮೯೯)

ನೀವೇದಿತಾಳ ಪತ್ರಗಳು ತಮ್ಮ ಮೇಲೆ ಉಂಟುಮಾಡಿದ ಪ್ರಭಾವ, ಪರಿಣಾಮಗಳನ್ನು ಸ್ವಾಮೀಜಿ ಕುತೂಹಲಕರವಾಗಿ ತಿಳಿಸುವುದು ಹೀಗೆ: ''ನಿನ್ನ ಅತ್ಯಂತ ಆದರದ, ಉತ್ತೇಜಕ ಪ್ರೀತಿಯ ಪತ್ರ, ನೀನು ಯೋಚಿಸಲೂ ಶಕ್ಯವಿಲ್ಲದಷ್ಟು ಶಕ್ತಿಯನ್ನು ನನಗೆ ನೀಡಿತು.'' (೫.೫೧೮೯೭) ''ನನಗೆ ನೀನು ಬರೆಯುವ ಪ್ರತಿಯೊಂದು ಮಾತಿಗೂ ನಾನು ಪ್ರಾಮುಖ್ಯ ನೀಡುತ್ತೇನೆ. ನಿನ್ನ ಪ್ರತಿಯೊಂದು ಕಾಗದಕ್ಕೂ ನೂರು ಬಾರಿ ಸ್ವಾಗತ. ನಿನಗೆ ಯಾವಾಗಲೆಲ್ಲ ಮನಸ್ಸಾಗುವುದೋ, ಅವಕಾಶವಾಗುವುದೋ ಆಗ ಬರೆಯಲು ಲೆಲ್ಲ ನಿನ್ನಿಚ್ಛೆ ಬಂದುದನ್ನು ಬರೆ. ನೀನು ಬರೆಯುವ ಯಾವುದನ್ನೂ ಅಪಾರ್ಥ ಮಾಡಿಕೊಳ್ಳುವುದಿಲ್ಲ ಮತ್ತು ಯಾವುದೂ ಪ್ರಶಂಸನೀಯವಾಗದೆ ಹೋಗುವುದಿಲ್ಲ ಎಂಬುದನ್ನು ಚೆನ್ನಾಗಿ ತಿಳಿ.'' (೨೦.೬.೧೮೯೭)

ನಿವೇದಿತಾಳಿಗೆ ತಾವು ಅತ್ಯಂತ ಋಣಿ ಎಂಬುದನ್ನು ಸ್ಪಷ್ಟಪಡಿಸಿ, ಅದೇ ಉಸಿರಿನಲ್ಲಿ ಹೇಳುತ್ತಾರೆ ಸ್ವಾಮೀಜಿ: ''ಇದೆಲ್ಲವೂ ಇತರರ ಒಳಿತಿಗಾಗಿ ಎಂಬುದೊಂದೇ ನನಗೆ ಸಮಾಧಾನ.''(ಅಲ್ಲೇ). ಸ್ವಾರ್ಥಲವಲೇಶವೂ ಇಲ್ಲದ, ಸಮಾಜದ ಶ್ರೇಯಕ್ಕೆ ಮಾತ್ರ ಸಂಬಂಧಿಸಿದ, ನವೋದಯಪರವಾದ ಒಂದು ಉದಾರ, ಉದಾತ್ತ ಧೋರಣೆ ಇಲ್ಲಿದೆಯಲ್ಲವೆ?

ಶಿಷ್ಯೆಗೆ ಮತ್ತೆ ಮತ್ತೆ ಭರವಸೆಯನ್ನು ನೀಡಿ, ಆಶಾಮೃತವನ್ನೂಡಿ, ಅವಳನ್ನು ಹುರಿದುಂಬಿಸಿ, ಅವಳ ಲೇಸಿಗಾಗಿ ಪ್ರಾರ್ಥಿಸುತ್ತಾರೆ, ಸ್ವಾಮೀಜಿ: ''ಕರ್ತವ್ಯಕ್ಕೆ ಕೊನೆಯೇ ಇಲ್ಲ. ಈ ಜಗತ್ತು ಸಂಪೂರ್ಣವಾಗಿ ಸ್ವಾರ್ಥಮಯ. ಧೈರ್ಯದಿಂದಿರು. ಒಳ್ಳೆಯ ಕಾರ್ಯ ಮಾಡಿದವರಾರೂ ದುಃಖಕ್ಕೆ ಒಳಗಾಗಿಲ್ಲ.'' (೨೦.೫. ೧೮೯೮); ''ನಿನ್ನ ಮನಸ್ಸಿನಲ್ಲಿ ಏನೋ ಅಂಧಕಾರ ಕವಿದಂತಿದೆ. ಅದಕ್ಕಾಗಿ ಚಿಂತಿಸಬೇಡ. ಯಾವುದೂ ಶಾಶ್ವತವಾಗಿ ನಿಲ್ಲುವುದಿಲ್ಲ, ಹೇಗಿದ್ದರೂ ಜೀವನ ಅಶಾಶ್ವತ.'' (೧.೧೧.೧೮೯೯); ''ನೀನು ಎಲ್ಲಿಯವರೆಗೆ ಜಗನ್ಮಾತೆಯ ಸೇವೆಯನ್ನು ಹೃತ್ಪೂರ್ವಕವಾಗಿ ಮಾಡುವೆಯೋ ಅಲ್ಲಿಯವರೆಗೆ ಅವಳೇ ನಿನಗೆ ಮಾರ್ಗದರ್ಶಕಳಾಗುವಳು.''(೨೫.೮.೧೯೦೦);''ನಮ್ಮ ಕೆಲಸ ಅಭಿವೃದ್ಧಿಯಾಗಿಯೇ ತೀರುವುದು. ಅದಕ್ಕಾಗಿ ವ್ಯಸನಪಡಬೇಡ.'' (೧೫.೨.೧೯೦೦); ''ಈ ಬಾರಿ ಶುಭಶಕ್ತಿ ಕೊಂಚಕೊಂಚವಾಗಿ ಬರುತ್ತಿದೆ ಎಂಬುದರಲ್ಲಿ ಸಂದೇಹವೇ ಇಲ್ಲ.'' (೧೫.೨.೧೯೦೦); ''ಪ್ರಿಯ ಗೆಳತಿ, ಹೀಗೆ ಜೀವನದಲ್ಲಿ ಎಲ್ಲವೂ ಬರುತ್ತದೆ, ಹೋಗುತ್ತದೆ. ಕೇವಲ ದೇವರೊಬ್ಬರೇ ಬದಲಾಗದೆ ಇರುವವನು. ಅವನು ಪ್ರೇಮಮೂರ್ತಿ. ಅವನು ನಿನ್ನ ಹೃದಯದಲ್ಲಿ ಶಾಶ್ವತವಾಗಿ ನೆಲಸಲಿ ಎಂಬುದೇ ನನ್ನ ನಿರಂತರ ಪ್ರಾರ್ಥನೆ.'' (೫.೫.೧೮೯೭)

''ಪ್ರಾಚೀನ ದೇಶದ ಅಸ್ತಿಭಾರವನ್ನೇ ಈ ಬಾರಿ ನಾವು ಅಲ್ಲಾಡಿಸುವೆವು'' ಎಂಬ ಪ್ರಚಂಡ ಆತ್ಮವಿಶ್ವಾಸವನ್ನು ಪತ್ರವೊಂದರಲ್ಲಿ (೧೫.೨.೧೯೦೦) ವ್ಯಕ್ತಪಡಿಸಿದ್ದಾರೆ, ಸ್ವಾಮೀಜಿ.(''ಅಲ್ಲಾಡಿಸುವೆನು'' ಎಂದಲ್ಲ, ''ಅಲ್ಲಾಡಿಸುವೆವು'' ಎಂದಿರುವುದು ಗಮನಾರ್ಹ). ಆ ವಿಶ್ವಾಸ ತಕ್ಕಮಟ್ಟಿಗಾದರೂ ಸಾರ್ಥಕವಾಯಿತು; ಭಾರತೀಯ ಸಮಾಜವನ್ನು ಹೊಸ ಅಡಿಗಲ್ಲಿನ ಮೇಲೆ ನಿಲ್ಲಿಸಿದವರಲ್ಲವೆ, ಗುರು–ಶಿಷ್ಯಂದಿರು!

೨೮.೩.೧೯೦೦ರ ಒಂದು ಪತ್ರದಲ್ಲಿ ಹೇಳುತ್ತಾರೆ, ಸ್ವಾಮೀಜಿ: ''ನಿನ್ನ ಒಳ್ಳೆಯ ಅದೃಷ್ಟವನ್ನು ನೋಡಿ, ನನಗೆ ತುಂಬಾ ಆನಂದವಾಗಿದೆ. ನಾವು ಸ್ಥಿರವಾಗಿದ್ದರೆ, ಪ್ರತಿಯೊಂದು ಅನುಕೂಲವಾಗಿ ಪರಿವರ್ತನವಾಗುವುದು. ಪ್ರತಿಯೊಂದೂ ಸರಿಯಾಗಿ ಆಗಿಯೇ ತೀರಬೇಕು. (ಕಾವ್ಯಾತ್ಮಕವಾದ ಉಕ್ತಿ:) ಬೀಜವು ಭೂಮಿಯ ಒಳಗೆ ನಾಶವಾಗಿ, ಅನಂತರ ಮರವಾಗಿ ಹೊರಬರಬೇಕು.''

೨೬.೫.೧೯೦೦ರ ಒಂದು ಪತ್ರದಲ್ಲಿ ಹಿತವಚನ ನುಡಿಯುತ್ತಾರೆ, ಸ್ವಾಮೀಜಿ: ''ಸ್ಥಿರವಾಗು, ಮಗು. ಹೊನ್ನು ಮತ್ತು ಇತರ ಪ್ರಲೋಭನೆಗಳಿಗೆ ಮರುಳಾಗಬೇಡ.''

''ನೀನು ಪ್ರಚಂಡ ಭಾರವನ್ನು ಹೊರಲು ಸಿದ್ಧಳಾಗಿದ್ದರೆ, ಅಗತ್ಯವಾಗಿ ಭುಜ ನೀಡು'' ಎಂದು ಒಂದೆಡೆ (೬.೧೨.೧೮೯೯) ಶಿಷ್ಯೆಯನ್ನು ಉತ್ತೇಜಿಸುತ್ತಾರೆ, ಸ್ವಾಮೀಜಿ. ''ಈಗ ಮಹಾಕಾರ್ಯಗಳನ್ನು ಮಾಡಬೇಕಾಗಿದೆ'' ಎಂದು ಹೊಣೆಯನ್ನು ನೆನಪು ಮಾಡುತ್ತಾರೆ. (೨೮.೮.೧೯೦೦)

''ಭರತಖಂಡದಲ್ಲಿ ನಿನಗೆ ದೊಡ್ಡ ಭವಿಷ್ಯವಿದೆ'' ಎಂದು ನಿವೇದಿತಾಳಿಗೆ ಸ್ವಾಮೀಜಿಯ ಪ್ರವಾದಿ ವಾಣಿ.(೨೩.೭.೧೮೯೭)

ಭಾರತೀಯ ಸ್ತ್ರೀಯರನ್ನು ಕುರಿತು ನಿವೇದಿತಾಳನ್ನು ಅವರ ಆದರ್ಶವನ್ನಾಗಿ, ಪರಮ ಪ್ರತಿನಿಧಿಯನ್ನಾಗಿ ಪರಿಗಣಿಸಿ, ಸ್ವಾಮೀಜಿ ಆಡಿರುವ ಈ ಮಾತುಗಳು ಬಹಳ ಮೌಲಿಕವಾದವು: ''ಭಾರತೀಯರಿಗೆ ಅದರಲ್ಲೂ ಭಾರತದ ಮಹಿಳೆಯರಿಗಾಗಿ ಕೆಲಸ ಮಾಡುವುದಕ್ಕೆ ಬೇಕಾಗಿರುವುದು ಪುರುಷನಲ್ಲ, ಸ್ತ್ರೀ, ನಿಜವಾದ ಸ್ತ್ರೀ, ಸಿಂಹಿಣಿ. ಭರತಖಂಡ ಇನ್ನೂ ಮಹಾಮಹಿಳೆಯರನ್ನು ಹೆತ್ತಿಲ್ಲ. ಬೇರೆ ದೇಶಗಳಿಂದ ಅವರನ್ನು ಎರವಲು ತೆಗೆದುಕೊಳ್ಳಬೇಕಾಗಿದೆ. ನಿನ್ನ ವಿದ್ಯೆ, ನಿಷ್ಕಾಪಟ್ಯ, ಪಾವಿತ್ರ್ಯತೆ, ಅನಂತ ಪ್ರೀತಿ, ಸ್ಥಿರ ಸಂಕಲ್ಪ, ಎಲ್ಲಕ್ಕಿಂತ ಹೆಚ್ಚಾಗಿ ನಿನ್ನ ನಾಡಿಯಲ್ಲಿ ಸಂಚರಿಸುವ ಕೆಲ್ಟ್ ಜನಾಂಗದ ರಕ್ತ ನಮಗೆ ಬೇಕಾದ ಮಹಿಳೆಯನ್ನಾಗಿ ಮಾಡಿದೆ.'' (೨೩.೭.೧೮೯೭). ಇಷ್ಟಾಗಿಯೂ, ''ತೊಂದರೆಗಳು ಹಲವಿವೆ'' ಎಂದು ಎಚ್ಚರಿಸಿ, ''ಅನನುಕೂಲಗಳಿಗೂ ನೀನು ನಿರ್ಧಾರ ಮಾಡಿದ್ದರೆ ಬರಬಹುದು'' ಎನ್ನುತ್ತಾರೆ (ಅಲ್ಲೇ). ಇಲ್ಲಿ ನಿವೇದಿತಾಳಿಗೆ ಸಂದಿರುವ ಪ್ರಶಂಸೆ ಎಣೆಯಿಲ್ಲದ್ದು!

ಪತ್ರವೊಂದರಲ್ಲಿ (೫.೫.೧೮೯೬) ನಿವೇದಿತಾಳನ್ನು ಸ್ವಾಮೀಜಿ ''ಪ್ರಿಯ, ಗಂಭೀರ, ಕರುಣಾಳು ಗೆಳತಿ'' ಎಂದು ಸಂಬೋಧಿಸಿ, ''ನಾವು ಭಾರತೀಯರಿಗೆ ಎಷ್ಟೋ ವಿಷಯಗಳು ತಿಳಿದಿರುವುದಿಲ್ಲ; ಆದರೆ ಘನತೆಯಲ್ಲಿ ನಮ್ಮನ್ನ ಮೀರಿಸುವವರು ಪ್ರಪಂಚದಲ್ಲಿ ಯಾರೂ ಇಲ್ಲ'' ಎಂದು ಹೇಳಿ, ''ಕೃತಜ್ಞತಾಪೂರ್ವಕವಾಗಿ ಎಂದಿಗೂ ನಿನ್ನವನು'' ಎಂದು ಮುಗಿಸುತ್ತಾರೆ. ಇನ್ನು ಕೆಲವು ಪತ್ರಗಳಲ್ಲಿ, ''ಎಂದಿಗೂ ಭಗವಂತನಲ್ಲಿ ನಿನ್ನವನಾದ, ಪೂರ್ಣ ಪ್ರೀತಿ ಮತ್ತು ಆಶೀರ್ವಾದಗಳೊಂದಿಗೆ'' ಇತ್ಯಾದಿ ಮುಕ್ತಾಯದ ಮಾತುಗಳಿವೆ. ವಿವೇಕಾನಂದ-ನಿವೇದಿತಾರ ಸಂಬಂಧ ಏಕಮುಖವಾದುದಲ್ಲ, ಲೌಕಿಕವಾದದೂ ಅಲ್ಲ!

೪

ಇನ್ನು, ನಿವೇದಿತಾಳಿಗೆ ಬರೆದ ಪತ್ರಗಳ ನೆಪದಲ್ಲಿ ಇಡೀ ಲೋಕಕ್ಕೆ ಕೊಟ್ಟ ಮಹಾಸೂಕ್ತಿಗಳಾಗಿವೆ, ಸಂದೇಶಗಳಾಗಿವೆ, ಕರೆಗಳಾಗಿವೆ ಸ್ವಾಮೀಜಿಯ ಕೆಲವು ಹೇಳಿಕೆಗಳು: ''ಜಗತ್ತಿಗೆ ಬೇಕಾಗಿರುವುದು ಶುದ್ಧ ಚಾರಿತ್ರ್ಯ. ಯಾರ ಜೀವನದಲ್ಲಿ ನಿರಂತರ ಪ್ರೇಮ, ನಿಃಸ್ವಾರ್ಥ, ತ್ಯಾಗಗಳು ನಂದಾದೀಪಗಳಂತೆ ಉರಿಯುತ್ತಿವೆಯೋ ಅಂತಹ ಪುಣ್ಯಾತ್ಮರು ಜಗತ್ತಿಗೆ ಬೇಕಾಗಿದ್ದಾರೆ... ನಮಗೆ ಇಂದು ಬೇಕಾಗಿರುವುದು ಧೀರ ನುಡಿ, ಧೀರತರ ಕಾರ್ಯ. ಮಹಾವ್ಯಕ್ತಿಗಳೇ ಏಳಿ! ಜಾಗೃತರಾಗಿ!''(೭.೬.೧೮೯೬); ''ಪಾವಿತ್ರ್ಯ, ತಾಳ್ಮೆ ಮತ್ತು ದೃಢಪ್ರಯತ್ನ - ಇವು ವಿಘ್ನಗಳನ್ನು ಜಯಿಸುತ್ತವೆ.'' (೪.೧೦.೧೮೯೫)

ಒಂದು ಮುಖ್ಯ ಸಂಗತಿಯೆಂದರೆ, ಸ್ವಾಮೀಜಿ ತಮ್ಮ ಅಭಿಪ್ರಾಯಗಳನ್ನು ಎಂದೂ ನಿವೇದಿತಾಳ ಮೇಲೆ ಹೇರದೆ, ಅವಳಿಗೆ ಪೂರ್ಣ ಸ್ವಾತಂತ್ರ್ಯ ಕೊಟ್ಟುಬಿಡುವುದು. ಅವರ ಸಾಮರ್ಥ್ಯದಲ್ಲಿ, ವಿವೇಚನೆಯಲ್ಲಿ ಅವರಿಗೆ ಅಷ್ಟೊಂದು ನಂಬಿಕೆ, ಭಿನ್ನಾಭಿಪ್ರಾಯಗಳಿಗೆ ಅವಕಾಶವಿಲ್ಲ! ಈ ಉಕ್ತಿಗಳನ್ನು ನೋಡಬಹುದು: ''ನೀನು ಸ್ವತಂತ್ರಳು, ನಿನಗೆ ಇಷ್ಟ ಬಂದ ಕೆಲಸ ಮಾಡು; ನಿನ್ನದೇ ಆದ ಕೆಲಸವನ್ನು ಮಾಡು.''(೧೫.೮.೧೯೦೦); ''ಒಂದು ಸಂಸ್ಥೆಯನ್ನು ತೆರೆಯುವ ನಿನ್ನ ನಿರ್ಧಾರವನ್ನು ನಾನು ಸಂಪೂರ್ಣ ಒಪ್ಪುತ್ತೇನೆ. ನೀನು ಮುಂದೆ ಮಾಡುವ ಪ್ರತಿಯೊಂದಕ್ಕೂ ನನ್ನ ಒಪ್ಪಿಗೆಯಿದೆಯೆಂಬುದರಲ್ಲಿ ಸಂದೇಹ ಬೇಡ. ನಿನ್ನ ಶಕ್ತಿ ಮತ್ತು ಸಹಾನುಭೂತಿಯಲ್ಲಿ ನನಗೆ ಸಂಪೂರ್ಣ ಭರವಸೆಯಿದೆ.''(೪.೭.೧೮೯೬); ''ನೀನು ಇಲ್ಲಿಗೆ ಬರುವುದಕ್ಕಿಂತ ಇಂಗ್ಲೆಂಡಿನಲ್ಲಿಯೇ ಇದ್ದು ನಮಗಾಗಿ ಹೆಚ್ಚು ಕೆಲಸಗಳನ್ನು ಮಾಡಬಹುದು.''(೨೩.೭.೧೮೯೭); ''ನೀನು ಚೆನ್ನಾಗಿ ಕೆಲಸ ಮಾಡುತ್ತಿರುವೆಯೆಂದು ಎಲ್ಲಿಯವರೆಗೆ ನಿನಗೆ ಅನಿಸುತ್ತದೋ ಅಲ್ಲಿಯವರೆಗೂ ನೀನು ಇಂಗ್ಲೆಂಡಿನಲ್ಲಿ ಇರಬಹುದು.'' (೪.೪.೧೯೦೧)

ಸ್ವಾಮೀಜಿಯ ಈ ನುಡಿಗಳನ್ನು ಲೆಕ್ಕಿಸಬೇಕು: ''ನಿನ್ನ ಶಾಲೆಗೆ ಹಣ ಒದಗಿ ಬರುವುದು. ಎಂದಿಗೂ ಅಂಜಬೇಡ.'' (೨೮.೧೨.೧೮೯೯); ''ಅಂತರರಾಷ್ಟ್ರೀಯ ಯೋಜನೆ ಒಳ್ಳೆಯದು. ಅದಕ್ಕೆ ಸೇರಲು ಯಾವ ಅಡ್ಡಿಯೂ ಇಲ್ಲ. ನಿನ್ನ ಮೂಲಕ ಕೆಲವು ಭಾರತೀಯ ಸ್ತ್ರೀಯರು ಸಂಸ್ಥೆಯನ್ನು ಸೇರುವಂತೆ ಮಾಡಲು ಮಧ್ಯವರ್ತಿಯಾಗು'' ; ''ನೀನು ನಿನ್ನ ಶಿಕ್ಷಣವನ್ನು ಪಡೆಯುತ್ತಿರುವೆ - ಅಷ್ಟೇ ನನಗೆ ಬೇಕಾಗಿರುವುದು. ನಾನೂ ಹಾಗೆಯೆ'' ; ''ಜಗನ್ಮಯಿಯನ್ನು ಪ್ರಾರ್ಥಿಸು'' ; ''ಒಳ್ಳೆಯದೊ, ಕೆಟ್ಟದ್ದೊ ನಮ್ಮ ಪಾತ್ರವನ್ನು ಇಲ್ಲಿ ನಟಿಸಬೇಕಾಗಿದೆ''; ''ಹೆಚ್ಚು ಭಾವುಕತೆಯನ್ನು ಹೊಂದಿದ್ದರೆ ಕೆಲಸಕ್ಕೆ ತಡೆಯುಂಟಾಗುವುದು. 'ಉಕ್ಕಿನಷ್ಟು ಗಟ್ಟಿ, ಹೂವಿನಷ್ಟು ಮೃದು'- ಇದೇ ಉದ್ದೇಶವಾಗಿರಬೇಕು.''

ಭವ್ಯಾದ್ಭುತ ಚೇತನ, ಸ್ವಾಮೀಜಿ. ಅವರು ಒಂದು ಪತ್ರದಲ್ಲಿ (೨೬.೫.೧೯೦೦) ತಮ್ಮನ್ನು ಬಣ್ಣಿಸಿಕೊಂಡಿರುವ ಪರಿ ವಿಶಿಷ್ಟ; ''ಅಂಜಿಕೆಗೆ ಅಂಜಿಕೆ ನಾನು. ಭಯಕ್ಕೆ ಭಯ ನಾನು. ನಿರ್ಭೀತನೂ ನಾನು. ಅದ್ವೈತಿಯು ನಾನು. ವಿಧಿಯನ್ನಾಳುವವನು ನಾನು. ಇರುವುದನ್ನು ಅಳಿಸುವವನು ನಾನು.''

ಸ್ವಾಮಿ ವಿವೇಕಾನಂದರು ಭಗಿನಿ ನಿವೇದಿತಾಳ ಪಾಲಿಗೆ 'ಗುರು' ಮಾತ್ರವಾಗಿದ್ದರು. (ತಂದೆ ಎಂಬ ಅರ್ಥವೂ 'ಗುರು' ಎಂಬ ಶಬ್ದಕ್ಕೆ ಉಂಟಷ್ಟೆ). ಆದರೆ ನಿವೇದಿತಾ ಸ್ವಾಮೀಜಿಯ ಪಾಲಿಗೆ ಅಂತರಂಗದ ಶಿಷ್ಯೆ ಮತ್ತು ಬಹಿರಂಗ ಪ್ರಾಣ ಆಗಿದ್ದರು, ಮಾತ್ರವಲ್ಲ, ಅದಕ್ಕಿಂತ ಮಿಗಿಲಾಗಿದ್ದರು ಎಂಬುದು ವಿವೇಕ ಪತ್ರಗಳಲ್ಲಿ ಸೂಕ್ಷ್ಮದೃಷ್ಟಿಗಷ್ಟೆ ಪ್ರಕಟ!

ಆ ನಿವೇದಿತ ಚೇತನಕ್ಕೆ ಅನಂತ ನಮನ! 

